# ಶ್ರೀ ಮನ್ಮಾಧ್ವಮಾರ್ಗದರ್ಶಿ

ಕ್ರಮ ಸಂಖ್ಯೆ **1246**

## ಸತ್ಸಂಪ್ರದಾಯ ಬಾಲಬೋಧೆ

### ದ್ವಿತೀಯ ಭಾಗ * ಕೈವಲ್ಯ ಸಾಧನೆ



ಮುಕ್ತಿಮಂಟಪಕೊಯ್ಯೋ ಅಂಬಿಗ



ಕೇಳಯ್ಯ ಎನಮಾತು ಪಾರ್ಥನೇ ಗೀತದರ್ಥವ



ಮುಕ್ತಿಸೋಪಾನ



ಗುರುದ್ವಾರ ಮೂಲಕ
ಹರಿದ್ವಾರ

**ಸುದರ್ಶನ ಕಲಾಮಂದಿರ**
ನಂ.64ಎ, 5ನೇ ಅಡ್ಡರಸ್ತೆ, 3ನೇ ಮುಖ್ಯರಸ್ತೆ, ಚಾಮರಾಜಪೇಟೆ,
ಬೆಂಗಳೂರು-560 018. ಕರ್ನಾಟಕ ರಾಜ್ಯ





ಅಸಿನಾ ತತ್ತ್ವಮಸಿನಾ ಪರಜೀವ ಪ್ರಭೇದಿನಾ
ವಿದ್ಯಾರಣ್ಯಮಹಾರಣ್ಯಂ ಅಕ್ಷೋಭ್ಯಮುನಿರಚ್ಛಿನತ್

ಶ್ರೀವೇದಾಂತದೇಶಿಕರ್

ವಿಜಯಸ್ಥಂಭ ಮುಳಬಾಗಿಲು

ಅಕ್ಷೋಭ್ಯಪ್ರತಿಷ್ಠಾ ಶ್ರೀನರಸಿಂಹದೇವರು,
ಮುಳಬಾಗಿಲು



ಈ ಘಟನ ಆ ಕಾಲದ ವಿದ್ಯಾರಣ್ಯ ದಾಖಲೆಗಳಲ್ಲಿ
ಮತ್ತು ಮೈಸೂರು ಗೆಜೆಟ್‌ನಲ್ಲಿಯೂ ಇದೆ.
Archeological Annual Report dt.30-6-1698
by Mr.L.Rice, Director of Archeology in Mysore

ಶ್ರೀರಂಗಕ್ಷೇತ್ರದಲ್ಲಿದ್ದ ಶ್ರೀವೇದಾಂತ ದೇಶಿಕಾಚಾರ್ಯರು
ಶ್ರೀಮದಕ್ಷೋಭ್ಯತೀರ್ಥರು ಹಾಗೂ ಶ್ರೀ ವಿದ್ಯಾರಣ್ಯರ 'ತತ್ತ್ವಮಸಿ' ವಾಕ್ಯಾರ್ಥ ವಾದವಿವಾದದಲ್ಲಿ
ಶ್ರೀಮದಕ್ಷೋಭ್ಯತೀರ್ಥರು ಜಯಶೀಲರಾದರೆಂಬ ಅಭಿಪ್ರಾಯವನ್ನು ಕೊಟ್ಟರು.



**ಪ್ರಚಂಡ ಸರ್ಪದ ರೂಪವತಾಳ್ದಂದು ಭಯಪಟ್ಟರಂದು । ದಯದಿಪಾಲಿಸೋ ಜಯತೀರಥರಾಯ**

ವಿಷಯಭೋಗದ ತೃಣಕೆ ಉರಿಯಾಗಿ ಇರಬೇಕು - ದಾಸವಾಣಿ

ವಿಷಯವನ್ನು ಬಿಡುವುದು ವೈರಾಗ್ಯವಲ್ಲ, ವಿಷಯದಿಂದ ವಿಕಾರ ಹೊಂದದೇ ಇರುವುದು ವೈರಾಗ್ಯ
ಎಂದು ಅವರು ಹೇಳಿದ್ದನ್ನು ಅನುಷ್ಠಾನ ಮಾಡಿ ತೋರಿಸಿದ ಮಹಾಮಹಿಮರು. (- ಪ್ರಮೇಯದೀಪಿಕಾ)

ಅಕ್ಷರ ಜೋಡಣೆ ಮತ್ತು ಮುದ್ರಣ : ಪ್ರಿಂಟ್ ಮೀಡಿಯಾ, ಚಾಮರಾಜಪೇಟೆ, ಬೆಂಗಳೂರು-560018. ದೂ. : 26618852, 26916798

॥ ಶ್ರೀ ಹರಿಸರ್ವೋತ್ತಮ ॥

# ಶ್ರೀ ಮನ್ಮಾಧ್ವಮಾರ್ಗದರ್ಶಿ

## ಸತ್ಸಂಪ್ರದಾಯ ಬಾಲಬೋಧೆ

### ದ್ವಿತೀಯ ಭಾಗ * ಕೈವಲ್ಯ ಸಾಧನೆ

ಕ್ರಮ ಸಂಖ್ಯೆ





ಮುಕ್ತಿಮಂಟಪಕೊಯ್ಯೋ ಅಂಬಿಗ





ಕೇಳಯ್ಯ ಎನಮಾತು ಪಾರ್ಥನೇ ಗೀತದರ್ಥವ



ಗುರುದ್ವಾರ ಮೂಲಕ
ಹರಿದ್ವಾರ

ಸುದರ್ಶನ ಕಲಾಮಂದಿರ
ನಂ.64ಎ, 5ನೇ ಅಡ್ಡರಸ್ತೆ, 3ನೇ ಮುಖ್ಯರಸ್ತೆ, ಚಾಮರಾಜಪೇಟೆ,
ಬೆಂಗಳೂರು-560 018. ಕರ್ನಾಟಕ ರಾಜ್ಯ

ಭಾಗವತ ಶಿರೋಮಣಿ

# ಶ್ರೀಯಾದವಾರ್ಯರು



ಸಜ್ಜನರ ಸಹವಾಸ ಮಾಡುವುದೇ ಶ್ರೀಮದ್‌ಭಾಗವತ ತೃತೀಯ ಸ್ಕಂದದಲ್ಲಿ
ಹೇಳಿರುವ ಮುಖ್ಯ ಸಾರಾಂಶ

**ಅಗ್ರತೋ ನಾರಸಿಂಹಶ್ಚಪೃಷ್ಠತೋ ಗೋಪಿನಂದನಃ ।**
**ಉಭಯೋ ಪಾರ್ಶ್ವಯೋರಾಸ್ತಾಂ ಸಶರೌ ರಾಮಲಕ್ಷ್ಮಣೌ**

ನನ್ನ ಮುಂದೆ ನಾರಸಿಂಹ, ಹಿಂದೆ ಗೋಪಿನಂದನ, ಎಡಬಲಗಳಲ್ಲಿ ಬಾಣಬಿಲ್ಲು
ಹಿಡಿದಿರುವ ಶ್ರೀರಾಮಲಕ್ಷ್ಮಣರು ಇದ್ದು, ನನ್ನನ್ನು ರಕ್ಷಿಸುತ್ತಾರೆ,
ಎಂದು ಶ್ರೀಯಾದವಾರ್ಯರು ಹೇಳಿಕೊಂಡು ಹೊರಗಡೆಗೆ ಹೋಗುತ್ತಿದ್ದರು.
ಅದನ್ನು ಜ್ಞಾಪಿಸಿಕೊಂಡು ನಾವು ಹೇಳಿಕೊಂಡು ಹೋಗತಕ್ಕದ್ದು.

ನ ಮಾಧವನಸಮೋ ದೇವೋ ನ ಚ ಮಧ್ವ ಸಮೋ ಗುರುಃ ।
ನ ತದ್ವಾಕ್ಯಸಮಂ ಶಾಸ್ತ್ರಂ ನ ಚ ತಸ್ಯ ಸಮಃ ಪುಮಾನ್



॥ ಪ್ರಥಮೋ ಹನುಮಾನ್ನಾಮ ದ್ವಿತೀಯೋ ಭೀಮ ಏವ ಚ ॥
॥ ಪೂರ್ಣಪ್ರಜ್ಞಸ್ತೃತೀಯಸ್ತು ಭಗವತ್ಕಾರ್ಯಸಾಧಕಃ ॥

ಬ್ರಹ್ಮನಿಷ್ಠಾಃ ವಾಸುದೇವಾಖ್ಯಗುರುವಃ

ಭಜ ಮಧ್ವೇಶಂ
ಭಜ ಮಧ್ವೇಶಂ
ಭಜಮಧ್ವೇಶಂ
ಪ್ರೌಢಮತೇ



ಜನನ:1904 ನಿರ್ಯಾಣ:1988

ಸಂಕಟ ಸಮಯೇ
ಸಮ್ಯಕ್ ಪ್ರಾಪ್ತೇ
ನಹಿ ನಹಿ ರಕ್ಷತಿ
ಜೀವಾತ್ಮೈಕ್ಯಂ

ಶ್ರೀನೃಪ ಶಾಲಿವಾಹನಶಕ
೧೯೨೬ಕ್ಕೆ ಸಲ್ಲುವ
ಶ್ರೀತಾರಣಸಂವತ್ಸರ
ಅಧಿಕಶ್ರಾವಣ ಶುಕ್ಲಪಕ್ಷ
ದ್ವಿತೀಯಾ ಆಶ್ಲೇಷಾ ನಕ್ಷತ್ರ
ಸಿದ್ಧಿಯೋಗ, ಕೌಲವಕರಣ
ಸೋಮವಾರ ೧೯-೭-೨೦೦೪
ಪ್ರಥಮ ಮುದ್ರಣ : 1000 ಪ್ರತಿಗಳು

ಶ್ರೀನೃಪ ಶಾಲಿವಾಹನಶಕ
1930ಕ್ಕೆ ಸಲ್ಲುವ
ಶ್ರೀಸರ್ವಧಾರಿನಾಮ ಸಂವತ್ಸರ
ಜ್ಯೇಷ್ಠ ಶುದ್ಧ ತ್ರಯೋದಶಿ
ಸಿದ್ಧ ಯೋಗ, ತೈತಲೆ ಕರಣ
ಶ್ರೀಶ್ರೀಪಾದರಾಜರ
ಆರಾಧನಾ ಮಹೋತ್ಸವ
ಸೋಮವಾರ 16-6-2008
ದ್ವಿತೀಯ ಮುದ್ರಣ : 1000 ಪ್ರತಿಗಳು

ಕೀರ್ತಿಶೇಷ ನ್ಯಾಯ ವೇದಾಂತ ವಿದ್ವಾನ್
ನಿರಂತರ ಪ್ರವಚನಾಚಾರ್ಯ ಎಲೆಯಮರೆಯಕಾಯಿ
ನನ್ನ ವಿದ್ಯಾಗುರುಗಳಾದ
ವೀರ ವೈಷ್ಣವ, ನುಡಿದಂತೆ ನಡೆದ, ಶಿಕ್ಷಣ ದೀಕ್ಷಾಪಟು
ವಿದ್ವಾನ್ ಪೂಜ್ಯ ಯಲಮೇಲಿ ವಾಸುದೇವಾಚಾರ್ಯರು
ಇವರ ಸವಿನೆನಪಿಗೆ



ಪೂಜ್ಯ ಯಲಮೇಲಿ
ಆಚಾರ್ಯರ ಶಿಷ್ಯ
ದ್ವಾರಕಾನಾಥ ದಾನಿ
(ಎಸ್.ಜಿ ದ್ವಾರಕಿ)

# ಸಮರ್ಪಣೆ

ವಿದ್ಯಾವಿನಯ ಸಂಪನ್ನಾನ್ ಶಾಂತ್ಯಾದಿಗುಣಬೃಂಹಿತಾನ್
ಸಚ್ಛಾಸ್ತ್ರಪ್ರವಚನಾಸಕ್ತಾನ್ ಯಲಮೇಲ್ಯಾರ್ಯಾನ್ ಗುರೂನ್ ಭಜೇ



ಶ್ರೀಮೂಲಪಟ್ಟಾಭಿರಾಮದೇವರು



ಶ್ರೀವಿದ್ಯಾರತ್ನಾಕರ ತೀರ್ಥರು
(ಗ್ರಂಥಕರ್ತರು)



ರಾಜಾದಿರಾಜ ಸಂಪೂಜ್ಯ ಸರ್ವ ವೈಷ್ಣವ ಶೇಖರ
ಗಜಗಹ್ವರ ಕರ್ನಾಟಕ ಸಿಂಹಾಸನ ಗತಪ್ರಭೋ



ಶ್ರೀವಿದ್ಯಾವಾರಿಧಿ ತೀರ್ಥರು
(ಗೂಡಚೇತಸ ತಪಸ್ವಿಗಳು)



ಶ್ರೀವಿದ್ಯಾಪ್ರಸನ್ನತೀರ್ಥರು
(ಗ್ರಂಥಕರ್ತರು)



ಶ್ರೀವಿದ್ಯಾಪಯೋನಿಧಿ ತೀರ್ಥರು
(ಆರಬ್ಧಾಂತಗಾಮಿಗಳು)



ಶ್ರೀವಿದ್ಯಾವಾಚಸ್ಪತಿ ತೀರ್ಥರು
(ಶ್ರೀಮದ್‌ಭಾಗವತ ವ್ಯಾಖ್ಯಾನಸಹಿತ ಕಂಠಪಾಠಸ್ಥರು)

ಶ್ರೀಮಧ್ವನುಮಧ್ಭೀಮಮಧ್ವಾಂತರ್ಗತ
ಶ್ರೀರಾಮಕೃಷ್ಣವೇದವ್ಯಾಸಾತ್ಮಕ ಶ್ರೀ ಲಕ್ಷ್ಮೀ ಹಯಗ್ರೀವಾಯ ನಮಃ

## - ಪೀಠಿಕಾ ಪ್ರಕರಣ -

# ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡಿ ಬಿಟ್ಟು ಕೆಡಬೇಡಿ

## ಏಕಾದಶೀಗೆ ಸಮವಾದ ಸಕಲ ಪಾಪನಾಶಕವಾದ
## ಬೇರೆ ವ್ರತವೇ ಇಲ್ಲಾ

## ವಾಯುಮತದ ಪಕ್ಷದ ಜನರ
## ಸತ್ಸಾಧನೆಯ ಮುಖ್ಯ ಅನುಷ್ಠಾನಕ್ಕಾಗಿ
## ಅತ್ಯಗತ್ಯ ಮೂಡಿಸಲು ಮೀಸಲು

ಮತ್ತು





# ಮುಕ್ತಿಮಾರ್ಗ ಮಾರ್ಗದರ್ಶಕ ಪದ್ಧತಿ

ಈ ಸತ್ಸಂಪ್ರದಾಯ ಪಾಠಗಳನ್ನು
ನಿಮ್ಮ ಪರಿವಾರದವರೆಲ್ಲರೂ ಪ್ರತಿ ದಿನ ತಪ್ಪದೇ ಓದಿ
ಕಂಠಪಾಠ ಮಾಡಿ, ಮನನ ಮಾಡಿ, ಅನುಷ್ಠಾನ ಮಾಡಿ

ಶ್ರೀಹರಿವಾಯುಗಳ ಕೃಪೆಗೆ ಪಾತ್ರರಾಗಿರಿ

॥ ಶ್ರೀ ಮಧ್ವೇಶಾರ್ಪಣಮಸ್ತು ॥

ಶ್ರೀ ಬ್ರಹ್ಮಣ್ಯತೀರ್ಥಕೃಪ

॥ ಶ್ರೀವಾದಿರಾಜಾಯ ನಮಃ ॥ ॐ ॥ ಶ್ರೀ ಭೂತರಾಜಾಯ ನಮಃ ॥

ಈ ಪ್ರಕಾಶನ ವೈಷ್ಣವರಿಗೆ ಮಾತ್ರ

# ಶ್ರೀ ಮನ್ಮಾಧ್ವಮಾರ್ಗದರ್ಶಿ

## ಸತ್ಸಂಪ್ರದಾಯ ಬಾಲಬೋಧೆ

## ದ್ವಿತೀಯ ಭಾಗ - ಕೈವಲ್ಯ ಸಾಧನೆ



ನವನಾರಿ ಕುಂಜರ

ಪ್ರಕಾಶನ



ಪಂಚನಾರಿ ತುರಗ

**ಸುದರ್ಶನ ಕಲಾಮಂದಿರ**

ನಂ.64ಎ, 5ನೇ ಅಡ್ಡರಸ್ತೆ, 3ನೇ ಮುಖ್ಯರಸ್ತೆ,

ಚಾಮರಾಜಪೇಟೆ, ಬೆಂಗಳೂರು-560 018

ಕರ್ನಾಟಕ ರಾಜ್ಯ

ನಿಮ್ಮ ವಿಳಾಸ ಬರೆದುಕೊಳ್ಳಿ

ಹೆಸರು [illegible]

ಮನೆ ನಂ [illegible] ಮುಖ್ಯರಸ್ತೆ [illegible] ಅಡ್ಡರಸ್ತೆ

ಬಡಾವಣೆ [illegible], ಊರು [illegible], ರಾಜ್ಯ [illegible]

ಈ ಪುಸ್ತಕ ನಿಮಗೆ ತಲುಪಿದ್ದಕ್ಕೆ ನಿಮ್ಮ ಅಭಿಪ್ರಾಯದೊಂದಿಗೆ ಉತ್ತರ ಬರೆಯಿರಿ

ಈ ಜ್ಞಾನಯಜ್ಞಕ್ಕೆ ನಿಮ್ಮ ಭಾಗದ ಕಾಣಿಕೆ ರೂ.60/-

ಪರಸ್ಥಳಗಳಿಗೆ ಅಂಚೆವೆಚ್ಚ ಸಹಿತ ರೂ.80/-

ಈ ಹಣವು ಪುನಃ ಇನ್ನೊಬ್ಬರ ಜ್ಞಾನದಾನಕ್ಕೆ ಕಾರಣ - ನಿಮಗೆ ಭಗವದನುಗ್ರಹ ಲಾಭ

# ವಿಷಯಸೂಚಿ

## ದಾಯಾದಿಗಳಿಗೆ ಆಸ್ತಿ ಭಾಗ

ನಮ್ಮ ಹಿರಿಯರು ಕೊಟ್ಟ ದೈವೀ ಸಂಪತ್ ಎಂಬ ಜ್ಞಾನ ಭಂಡಾರದ ಅಪಾರವಾದ ಆಸ್ತಿಯಲ್ಲಿ ಒಂದು ಸಣ್ಣ ಪೆಟ್ಟಿಗೆ ತೆಗೆದುಕೊಟ್ಟಿರುತ್ತದೆ. ಅದನ್ನು ಸಾಧಕರಾದ ಸಾತ್ವಿಕರು ಅಪವ್ಯಯ ಮಾಡದೇ ಸರಿಯಾಗಿ ಉಪಯೋಗಿಸಿಕೊಂಡು ಶ್ರೀಹರಿವಾಯುಗುರುಗಳ ಕೃಪೆಯಿಂದ ಐಹಿಕ ಆಮುಷ್ಮಿಕ ಫಲವನ್ನು ಪಡೆದುಕೊಳ್ಳಿ.



ಜ್ಞಾನೋದಯಕ್ಕೆ ಮುಂಚೆ ಇದ್ದ ಆ–ಅವ್ಯವಸ್ಥೆ



ಶ್ರೀ ಬಾಲಕೃಷ್ಣ



ಜ್ಞಾನೋದಯವಾದ ಮೇಲೆ ಇರುವ ಈ–ಸುವ್ಯವಸ್ಥೆ

ಶ್ರೀವಿಶ್ವಂಭರಾಯನಮಃ

# ಅವತರಣಿಕೆ

ಹಯಮುಖಾಭಿದ ಹರಿಯು ನಮಗೆ ಕಲ್ಯಾಣವಂ ಗೈಯಲಿ
ಶ್ರೀಮಧ್ವನಾಮ ಗುರುಗಳು ನಮಗೆ ಸರ್ವದಾ ವರವಂ ಕೊಡಲಿ

ಶ್ರೀಮನ್ ಮಾಧ್ವಮಾರ್ಗದರ್ಶಿ ಸತ್ಸಂಪ್ರದಾಯ ಬಾಲಬೋಧೆ ಪ್ರಥಮಭಾಗದಲ್ಲಿ ಕಂಠಪಾಠ ಮಾಡುವ ವಿಚಾರ ತಿಳಿಸಿರುತ್ತೆ. ಈಗ ದ್ವಿತೀಯ ಭಾಗದಲ್ಲಿ ಇನ್ನು ಮುಂದೆ ಜ್ಞಾನ ಭಾಗಕ್ಕೆ ಪ್ರವೇಶ. ಪರಂಪರೆಯಿಂದ ಬಂದಿರುವ ನಡೆ-ನುಡಿ-ನಂಬಿಕೆ-ಕಥೆ-ಇತಿಹಾಸ-ಆಚಾರ-ವಿಚಾರ-ಆಚರಣೆ-ಶಾಸ್ತ್ರಜ್ಞಾನ-ಸಾಧನಮಾರ್ಗ ಮುಂತಾದ ವಿಚಾರಗಳಲ್ಲಿ ಕೆಲವರ ಸಂಚಿನಿಂದ ವಂಚನೆಯಾಗಿ ಅನರ್ಥವಾಗಿ ಹೋಗುತ್ತಿರುವ ಸೂಕ್ಷ್ಮ ಪರಿಚಯವನ್ನು ತೋರಿಸಿ ಸಾಧನ ಮಾಡುವವರಿಗೆ ಸರಿಯಾದ ಹಾದಿಗೆ ಹೋಗುವಂತೆ ತೋರಿಸುವುದೇ ಈ ಸಂಗ್ರಹ ಗ್ರಂಥದ ವಿಷಯ.

ಸಾತ್ವಿಕರಾದ ಸಾಧಕರಿಗೆ ಎಂದಾದರೊಂದು ದಿನ ಲಭ್ಯವಾಗುವ ನಿರ್ದುಃಖಾನಂದಭರಿತವಾದ ಕೈವಲ್ಯ ಸ್ಥಾನಕ್ಕೆ ಹೋಗುವ ಹೆದ್ದಾರಿಯನ್ನು ತೋರುವುದೇ ಈ ಗ್ರಂಥದ ಪ್ರಯೋಜನ. ಈ ಗ್ರಂಥದ ಅವಲೋಕನದಲ್ಲಿ ತಮ್ಮ ತಮ್ಮ ಪರಿಸರಗಳ ಅನುಕೂಲದಂತೆ ತಿದ್ದಿಕೊಂಡು ಸನ್ಮಾರ್ಗಕ್ಕೆ ಬರುವವರೇ ಅಧಿಕಾರಿಗಳು. ಪಂಡಿತರಿಗೆ ಸಿಂಹಾವಲೋಕನ, ಪಾಮರರಿಗೆ ಜ್ಞಾನಲಾಭ, ತಾರತಮ್ಯಕ್ಕೆ ಅನುಗುಣವಾಗಿರುವ ಅಧಿಕಾರವೇ ಸಂಬಂಧ. ಆದ್ದರಿಂದ ಈ ಗ್ರಂಥ ಆರಂಭಣೀಯವಾದುದು.

ಸಾಧನದಲ್ಲಿ ಹಲವು ವಿಚಾರಗಳ ದೋಷಗಳನ್ನು ಸರಿಯಾಗಿ ತಿಳಿದುಕೊಂಡು ಅದನ್ನು ನಿರಾಕರಿಸಿ, ಸರಿಯಾದ ಜ್ಞಾನವನ್ನು ಪಡೆದು ಅನುಭವ ಹೊಂದುವಂತೆ ಮಾಡುವುದೇ ಈ ಗ್ರಂಥದ ವೈಶಿಷ್ಟ್ಯ. ಆದ್ದರಿಂದ ಅನುಭವದ ಅಭ್ಯಾಸವನ್ನು ಮಾಡಿ ಅದರ ಮರ್ಮವನ್ನು ತಿಳಿದುಕೊಂಡು ನಡೆವುದೇ ಸಾಧನದ ಹಾದಿ. ಈ ಗ್ರಂಥವನ್ನು ತೆಗೆದುಕೊಂಡು ಒಳಗೆ ಸುಮ್ಮನೆ ಇಟ್ಟುಬಿಡಬೇಡಿ, ಮೊದಲನೇ ಪುಟದಿಂದ ಕೊನೆಯ ಪುಟದವರೆಗೂ ಪುಸ್ತಕವನ್ನು ಒಂದು ಸಾರಿ ಪಕ್ಷಿನೋಟದಿಂದ ನೋಡಿ, ಅನಂತರ ಆಗಾಗ್ಗೆ ಆವರ್ತನ ಮಾಡುತ್ತಿದ್ದರೆ ಸ್ವಲ್ಪ ಕಾಲದ ನಂತರ ಈ ಗ್ರಂಥದ ಅಭಿಪ್ರಾಯ ಅರ್ಥವಾಗುತ್ತದೆ. ಅದಕ್ಕೋಸ್ಕರ ನೀವು ಹಾಗೆ ಮಾಡಿದರೆ ನಮ್ಮ ಶ್ರಮ ಸಾರ್ಥಕವಾಗುತ್ತದೆ. ನೀವು ಖಂಡಿತವಾಗಿ ಹೀಗೆ ಮಾಡುತ್ತೀರೆಂದು ನಂಬಿಕೊಂಡಿದ್ದೇವೆ. ಗ್ರಂಥದ ವಿಚಾರಗಳಲ್ಲಿ ನಮ್ಮ ಹಿರಿಯರಿಂದ, ಗುರುಗಳಿಂದ ಬಂದ ಆಪ್ತವಾಕ್ಯಗಳೇ ಪ್ರಮಾಣಗಳು. ವಿಚಾರಗಳಲ್ಲಿ ವಿವಕ್ಷಾ ಭೇದವಿದ್ದರೂ ಮೂಲಕ್ಕೆ ವ್ಯತ್ಯಾಸವಾಗದೇ ಇರಬೇಕಾದುದೇ ಸರಿಯಾದ ಮಾರ್ಗ. ಅದನ್ನು ಅನುಸರಿಸಿ ಆದಷ್ಟು ಮಟ್ಟಿಗೆ ನಮ್ಮ ಗುರುಗಳು ಹೇಳಿಕೊಟ್ಟದ್ದನ್ನು ಅದರಲ್ಲಿ ಜ್ಞಾಪಕವಿದ್ದಷ್ಟನ್ನೂ ಇಲ್ಲಿ ನಿರೂಪಿಸಿರುತ್ತದೆ. ಮತ್ತು ನಾನು ಈ ಗ್ರಂಥದಲ್ಲಿ ಹೇಳಿರತಕ್ಕ ವಿಚಾರಗಳನ್ನು ಅನುಷ್ಠಾನ ಮಾಡುತ್ತಾ, ಅದರ ಅನುಭವವನ್ನು ಸಾಕಷ್ಟು ಹೊಂದಿದ್ದೇನೆ. ಆದುದರಿಂದ ನೀವು ಸಹ ನಿಮ್ಮ ಯೋಗ್ಯತಾನುಸಾರ ಅನುಷ್ಠಾನಮಾಡಿ ಅನುಭವಹೊಂದಲು ಸಾಧ್ಯವಾಗುತ್ತದೆಂದು ಊಹಿಸುತ್ತೇನೆ.

ಇಂತಿ ಸಜ್ಜನರ ಪಾದರೇಣು

ಸಂಗ್ರಹಕಾರ
**ಶ್ರೀ ಗೋ. ದ್ವಾರಕನಾಥದಾನಿ ಮೌದ್ಗಲ್ಯ**
(ಎಸ್.ಜಿ.ದ್ವಾರಕಿ)

# ಉಪಕಾರ ಸ್ಮರಣೆ

'ಅಧಿಕ ಶ್ರಾವಣಮಾಸ ನಿಯಮಾಕ ಶ್ರೀರಾಧಾಪುರುಷೋತ್ತಮಾಯನಮಃ'

॥ ನಹಿಕೃತಮುಪಕಾರಂ ಸಾಧವೋ ವಿಸ್ಮರಂತಿ ॥
॥ ವರ್ಣಮಾತ್ರಂ ಗುರು ॥

ಒಂದು ಅಕ್ಷರವನ್ನು ಹೇಳಿಕೊಟ್ಟವರೂ ಸಹ ಗುರುಗಳಾಗುತ್ತಾರೆ. ಆದುದರಿಂದ ಮಾಡಿದ ಉಪಕಾರವನ್ನು ಸಾಧುಗಳಾದವರು ಮರೆಯುವಂತಿಲ್ಲ. ಇದಕ್ಕೇ ನಾವು ಸಹ ಆ ಮಾರ್ಗಕ್ಕೇ ಹೋಗುವುದು ಕರ್ತವ್ಯವಾಗಿದೆ. ಇದೇ ಮೊದಲನೇ ಪಾಠ.

ಈ ಸಂಗ್ರಹ ಕಾರ್ಯರೂಪವಾದ ಗ್ರಂಥವು ಸರ್ವಾಂಗಸುಂದರವಾಗಿ ಜ್ಞಾನಪಿಪಾಸುಗಳಿಗೆ (ತಿಳಿದುಕೊಳ್ಳುವ ಇಷ್ಟಇರುವವರಿಗೆ) ಉಣಬಡಿಸುವುದಕ್ಕೆ ನನ್ನ ಜೀವನದ ವೃದ್ಧಾಪ್ಯದಲ್ಲಿ ಅವಕಾಶವಾಗಲು, ಇದಕ್ಕೆ ಹಿನ್ನೆಲೆಯಾಗಿ ಬಹುಮಂದಿ ಗುರುಗಳು, ಸಜ್ಜನರ ಸಹವಾಸ ಮತ್ತು ಆಶೀರ್ವಾದವೇ ಕಾರಣವಾಗಿರುತ್ತೆ. ಶ್ರೀಮದ್‌ಭಾಗವತ ತೃತೀಯಸ್ಕಂಧದಲ್ಲಿ ದೇವಹೂತೀ ಕರ್ದಮ ಪ್ರಜಾಪ್ರತಿಗಳಲ್ಲಿ ಅವತಾರ ಮಾಡಿದ ಶ್ರೀಕಪಿಲದೇವರು ತಮ್ಮ ತಾಯಿಯಾದ ದೇವಹೂತೀ ದೇವಿಯವರಿಗೆ ಉಪದೇಶ ಮಾಡಿದ ಮಹಾತಾತ್ಪರ್ಯವೇನೆಂದರೆ ಸಜ್ಜನರ ಸಹವಾಸವೇ ಮುಖ್ಯ. 'ಸಜ್ಜನರ ಒಡನಾಟ ಹೆಜ್ಜೇನು ಸವಿದಂತೆ, ದುರ್ಜನರ ಒಡನಾಟ ಬಚ್ಚಲ ರೊಚ್ಚಿನಂತಿಹುದು ಸರ್ವಜ್ಞ'. ಆದ್ದರಿಂದ ನಿಮಗೂ ಸಹ ಯಾರಿಂದ ಈತರಹದ ಉಪಕಾರವಾಗಿರುತ್ತದೋ ಅವರನ್ನು ಮರೆಯಬಾರದು ಎಂದು ತಿಳಿಸಿಕೊಡುವುದೇ ಎರಡನೆಯ ಪಾಠ.

ಮೈಸೂರು ಸೀಮೆಗೆ ದೊರೆಗಳಾಗಿದ್ದ ಕೀರ್ತಿಶೇಷ ಶ್ರೀಮನ್‌ಮಹಾರಾಜ ನಾಲ್ಮಡಿ ಕೃಷ್ಣರಾಜೇಂದ್ರಒಡೆಯರ್ ಬಹದ್ದೂರ್ ಅವರ ಸ್ವಕೀಯ ಅರಮನೆ ವೈದ್ಯರಾಗಿ ಉದ್ಯೋಗ ಮಾಡಿ ಗೌರವದಿಂದ ಬಾಳಿದ ಮೌದ್ಗಲ್ಯಸ ಗೋತ್ರದ ಋಕ್ ಶಾಖಾಧ್ಯಾಯಿಗಳಾದ ನನ್ನ ಅಜ್ಜ ಮತ್ತು ಅಜ್ಜಿ ಬೆಂಗಳೂರು ದಾನಪ್ಪ ರಾಘವೇಂದ್ರರಾಯರು ಮತ್ತು ಲಕ್ಷ್ಮೀನರಸಮ್ಮನವರು, ಇವರಿಗೆ ಅನಂತ ಪ್ರಣಾಮಗಳು.

ಶ್ರೀ **ಮತ್ತು ಶ್ರೀಮತಿ ಬಿ.ಆರ್. ಶ್ರೀನಿವಾಸರಾಯರು** ಮತ್ತು **ಕಮಲಮ್ಮನವರು** ಸಾಧನ ಶರೀರ ಜನ್ಮ ಕೊಟ್ಟ ತಂದೆ ತಾಯಿಗಳು ಅವರಿಗೆ ನಮಸ್ಕಾರಗಳು.

ಶ್ರೀ **ಮತ್ತು ಶ್ರೀಮತಿ ಬಿ.ಆರ್.ಗೋಪಾಲರಾಯರು** ಮತ್ತು **ಸುಬ್ಬಮ್ಮನವರು.** ಔರಸ ಪುತ್ರನಂತೆ ಸಾಕಿ ಸಲಹಿದ ತಂದೆ ತಾಯಿಗಳು, ನನಗೆ ದತ್ತು ಸ್ವೀಕಾರ ಉಪನಯನ ಮಾಡಿ ಲಗ್ನ ಮಾಡಿಸಿ, ಶ್ರೀವಿಷ್ಣು ವೈಷ್ಣವರ ಸೇವಾಕಾರ್ಯಕ್ಕೆ ಪೂರಕವಾದ ಒಂದು ಗೃಹವನ್ನು ಮಾಡಿಕೊಟ್ಟು ಸಾಧನ ಮಾರ್ಗಕ್ಕೆ ಅನುಕೂಲ ಮಾಡಿಕೊಟ್ಟ ಉಪಕಾರಿಗಳು ಇವರಿಗೆ ನಮಸ್ಕಾರಗಳು.

ಶ್ರೀ **ಮತ್ತು ಶ್ರೀಮತಿ ಎನ್.ವಾಸುದೇವರಾಯರು** ಮತ್ತು **ರಂಗಮ್ಮನವರು.** ಗೃಹಸ್ಥಧರ್ಮ ನಡೆಸಲು ಅನುಕೂಲವಾಗುವಂತೆ, ಕನ್ಯಾವಸ್ಥೆಯಲ್ಲಿ ತಮ್ಮ ಮಗಳನ್ನು ಲಗ್ನ ಮಾಡಿಕೊಟ್ಟು ವಾಕ್ ಸಹಾಯದಿಂದ ಶ್ರೀವಿಷ್ಣುವೈಷ್ಣವರ ಸೇವಾ ಪೂರಕವಾದ ಮೇಲ್ಕಂಡ ಗೃಹವನ್ನು ಮಾಡಿಸಿಕೊಟ್ಟು ಉಪಕಾರ ಮಾಡಿದ ಮಾವ ಮತ್ತು ಅತ್ತೆಯವರು. ಇವರಿಗೆ ನಮಸ್ಕಾರಗಳು.

ಶ್ರೀ ಮ|| ಶಾ|| ಸಂ|| ಆಚಾರ್ಯ ಆಚಾರ್ಯಾಣಿಯವರಾದ **ಶ್ರೀಹರಿದಾಸರತ್ನಂ ಗೋಪಾಲದಾಸರು** ನನ್ನ ಬಾಲ್ಯ ವಯಸ್ಸಿನಲ್ಲಿ 'ಅಮರಕೋಶ'ವನ್ನು ಹೇಳಿಕೊಟ್ಟು ಉಪಕಾರ ಮಾಡಿದ ಗುರುಗಳು. ಅವರಿಗೆ ನಮಸ್ಕಾರಗಳು.

ಶ್ರೀ ಮ|| ಶಾ|| ಸಂ|| ಆಚಾರ್ಯ ಆಚಾರ್ಯಾಣಿಯವರಾದ **ಈಚನೂರು ಶ್ರೀನಿವಾಸಾಚಾರ್ಯರು ಮತ್ತು ಸೋನಾಬಾಯಿಯವರು.** ನನಗೆ ದತ್ತು ಸ್ವೀಕಾರ ಮತ್ತು ಉಪನಯನ ಮಾಡಿಸಿದ ಪುರೋಹಿತರು ಇವರಿಗೆ ನಮಸ್ಕಾರಗಳು.

ಶ್ರೀ ಮ|| ಶಾ|| ಸಂ|| ಆಚಾರ್ಯ ಆಚಾರ್ಯಾಣಿಯವರಾದ **ಈಚನೂರು ವೆಂಕಟರಮಣಾಚಾರ್ಯ** ದಂಪತಿಗಳು ನನಗೆ ತ್ರಿಕಾಲ ಸಂಧ್ಯಾವಂದನೆ, ಅಗ್ನಿಕಾರ್ಯ, ಶ್ರೀರಾಘವೇಂದ್ರ ಸ್ತೋತ್ರ, ಶ್ರೀಹರಿವಾಯುಸ್ತುತಿ, ಸಂಕ್ಷೇಪವಾಗಿ ದೇವರಪೂಜಾ ಪಾಠ ಕಲಿಸಿಕೊಟ್ಟ ಗುರುಗಳು ಇವರಿಗೆ ನಮಸ್ಕಾರಗಳು.

ಶ್ರೀ ಮ|| ಶಾ|| ಸಂ|| ಆಚಾರ್ಯ ಆಚಾರ್ಯಾಣಿಯವರಾದ **ಕಡ್ಡಿ ಶ್ರೀನಿವಾಸಾಚಾರ್ಯರು ಮತ್ತು ಪದ್ಮಾವತಮ್ಮನವರು** ನನಗೆ ಪ್ರಾರಂಭದ ಆಚಾರ-ವಿಚಾರಗಳನ್ನು ತಿಳಿಸಿಕೊಟ್ಟು ಶ್ರೀಮಧ್ವಶಾಸ್ತ್ರಕ್ಕೆ ಪ್ರವೇಶ ಮಾಡಿಸಿ ಶ್ರೀಮಣಿಮಂಜರಿ ಎರಡು ಸರ್ಗ ಪಾಠ ಹೇಳಿ ಅನೇಕ ವೈದಿಕ, ಲೌಕಿಕ ಧರ್ಮ ಸೂಕ್ಷ್ಮಗಳನ್ನು ತಿಳಿಸಿಕೊಟ್ಟು ಉಪಕಾರಮಾಡಿದ ಪ್ರಾರಂಭದ ಗುರುಗಳು ಇವರಿಗೆ ನಮಸ್ಕಾರಗಳು. ಇವರು ಸುಖ ದುಃಖಗಳನ್ನು ಬಡತನ ಸಿರಿತನವನ್ನು ಸಮವಾಗಿ ಕಂಡು ಪರೋಪಕಾರ ಮಾಡುವ ಸ್ವಭಾವವುಳ್ಳವರಾಗಿದ್ದರು, ಇವರ ದಾಂಪತ್ಯ ಜೀವನದಲ್ಲಿ ಬಹಳ ಅನ್ಯೋನ್ಯವಾಗಿ ಇದ್ದುದ್ದನ್ನು ನಾನು ನೋಡಿದ್ದೇನೆ ಮತ್ತು ವಿಚಾರಗಳನ್ನು ಸಂದೇಹವಿಲ್ಲದೇ ಖಚಿತವಾಗಿ ಹೇಳುವ ಸ್ವಭಾವವುಳ್ಳವರಾಗಿದ್ದರು.

ಶ್ರೀ ಮ|| ಶಾ|| ಸಂ|| ಆಚಾರ್ಯ ಆಚಾರ್ಯಾಣಿಯವರಾದ **ಅಗ್ನಿಹೋತ್ರಿ ಯಜ್ಞವಿಠಲಾಚಾರ್ಯ** ದಂಪತಿಗಳು ಒಂದು ಶ್ಲೋಕ ಮಣಿಮಂಜರಿ ಪಾಠ ಹೇಳಿಕೊಟ್ಟ ಗುರುಗಳು ಇವರಿಗೆ ನಮಸ್ಕಾರಗಳು.

ಶ್ರೀ ಮ|| ಶಾ|| ಸಂ|| ಆಚಾರ್ಯ ಆಚಾರ್ಯಾಣಿಯವರಾದ **ಚಿತ್ರದುರ್ಗದ ಪ್ರಾಣೇಶಾಚಾರ್ಯ ಮತ್ತು ನಾಗೂಬಾಯಿಯವರು** ನನಗೆ ಏಳು ಸರ್ಗ ಸುಮಧ್ವವಿಜಯ ಪಾಠಮಾಡಿ ಅನೇಕ ಧರ್ಮ ವಿಚಾರಗಳನ್ನು ತಿಳಿಸಿಕೊಟ್ಟು ಉಪಕಾರ ಮಾಡಿದ ಗುರುಗಳು ಇವರಿಗೆ ನಮಸ್ಕಾರಗಳು.

ಶ್ರೀ ಮ|| ಶಾ|| ಸಂ|| ಆಜೀವ ಬ್ರಹ್ಮಚಾರಿಗಳಾದ ವಿಷ್ಣುತೀರ್ಥ, ಆನೆಗೊಂದಿ ಇವರಿಂದ ಮಂತ್ರಾಲಯ ಕ್ಷೇತ್ರದಲ್ಲಿ ನನಗೆ ಹೇಳಿಕೊಟ್ಟ ವಿಚಾರಗಳು. ಕರಶುದ್ಧಿ, ದ್ವಾದಶಗುರುನಮಸ್ಕಾರ, ತತ್ತ್ವನ್ಯಾಸ, ಮಾತೃಕಾನ್ಯಾಸ, ಶ್ರೀಹರಿವಾಯುಸ್ತುತಿ ಪುರಃಶ್ಚರಣಕ್ರಮ, ಶ್ರೀಮನ್ಯುಸೂಕ್ತ ಶ್ರೀಧೀರೇಂದ್ರತೀರ್ಥ ವ್ಯಾಖ್ಯಾನ ಸಹಿತವಾಗಿ ಪಾಠಮಾಡಿರುತ್ತಾರೆ. ಪುಸ್ತಕದಲ್ಲಿ ಅಂದವಾಗಿ ಬರೆಯವ ಕ್ರಮ, ಮತ್ತು ಅನೇಕ ಶಾಸ್ತ್ರ ವಿಚಾರಗಳು ಧರ್ಮ ಸೂಕ್ಷ್ಮಗಳನ್ನು ಉಪದೇಶ ಮಾಡಿರುತ್ತಾರೆ. ಇವರಿಗೆ ನಮಸ್ಕಾರಗಳು.

ಶ್ರೀ ಮ|| ಶಾ|| ಸಂ|| ಆಚಾರ್ಯ ಆಚಾರ್ಯಾಣಿಯವರಾದ **ಶ್ರೀಯಲಮೇಲಿ ವಾಸುದೇವಾಚಾರ್ಯರು ಮತ್ತು ಚಂದ್ರಭಾಗಾಬಾಯಿ** ಅನಂತರ **ಸುಂದರೀಬಾಯಿಯವರು.** ದ್ವಾದಶನಾಮಶ್ರೀಗೋಪೀಚಂದನ ಮುದ್ರಾಧಾರಣ ಮಾಡುವ ಕ್ರಮ, ಸಾಷ್ಟಾಂಗ ನಮಸ್ಕಾರ ಮಾಡುವ ಕ್ರಮ, ಪಂಚಭೇದ ತಾರತಮ್ಯ, ದೇವತಾತಾರತಮ್ಯ, ದೈತ್ಯ ತಾರತಮ್ಯ, ನವವಿಧದ್ವೇಷ, ನವವಿಧಭಕ್ತಿ ಇವುಗಳ ವಿಚಾರವನ್ನು ತಿಳಿಸಿಕೊಟ್ಟು ಪರಮತಖಂಡನ ಪೂರ್ವಕ, ಸ್ವಮತಸ್ಥಾಪನ ದೀಕ್ಷೆಯನ್ನು ಕೊಟ್ಟು ಸನ್ಮಾರ್ಗಕ್ಕೆ ತಂದವರು. ಶ್ರೀಮಣಿಮಂಜರೀ ಪೂರ್ಣಗ್ರಂಥ, ಶ್ರೀಸುಮಧ್ವವಿಜಯ ಪೂರ್ಣಗ್ರಂಥ, ಪ್ರಮಾಣಚಂದ್ರಿಕಾ, ತತ್ವಸಂಖ್ಯಾನ, ತತ್ವವಿವೇಕ, ಉಪನಿಷತ್ತುಗಳು, ಶ್ರೀಮದ್‌ಭಾಗವತ ಪೂರ್ತಿ ವ್ಯಾಖ್ಯಾನ ಸಹಿತ ಶ್ರವಣ, ಮಾಸ ಮಹಾತ್ಮೆಗಳು ಹಾಗೂ ಅನೇಕ ಉಪನ್ಯಾಸಗಳು ಇವುಗಳಿಂದ ನನ್ನನ್ನು ಒಂದು ಘಟ್ಟದ ಜ್ಞಾನಕ್ಕೆ ಬಂದು ನಿಲ್ಲಿಸಿದ ಮುಖ್ಯ ಗುರುಗಳು. ಎಷ್ಟು ಭಾರಿ ಕೇಳಿದರೂ ಸಹ ಬೇಜಾರಿಲ್ಲದೆ, ಒಂದೇ ತರಹದ ವಿಶ್ವಾಸದಿಂದ ಯಾವ ಫಲಾಪೇಕ್ಷೆಯನ್ನು ಇಚ್ಛಿಪಡದೇ ಪಾಠವನ್ನು ಚೆನ್ನಾಗಿ ತಿಳಿಸತಕ್ಕ ಕಲೆಯುಳ್ಳವರು. ಇವರಿಗೆ ನಮಸ್ಕಾರಗಳು. ಇವರು ಭೂಸರಸ್ವತೀ ಲೋಕದಿಂದ ಸರಸ್ವತಿ ಪತಿಗಳ ಲೋಕಕ್ಕೆ ಪ್ರಯಾಣ ಮಾಡಿದ ಮೇಲೆ ಮುಂದಿನವರಿಂದ ಸಾರಸ್ವತ ವಿದ್ಯಾ ಮುಂದುವರಿಯಿತು.

ಶ್ರೀ ಮ|| ಶಾ|| ಸಂ|| ಆಚಾರ್ಯ ಆಚಾರ್ಯಾಣಿಯವರಾದ **ಅಶ್ವತ್ಥನಾರಾಯಣಾಚಾರ್ಯ ದಂಪತಿಗಳು,** ಎಷ್ಟು ಸರಿ ಕೇಳಿದರೂ ಸಹ ಬೇಜಾರು ಪಡದೆ, ಒಂದೇ ತರಹದ ವಿಶ್ವಾಸದಿಂದ ಯಾವ ಫಲಾಪೇಕ್ಷೆಯನ್ನು ಇಚ್ಛಿಪಡದೇ ಪಾಠವನ್ನು ಚೆನ್ನಾಗಿ ತಿಳಿಸಿತಕ್ಕ ಕಲೆಯುಳ್ಳವರು. ಇವರು ನಮ್ಮ ಯಲಮೇಲಿಆಚಾರ್ಯರ ಶಿಷ್ಯರಾದ್ದರಿಂದಲೇ ಅವರ ಗುಣ ಇವರಲ್ಲೂ ಕಂಡುಬಂದಿದೆ. ಇವರು ನನಗೆ ಪ್ರಮಾಣಚಂದ್ರಿಕಾ, ಪ್ರಮಾಣಲಕ್ಷಣ, ತತ್ತ್ವಸಂಖ್ಯಾನ, ಖಂಡನತ್ರಯ ಮುಂತಾದ ಪಾಠಗಳನ್ನು ಮಾಡಿ ಧರ್ಮಸೂಕ್ಷ್ಮಗಳನ್ನು ತಿಳಿಸಿಕೊಟ್ಟು ಉಪಕಾರಮಾಡಿರುತ್ತಾರೆ ಇವರಿಗೆ ನಮಸ್ಕಾರಗಳು ಉದಾರಗುಣವುಳ್ಳವರು.

ಶ್ರೀ ಮ|| ಶಾ|| ಸಂ|| ಆಚಾರ್ಯ ಆಚಾರ್ಯಾಣಿಯವರಾದ **ಶ್ರೀರಘುನಂದನಾಚಾರ್ಯ ಮತ್ತು ವೈದೇಹಿ**ಯವರು. ಇವರು ಶ್ರೀವಾದಿರಾಜಸ್ವಾಮಿಗಳವರಿಂದ ರಚಿತವಾದ 'ಶ್ರೀರುಕ್ಮಿಣೀಶ ವಿಜಯ' ಪಾಠಮಾಡಿ, ನಮಗೆ ಶ್ರೀಕೃಷ್ಣಪರಮಾತ್ಮನ ಲೀಲಾವಿಲಾಸಗಳ ತತ್ವಾರ್ಥಗಳನ್ನು ತೋರಿಸಿಕೊಟ್ಟು ಉಪಕಾರಮಾಡಿದವರು. ಇವರು ಹುಟ್ಟು ವೈರಾಗ್ಯ ಸ್ವಭಾವವುಳ್ಳವರು, ಜ್ಞಾನ ಭಾಗ, ಮತ್ತು ಕರ್ಮಭಾಗ ಎರಡರಲ್ಲೂ ಧೀಕ್ಷಾ ಉಳ್ಳವರು ಖಂಡಿತವಾಗಿ ವಿಚಾರವನ್ನು ತಿಳಿಸುವವರು ಸಂತುಷ್ಟದ್ವಿಜರು. ಇವರಿಗೆ ನಮಸ್ಕಾರಗಳು.

ಶ್ರೀ ಮ|| ಶಾ|| ಸಂ|| ಆಚಾರ್ಯಾ ಆಚಾರ್ಯಾಣಿಯವರಾದ ಬಿದರಹಳ್ಳಿ **ಶ್ರೀನಿವಾಸಾಚಾರ್ಯ ದಂಪತಿಗಳು.** ಇವರಿಂದ ಶ್ರೀಮನ್‌ಮಹಾಭಾರತತಾತ್ಪರ್ಯನಿರ್ಣಯ ಪೂರ್ಣ ಗ್ರಂಥ, ಐತರೇಯೋಪನಿಷತ್, ಪ್ರಮೇಯ ದೀಪಿಕಾ, ಶ್ರೀಮನ್ ನ್ಯಾಯಸುಧಾ ಸಂಪೂರ್ಣ ಶ್ರವಣ ಆಗಿ ಇವರ ಅನುಗ್ರಹದಿಂದ ಶ್ರೀಮಳಖೇಡ ಶ್ರೀಜಯತೀರ್ಥಶ್ರೀಮಚ್ಚರಣರ ವೃಂದಾವನ ದರುಶನ ಆಗುವ ಭಾಗ್ಯ ದೊರೆಯಿತು. ಇವರು ದೇವರ ನಾಮಗಳಲ್ಲಿ ಬಹಳ ವಿಶ್ವಾಸ ಮಾಡುವವರು. ಏಕಾದಶೀ ಜಾಗರಣೆಯಲ್ಲಿ ಭಾಗವಹಿಸುತ್ತಿದ್ದವರು, ಸರಳ ಹೃದಯಿಗಳು ಇವರಿಗೆ ನಮಸ್ಕಾರಗಳು.

ಶ್ರೀ ಮ|| ಶಾ|| ಸಂ|| ಆಚಾರ್ಯ ಆಚಾರ್ಯಾಣಿಯವರಾದ **ಶ್ರೀನಿವಾಸರಾಯರು** ಮತ್ತು **ಸರೋಜಮ್ಮನವರು.** ಇವರಿಂದ ಸಂಗೀತ ಶಾಸ್ತ್ರಪಾಠವಾಗಿ ರಾಗ, ತಾಳ, ಜ್ಞಾನ ಬರುವಂತೆ

ಪಾಠಹೇಳಿಕೊಟ್ಟು ದಾಸಸಾಹಿತ್ಯದ ಹಿನ್ನೆಲೆಯಿಂದ ಶ್ರೀಕೃಷ್ಣಲೀಲಾ, ಶ್ರೀಧ್ರುವಚರಿತ್ರೆ, ಶ್ರೀಮಾರ್ಕಂಡೇಯ ಚರಿತ್ರೆ ಮುಂತಾದ ನಾಟಕಗಳನ್ನು ಬರೆಯಲು ಪ್ರೋತ್ಸಾಹ ಕೊಟ್ಟು ಅದನ್ನು ಚಿಕ್ಕ ಮಕ್ಕಳಿಂದ ನಾಟಕ ಪ್ರದರ್ಶನ, ಕೋಲಾಟ ಮತ್ತು ತಾರತಮ್ಯವಾಗಿ ದೇವರನಾಮಗಳ ಪಾಠವನ್ನು ಹೇಳಿಕೊಡುವಷ್ಟು ತಯಾರು ಮಾಡಿ ಸಂಗೀತದಲ್ಲಿ ಸರಳವರಸೆ, ಅಲಂಕಾರ, ವರ್ಣ ಮುಂತಾದ ಸ್ವರಗಳಿಗೆ ದಾಸರ ಪದಗಳನ್ನು ಜೋಡಿಸಿ ಮತ್ತು ಸ್ವಂತ ಸಾಹಿತ್ಯವನ್ನು ರಚಿಸಿ ದೇವತಾ ಸಂಬಂಧವಾದ ಸುಖಪಡುವುದಕ್ಕೆ ಪ್ರೋತ್ಸಾಹ ಕೊಟ್ಟು ಉಪಕಾರಮಾಡಿದವರು. ಈ ನಿಮಿತ್ತದಿಂದ ನನ್ನ ಕಡೆಯಿಂದ ಅನೇಕ ಹೆಣ್ಣು ಮತ್ತು ಗಂಡುಮಕ್ಕಳಿಗೆ ದಾಸ ಸಾಹಿತ್ಯ ಪಾಠ ಮಾಡಿಸಿ ಸನ್ಮಾರ್ಗಕ್ಕೆ ಪ್ರವೇಶ ಮಾಡಿಸಲು ಕಾರಣವಾಯಿತು. ಇವರಿಗೆ ನಮಸ್ಕಾರಗಳು. ಇವರು ಮಾತ್ಸರ್ಯ ಇಲ್ಲದವರು ಸಾಚಾ ಸ್ವಭಾವದವರು.

ಬೆಂಗಳೂರು ಚಾಮರಾಜಪೇಟೆ ಶ್ರೀಮನ್ ಮಾಧ್ವಸಂಘ ಹಾಗೂ ರಾಮಕೃಷ್ಣಪ್ಪ ದ್ವೈತ ವೇದಾಂತ ಪಾಠಶಾಲೆಯ ಸಭಾಂಗಣವಾಗಿದ್ದ ಶ್ರೀ ಶ್ರೀ ೧೦೮ ವಿದ್ಯಾಪ್ರಸನ್ನ ತೀರ್ಥ ಮಂದಿರವೇ ನಮ್ಮ ಸಾಧನಭಾಗಕ್ಕೆ ಕ್ಷೇತ್ರವಾಯಿತು. ನನ್ನ ಪೂರ್ವ ವಯಸ್ಸಿನಲ್ಲಿ ಈ ಸ್ಥಳದಲ್ಲಿ ನಡೆಯುತ್ತಿದ್ದ ಶ್ರೀಮಧ್ವಶಾಸ್ತ್ರ ಸಂಪನ್ನರಗುಳಾದ ತಿರುಮಕೂಡಲು ಜಯತೀರ್ಥಾಚಾರ್ಯರಿಂದ ನಡೆಯುತ್ತಿದ್ದ ಶ್ರೀಮದ್ ಭಾಗವತಾದಿ ಪುರಾಣಗಳು ಇದರಂತೆ ರಾಯಚೂರು ಕೃಷ್ಣಾಚಾರ್ಯರು, ರಿತ್ತಿ ಹುಚ್ಚಾಚಾರ್ಯರು, ಶಿಗ್ಗಾವಿ ಹನುಮಂತಾಚಾರ್ಯರು, ಎನ್.ಕೃಷ್ಣಮೂರ್ತಿಗಳು ಮುಂತಾದವರುಗಳಿಂದ ಅನೇಕ ಪುರಾಣಗಳ ಉಪನ್ಯಾಸಗಳ ಶ್ರವಣ, ಕೀರ್ತಿಶೇಷ ವರವಣಿ ರಾಮರಾಯರ ನೇತೃತ್ವದಲ್ಲಿ ನಡೆಯುತ್ತಿದ್ದ ಶ್ರೀಪುರಂದರದಾಸರ ಹಾಗೂ ಶ್ರೀಮಧ್ವನವಮಿ ಉತ್ಸವಗಳಲ್ಲಿ ಭಾಗವಹಿಸುತ್ತಿದ್ದ ಶ್ರೀಯತರುಗಳಾದ ಗುಡಿಬಂಡೆ ಮಧ್ವಾಚಾರ್ಯರು, ವಾಮನಮೂರ್ತಿಗಳು, ಶೇಷಾಚಾರ್ಯರು, ವರವಣಿ ವರಾಹಮೂರ್ತಿಗಳು, ಚಿಂಚೋಳಿ ಪ್ರಹ್ಲಾದಾಚಾರ್ಯರು, ಸೇತುಮಾಧವಾಚಾರ್ಯರು ಮತ್ತು ಎಂ.ಎನ್.ಗೋವಿಂದರಾವ್ ಮುಂತಾದ ಸಜ್ಜನರ ಸಹವಾಸ - ಹರಿದಾಸರುಗಳಾದ ಶ್ರೀವೆಂಕೋಬದಾಸರು, ವೇಣುಗೋಪಾಲದಾಸರು, ಶ್ರೀಹರಿದಾಸರತ್ನಂ ಗೋಪಾಲದಾಸರು ಮುಂತಾದ ದಾಸರುಗಳಿಂದ ಹರಿಕಥಾಶ್ರವಣ, ಭಜನೆ ಮುಂತಾದ ಕಾರ್ಯಕ್ರಮಗಳು ನಮಗೆ ಪ್ರೋತ್ಸಾಹ ಕೊಡಲು ಕಾರಣವಾಯಿತು. ಇತ್ತೀಚೆಗೆ ಶ್ರೀ ಮ|| ಶಾ|| ಸಂ|| ಶ್ರೀಬಾಳಗಾರು ಶ್ರೀನಿವಾಸಾಚಾರ್ಯರಿಂದ ಅನೇಕ ಪುರಾಣಗಳ ಶ್ರವಣ, ಶ್ರೀ ಮ|| ಶಾ|| ಸಂ|| ತಾಮ್ರಪರ್ಣಿ ಶ್ರೀನಿವಾಸಾಚಾರ್ಯರಿಂದ ಉಪನ್ಯಾಸಗಳು ಮತ್ತು ರಾಮರಾವ್ ವಿ.ನಾಯಕ್ (ಗವಾಯಿ ರಾಮರಾಯರು) ಇವರ ನೇತೃತ್ವದಲ್ಲಿ ಶ್ರೀಪುರಂದರದಾಸರಾದಿ ದಾಸಚತುಷ್ಟಯರ ಆರಾಧನೆಗಳ ಸಂದರ್ಭವಾಗಿ ಭಾಗವಹಿಸುತ್ತಿದ್ದ ಮುರುಗೋಡ ಶ್ರೀಕೃಷ್ಣದಾಸರು, ಪಂಚಮುಖಿದಾಸರು, ಸೇತುಮಾಧವದಾಸರು ಮುಂತಾದ ಸಜ್ಜನರ ಸಹವಾಸವೇ .ನಮಗೆ ಈ ಸಂಗ್ರಹ ಕಾರ್ಯಮಾಡಲು ನೆರವಾದವು. ಆದ್ದರಿಂದ ಅಶೇಷ ಸಜ್ಜನರಿಗೂ ಅನಂತಾನಂತ ವಂದನೆಗಳು.

ಶ್ರೀ ಮ|| ಶಾ|| ಸಂ|| ರಘುಪತಿಯವರು ಪವಮಾನ ಪೂರ್ಣಪಾಠ ಮಾಡಿಸಿ, ಉಪಕಾರ ಮಾಡಿರುತ್ತಾರೆ.

ಬಹಳ ಹಿಂದೆ ಶ್ರೀಕುಂದಾಪುರವ್ಯಾಸರಾಜಮಠಾಧೀಶರಾಗಿದ್ದ ಶ್ರೀಶ್ರೀ ೧೦೮ ಲಕ್ಷ್ಮೀಶತೀರ್ಥ ಶ್ರೀಪಾದಂಗಳವರ ಉಪನ್ಯಾಸಗಳು ಅವರ ಸನ್ನಿಧಿಯಲ್ಲಿ ಶ್ರೀ ಮ|| ಶಾ|| ಸಂ|| ಪಂಡಿತರಾದ ಜಾಲೀಹಾಳ್ ಶ್ರೀನಿವಾಸಾಚಾರ್ಯರು ಹಾಗೂ ಬಳ್ಳಾರಿವಾಸಿ ಕೋಲಾರ ರಾಮರಾಯರು

ಮುಂತಾದವರ ಉಪನ್ಯಾಸಗಳು ಮತ್ತು ಓವರ್‌ಸಿಯರ್ ರಾಘವೇಂದ್ರರಾಯರು, ಶ್ಯಾಮದಾಸರು ಮತ್ತು ಚಿಂಚೋಳಿ ಪ್ರಾಣದೇವರ ಗುಡಿಯಲ್ಲಿ ನಡೆಯುತ್ತಿದ್ದ ಏಕಾದಶೀ ಜಾಗರಣೆಗಳಲ್ಲಿ ಭಾಗವಹಿಸುತ್ತಿದ್ದ ಶ್ರೀ ಪಿ.ವರಾಹಮೂರ್ತಿಯವರು ಕಲಾಸಿಪಾಳ್ಯದ ಶ್ರೀಪದ್ಮನಾಭರಾಯರು ಮುಂತಾದವರ ಸಹವಾಸಗಳು ನಮಗೆ ಸನ್ಮಾರ್ಗಕ್ಕೆ ಬರಲು ಕಾರಣವಾದವು.

ನಮ್ಮಲ್ಲಿ ಪಾಠಕ್ಕಾಗಿ ಬಂದು ಹೋಗಿರುವ ಮತ್ತು ಬರುತ್ತಿರುವ ವಿದ್ಯಾರ್ಥಿಗಳಿಗೂ ಮತ್ತು ಶ್ರೋತೃ ವರ್ಗಕ್ಕೂ ಹಾಗೂ ಈ ಗ್ರಂಥವನ್ನು ಅವಲೋಕನ ಮಾಡುವ ನಿಮ್ಮಂತಹ ಗ್ರಾಹಕರಿಗೂ ದೇವರು ಒಳ್ಳೆಯದನ್ನು ಮಾಡಲಿ.

ಈ ಗ್ರಂಥವನ್ನು ಸಾದರವಾಗಿ ಡಿ.ಟಿ.ಪಿ. ಮಾಡಿ, ಅಂದವಾಗಿ ಮುದ್ರಣ ಮಾಡಿ, ಪುಸ್ತಕ ರೂಪಕ್ಕೆ ತಂದು ಸಹಾಯ ಮಾಡಿದ ಚಿ|| ರಾ|| ಅನಿಲ್‌ಕುಮಾರ್ ಆರ್.ಎಸ್., ಪ್ರಿಂಟ್ ಮೀಡಿಯಾ ಮತ್ತು ಸಿಬ್ಬಂದಿ ವರ್ಗದವರಿಗೂ ದೇವರು ಒಳ್ಳೆಯದನ್ನು ಮಾಡಲಿ.

ಈ ಮೇಲಿನ ಅಧಿಷ್ಠಾನಗಳು ಕೇವಲ ಪರಾಧೀನ ಕರ್ತೃತ್ವ ಉಳ್ಳವರು. ಇವರ ಮೂಲಕ ಸ್ವತಂತ್ರ ಕರ್ತನಾದ ಶ್ರೀಹರಿಯು ಶ್ರೀಭಾರತೀಶರ ಮೂಲಕ ಈ ಸುಯೋಗವನ್ನು ಕೊಟ್ಟು ಅನುಗ್ರಹ ಮಾಡಿದ ಸ್ವಾಮಿಗೆ ಅನಂತಾನಂತ ನಮಸ್ಕಾರಗಳು.

ಶ್ರೀನೃಪ ಶಾಲೀವಾಹನಶಕ ೧೯೨೬ಕ್ಕೆ ಸಲ್ಲುವ ತಾರಣ ಸಂವತ್ಸರದ ಅಧಿಕ ಶ್ರಾವಣ ಶುಕ್ಲಪಕ್ಷದ ದ್ವಿತೀಯ, ಆಶ್ಲೇಷ ನಕ್ಷತ್ರ, ಸಿದ್ಧಿ ಯೋಗ, ಕೌಲವ ಕರಣ ಸೋಮವಾರ ೧೯-೭-೨೦೦೪.

ತದ್ರೂಪ, ತನ್ನಾಮ, ತತ್ತೇಜ, ತದ್ಭಿನ್ನ, ತಂ ಶ್ರೀನಿವಾಸಂ ನಮಾಮಿ

ಇಂತಿ ಸಜ್ಜನರ ಪಾದರೇಣು
**ಶ್ರೀ ಗೋ. ದ್ವಾರಕನಾಥದಾನಿ ಮೌದ್ಗಲ್ಯ**
**(ಎಸ್.ಜಿ.ದ್ವಾರಕಿ)**
ನಂ.೬೪/ಎ, ಸುದರ್ಶನ ಕಲಾಮಂದಿರ,
೫ನೇ ಅಡ್ಡರಸ್ತೆ, ೩ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು-೫೬೦೦೧೮

## ಅನುಭವಾಮೃತ

ತಂದೆ ಮಕ್ಕಳಿಗೆ ಬಾಲ್ಯದೊಳು ಸದ್‌ವಿದ್ಯೆಗಳ ಅರಿಪದಿರ್ದೊಡೆ ಕೊಂದಂ

ಲಕ್ಕ (ಲಕ್ಷ). ಧನವಿರಲು ಕೆಡಹುಂ ಚಿಕ್ಕಂದಿನಾವಿದ್ಯೆ ಪೊರಗು ಚೂಡಾರತ್ನ

# ಆಜ್ಞಾ ಪತ್ರ

॥ ಶ್ರೀ ವಿಷ್ಣುತೀರ್ಥ ಗುರ್ವಂತರ್ಯಾಮಿ, ಶ್ರೀಗೋಪಾಲಕೃಷ್ಣ ಪ್ರಸನ್ನೋಭೂಯಾತ್॥
ಶ್ರೀಮೋದಪುರಂ॥ ಶ್ರೀ ಅವಧೂತಶಿರೋಮಣಿ, ಶ್ರೀ ಶ್ರೀಮದ್ವಿಷ್ಣುತೀರ್ಥ ಸ್ವಾಮಿಗಳವರಿಂದ
ರಚಿತ ಆತ್ಮಸುಖಬೋಧಿನೀ ಪತ್ರಿಕಾ ॥

ನಿರ್ವಚನೆ : ಆತ್ಮ ಸುಖಬೋಧಿನೀ ಪತ್ರಿಕೇತ್ಯಸ್ಯ ಅಯಮರ್ಥಃ-ತಂತ್ರನ್ಯಾಯೇನ ಆತ್ಮನೋ ಹರೇಃ ಅನುಗ್ರಹಾತ್ ಆತ್ಮನಾಂ, ಜೀವಾನಾಂ, ಆತ್ಮ ಸುಖಂ, ಸ್ವರೂಪಂ, ಬೋಧಯತೀತಿ ತಾದೃಶೀ ಪತ್ರಿಕಾ, ಪರಮಾನುಗ್ರಹೇಣ, ಜೀವಾನಾಂ ಸ್ವರೂಪಸುಖಸಾಧನಬೋಧಿಕಾ ಪತ್ರಿಕೇತಿ ಭಾವಃ.

(ಈ) ಜೀವರು ಭಗವದಿಚ್ಛೆಯ ಮೂಲಕ ಅನಾದಿಕರ್ಮದಿಂದ, ಲಿಂಗದೇಹಬದ್ಧರಾಗಿ ಈ ಬ್ರಹ್ಮಕಲ್ಪದಲ್ಲಿ ಸ್ಥೂಲದೇಹ ಶರೀರವನ್ನು ಹೊಂದಿ, ಅನೇಕ ಕರ್ಮ ಮಾಡುತ್ತಾ, ಅದ್ಯಾಪಿ ನಾನಾ ಯೋನಿಗಳಲ್ಲಿ ಭ್ರಮಿಸುತ್ತಾ ಅಕಸ್ಮಾತ್ ಪುಣ್ಯಭೂಮಿಯಾದ ಭರತಖಂಡದಲ್ಲಿ ದುರ್ಲಭವಾದ ಮನುಷ್ಯ ಜನ್ಮವನ್ನು ಪಡೆದು, ಆಗ್ಗೆ ಅವರು ಸಾಧ್ಯವಾದ ಮಟ್ಟಿಗೆ ಮಾಡತಕ್ಕ ಪುಣ್ಯಸಾಧನವೇನೆಂದರೆ, ತೃಣಾದಿ ಪ್ರಾರಂಭ ಮಾಡಿ ಬ್ರಹ್ಮಪರ್ಯಂತರ ಇರುವ ಎಲ್ಲ ವಿಷಯಗಳು ಅಸಾರವಾಗಿಯೂ, ಅನಿತ್ಯವಾಗಿಯೂ ಇರುವವೆಂಬುದನ್ನು ಪ್ರತ್ಯಕ್ಷ-ಅನುಮಾನ-ಆಗಮಗಳಿಂದ ನಿಶ್ಚಯಿಸಿ, ಶರೀರಾದಿಗಳಲ್ಲಿ ಅಹಂ ಮಮತಾದಿ ದುರಾಗ್ರಹವನ್ನು ಬಿಟ್ಟು, ಈ ಕಳತ್ರ ಪುತ್ರಾದಿಗಳ ಸಂಗಮವು ಪಥಿಕ ಸಂಗಮದಂತೆ ಕ್ಷಣಿಕವೆಂದು ತಿಳಿದು, ಈ ಪಂಚಭೂತ ಶರೀರ ನಿಮಿತ್ತವಾಗಿ, ಅದೃಷ್ಟ ನಿಯಾಮಕ ಶ್ರೀಹರಿ ಇಚ್ಛೆಯಿಂದ ಕ್ಲುಪ್ತವಾದ ದುಃಖದಂತೆ, ಸುಖವು ಪ್ರಯತ್ನವಿಲ್ಲದೆ ಲಭ್ಯವಾಗುವುದೆಂದು ತಿಳಿದು ಅನುಭವಿಸುತ್ತಿರಬೇಕು. ಈ ಸಂಸಾರದಲ್ಲಿ ಉದರ ನಿರ್ವಾಹಕ್ಕಾಗಿ, ಯಾವ ಲೌಕಿಕ ಕಾರ್ಯವನ್ನು ಮಾಡಿದರೂ, ಆ ಸ್ವಾಮಿಯ ಸ್ಮರಣೆಯಿಂದ ಆತನ ಸ್ವಾತಂತ್ರ್ಯಕ್ಕೆ ಲೋಪ ಬರದಂತೆ, ಪದ್ಮಪತ್ರದಂತೆ ನಿರ್ಲೇಪದಿಂದ ಇರಬೇಕು. ಕೇವಲ ಸ್ವಶರೀರ ರಕ್ಷಣದ ಬುದ್ಧಿಯು ಶ್ವಾನಸೂಕರಾದಿಗಳಿಗೂ ಇರುವುದರಿಂದ ಮನುಷ್ಯನಾದರೂ ಶರೀರ ರಕ್ಷಣೆ ಮಾತ್ರವನ್ನೇ ಮಾಡಹತ್ತಿದರೆ ಶ್ವಾನಸೂಕರರಿಗೂ ಮನುಷ್ಯರಿಗೂ ಭೇದವಿಲ್ಲದಂತೆ ಆಗುವುದಿಲ್ಲವೇ? ಆದುದರಿಂದ ಈ ದಿವ್ಯ ಮನುಷ್ಯ ದೇಹ, ತತ್ರಾಪಿ ಜ್ಞಾನಾದಿಸರ್ವಸಾಧನ ಯೋಗ್ಯ ಬ್ರಾಹ್ಮಣ ಜನ್ಮ ಪಡೆದು ಸರ್ವತ್ರ ಸಾರಾಸಾರ ವಿಚಾರ ಮಾಡಿ, ಪಶುಬುದ್ಧಿಯನ್ನು ಬಿಟ್ಟು ಬಹಿರ್ವಿಷಯಗಳನ್ನೆಲ್ಲಾ ಬಿಸಿಲು ಕುದುರೆಯಂತೆ ತಿಳಿದು ವಿಷಯಗಳಲ್ಲಿ ಧಾವಿಸುವ ಮನಸ್ಸನ್ನು ನಿಗ್ರಹ ಮಾಡಿ ಅಜ್ಞಾನಾವರಣ (ಕ) ದೂರವಾಗಿ (ಅ) ಮೋಕ್ಷಸುಖವು ಹೇಗೆ ಲಬ್ಧವಾದೀತೋ ಹಾಗೆ ಪ್ರಯತ್ನ ಮಾಡಬೇಕು.

ಅಲಭ್ಯವಾದ ನಿತ್ಯಸುಖವು ಪ್ರಯತ್ನ ಲಭ್ಯವಾಗಿದೆ. ಸತ್ ಸಹವಾಸದಿಂದ ಶ್ರೀಮನ್ ನಾರಾಯಣ ಲಕ್ಷ್ಮೀ ವಾಯು ಮೊದಲಾದವರ ತಾರತಮ್ಯವನ್ನು ತಿಳಿದು ಶ್ರೀಹರಿಯೇ ಸರ್ವಸಾರ ಸರ್ವೋತ್ತಮ, ಸರ್ವಗುಣಪೂರ್ಣ, ದೋಷದೂರ ಮುಕ್ತಾಮುಕ್ತ ಪ್ರಪಂಚೇಶ, ಸೃಷ್ಟಾದೃಷ್ಟ ಕರ್ತಾ, ಸಾತ್ವಿಕಾದಿ ತ್ರಿವಿಧಜೀವರಿಗೆ ತತ್ತದ್ಯೋಗ್ಯವಾದ ಗತಿ ಕೊಡುವನೆಂದು ತಿಳಿದು, ಆತನಲ್ಲಿ ಬಹುಮಾನ ಪುರಸ್ಸರವಾಗಿಯೂ, ಅತಿಶಯ ಪ್ರೇಮಪೂರ್ವಕವಾಗಿಯೂ ಆ ಭಗವಂತನ ವಿಷಯ, ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ಸಖ್ಯ, ದಾಸ್ಯ, ಆತ್ಮನಿವೇದನಗಳನ್ನು ಮಾಡುತ್ತ, ನಾನು ನಿನ್ನ ಭೃತ್ಯ, ಅಜ್ಞ, ಅಸ್ವತಂತ್ರ ಆದ್ದರಿಂದ ನೀನು ಸರ್ವೋತ್ತಮ ಸರ್ವೇಶ್ವರ, ಸರ್ವತಂತ್ರ ಸ್ವತಂತ್ರ, ಸರ್ವಗುಣ ಪರಿಪೂರ್ಣ, ದೋಷದೂರ, ಮುಕ್ತಾಮುಕ್ತ ಪ್ರಪಂಚೇಶ, ಸ್ವಾತ್ಮಸುಖ ಅಂತರ್ನಿಯಾಮಕ ಸಾಕ್ಷಿಯಾದ ನೀನು ಸರ್ವೇಂದ್ರಿಯಗಳಲ್ಲಿ ನಿಂತು ತತ್ತ್ವೇಶ್ವರರ

ನಿಯಾಮಕನಾಗಿ, ಸುಕರ್ಮ, ದುಷ್ಕರ್ಮಗಳನ್ನು ಮಾಡಿಸಿ ನೀನೇ ನಿನ್ನ ಪೂಜಾತ್ವೇನ ಸ್ವೀಕಾರ ಮಾಡೆಂದು ಪ್ರಾರ್ಥಿಸುತ್ತಾ, ಮಾಡಿದ ಕರ್ಮಗಳನ್ನು ಪರಮಾತ್ಮನಿಗೆ ಸಮರ್ಪಣೆ ಮಾಡಬೇಕು. ಹೀಗೆ ಅನವರತ ಹರಿಸ್ಮರಣೆ, ಧ್ಯಾನಭಕ್ತಿಯಿಂದ ಅಪರೋಕ್ಷ ಜ್ಞಾನ ಸಂಪಾದನೆ ಮಾಡಿ, ಮುಂದೆ ಭಗವದನುಗ್ರಹರೂಪ ಪ್ರಸಾದದಿಂದ ಮುಕ್ತಿ ಪಡೆಯುವುದೇ ಮಹಾಲಾಭವು, ಭಗವದ್ವಾರ್ತಾದಿಂದ ಕಳೆದಲ್ಲಿ, ಜನ್ಮ ಆಯುಷ್ಯ ಕರ್ಮಕಲಾಪಗಳು, ಸಾರ್ಥಕವಾಗಿ ಗೃಹವಾಸವು ಬಂಧಕವಾಗುವುದಿಲ್ಲ. ಇದಲ್ಲದೆ ಗೃಹದಲ್ಲಿ ಕುಟುಂಬಭರರಾಗಿ ಭೋಗಾಸಕ್ತರಾಗಿ ಹರಿಯನ್ನು ಮರೆತುಬಿಟ್ಟರೆ ಸರ್ವದೇಹಬುದ್ಧಿ ಇಂದ್ರಿಯಗಳನ್ನು ಕೊಟ್ಟ ಮೋಕ್ಷದಾಯಕ ಸ್ವಾತ್ಮಸುಖದಿಂದ ಅಂತರ್ನಿಯಾಮಕ ಸಾಕ್ಷಿಯಾದ ಸ್ವಾಮಿದ್ರೋಹ ಜನ್ಮ ಆತ್ಮಘಾತದಿಂದ ತಮಃಪ್ರಾಪ್ತಿರೂಪ ಹಾನಿಯಾಗುತ್ತದೆ. ಇದರ ಸಮಾನ ಹಾನಿ ಮತ್ತೊಂದು ಇಲ್ಲ. ಹರಿಸ್ಮರಣರೂಪಸಂಪದಪೇಕ್ಷಯಾ ಇನ್ನೊಂದು ಸಂಪತ್ತು ಇಲ್ಲ. ಸಂಸಾರದಲ್ಲಿರುವ ಸಂಪತ್ತು ವಿಪತ್ತುಗಳು, ಸಂಪತ್ತು ವಿಪತ್ತುಗಳಲ್ಲ. ಹರಿಸ್ಮರಣವೇ ಸರ್ವೋತ್ತಮ ವಿಧಿಯು. ಹರಿವಿಸ್ಮರಣವೇ ಸರ್ವನಿಷೇಧವು. ಸರ್ವ ವಿಧಿನಿಷೇಧಗಳು ಇದರ ಕಿಂಕರಗಳಾಗಿವೆ. ಯಾವ ದೇಶ- ಸ್ಥಿತಿಗಳಲ್ಲಿ ಮನಃಪ್ರಸನ್ನತೆಯಾಗಿ ಭಗವತ್ ಸ್ಮರಣೆಗೆ ಅನುಕೂಲವಾದಿತೋ, ಅದೇ ದೇಶ, ಅದೇ ಕಾಲ ಅದೇ ಆವಸ್ಥಾ ಸೇವನ ಮಾಡತಕ್ಕದ್ದು. ಹೀಗೆ ಇರದಿದ್ದರೆ ಪ್ರಯಾಗಾದಿ ತೀರ್ಥಯಾತ್ರೆ, ವಸಂತಾದಿ, ವ್ರತನಿಯಮಾದಿ ವ್ಯವಸ್ಥೆ, ಲೋಕವಿಡಂಬನ ಮಾತ್ರವಾಗಿ ಪ್ರತ್ಯುತ ಶ್ರಮಜನಕವೇ ಆಗುವುವು. ಪಾಠಪ್ರವಚನಗಳು ಉಕ್ತಭಕ್ತಿರಹಿತವಾಗಿ ಕೇವಲ ವಾಕ್ಯಾರ್ಥ ಪರ್ಯವಸಾನವಾದರೆ, ವಂಧ್ಯಾಗೋರಕ್ಷಣೆ ಮಾಡಿದಂತೆ ನಿಷ್ಪ್ರಯೋಜಕವಾಗುವವು. ಇದು ಶ್ರೀಮದ್‌ಭಾಗವತಾದಿ ಸಕಲ ಪುರಾಣ ಶಾಸ್ತ್ರಾನುಸಾರವಿರುವುದು. ಸಜ್ಜನರು ದಯಪಾಲಿಸಿ ಕ್ಷಣಮಾತ್ರ ಚಿತ್ತಗೊಟ್ಟು ಅವಲೋಕನ ಮಾಡಬೇಕು.

॥ ಇತಿಶಮ್ ॥

## ಕೆಲವು ಪದಗಳ ಅರ್ಥ

ಪಥಿಕ - ವಾಹನಗಳಲ್ಲಿ ಸಂಚಾರ ಮಾಡುವಾಗ ಸಿಗುವ ತಾತ್ಕಾಲಿಕ ಪರಿಚಿತರು

ಭರತಖಂಡ - ನಾವು ವಾಸ ಮಾಡುತ್ತಿರುವ ಆಸೇತುಹಿಮಾಚಲ ಪರ್ಯಂತಾದ ಹಿಂದೂಸ್ಥಾನ (ಇಂಡಿಯಾ)

ನಿರ್ಲೇಪ - ಅಂಟಿಸಿಕೊಳ್ಳದೆ ವ್ಯಾಮೋಹಕ್ಕೆ ಸಿಗದೆ ಇರುವುದು.

ಪ್ರಯತ್ನ ಲಭ್ಯ - ಪ್ರಯತ್ನಿಸಿದರೆ ಸಿಗುತ್ತದೆ.

ಶ್ರಮಜನಕ - ದೇಹಾಯಾಸವಾಗತ್ತದೆಯೇ ಹೊರತು ಭಗವಂತನ ಪ್ರೀತಿಗೆ ಕಾರಣವಾಗುವುದಿಲ್ಲ.

ಬಿಸಿಲುಕುದುರೆ - ಇದು ಕುದುರೆಯಲ್ಲ. ಬಿಸಿಲಿನ ಝಳದಿಂದ ತರಂಗಗಳಂತೆ ಭಾಸಮಾನವಾಗುವುದು.

### ಸುಭಾಷಿತ

ಸದ್‌ವಿದ್ಯೆಯಿಂ ವಿನಯಮುಂ ಬರ್ಕುಂ (ಬರುತ್ತದೆ)
ವಿನಯದಿಂ ಸಲೆ ಪಾತ್ರಮಿರ್ಕುಂ (ಪಾತ್ರ)
ವಿದ್ವಾಸಂಗೆ ಎಲ್ಲೆಡೆಯುಂ ಮನ್ನಣೆಯಗ್ಗೆವರ್

# ಸುಜನರ ಲಕ್ಷಣ

ಶ್ರೀವಾದಿರಾಜರ ಸಾಹಿತ್ಯ

**ಶ್ರೀಮದಾಚಾರ್ಯರ ಸದಾಚಾರ ಸ್ಮೃತಿಯ ಕನ್ನಡ ವ್ಯಾಖ್ಯಾನ**

ರಾಗ - ಸಾವೇರಿ ತಾಳ - ಝುಂಪೆ

ದಿನಗಳನು ಕಳೆವ ಜನರೇ ಸುಜನರು । ಪಲ್ಲವಿ ।
ವನಜನಾಭನ ದಾಸಜನಸಮಾಗಮದಿಂದ ॥ ಅ.ಪ ॥

ಅರುಣೋದಯದಲೆದ್ದು ಆಚಮನ ಕೃತ್ಯದಲಿ ।
ಪರಿಶುದ್ಧರಾಗಿ ಇಹಪರಗಳಿಂದ ।
ಎರಡು ವಿಧ ಸುಖವೀವ ಗುರುಮಧ್ವಮುನಿವರರ ।
ಪರಮಮತ ಪಿಡಿದು ಹರಿಚರಿತಾಮೃತವ ಸವಿದು ॥ ೧ ॥

ಸ್ನಾನವನು ಮಾಡಿ ಸಂಕಲ್ಪ ಪೂರ್ವಕದಿ ಸಂ ।
ಧ್ಯಾನ ಗಾಯತ್ರಿ ಗುರುಮಂತ್ರ ಜಪಿಸಿ ॥
ಭಾನುಗರ್ಘ್ಯವನಿತ್ತು ಪರಮಾತ್ಮನಂಘ್ರಿಗಳ ।
ಧ್ಯಾನವನು ಮಾಡಿ ಅಧ್ಯಯನ ಪಾಠಗಳಿಂದ ॥ ೨ ॥

ಶ್ರೀವಾಸುದೇವನ ಅಡಿಗಡಿಗೆ ನೆನೆನೆನೆದು
ಪಾವಕಗೆ ಪ್ರಾತರಾಹುತಿಯನಿತ್ತು ॥
ಭಾವಜ್ಞರಲಿ ಸಕಲ ಪೌರಾಣಗಳ ಕೇಳಿ ।
ಹೂವು ಶ್ರೀತುಳಸಿವನಗಳನು ಸೇವಿಸುತ ॥ ೩ ॥

ಸಾವಧಾನದಿ ತಂತ್ರಸಾರೋಕ್ತ ವಿಧಿಯಿಂದ ।
ದೇವಪೂಜೆಯ ಮಾಡಿ ದೇವಶೆಗೆ ।
ನೈವೇದ್ಯಗಳನಿತ್ತು ನಿತ್ಯ ತೃಪ್ತಗೆ ವೈಶ್ವ ।
ದೇವ ಬಲಿಹರಣ ಅತಿಥಿಯ ಪೂಜೆ ಮಾಡುತ್ತ ॥ ೪ ॥

ಪರಮ ಹರುಷದಲಿ ದೇವಪ್ರಸಾದವನು ।
ವರ ಮಾತೃ ಪಿತರರು ಸೋದರರು ಸಹಿತ ॥
ಪರಮ ಸೌಖ್ಯದಿ ಪಙ್ತಿ ಪಾವನರ ಒಡಗೂಡಿ ।
ನರಹರೆ ಎನುತ ಭೋಜನ ಮಾಡಿ ಮುದದಿಂದ ॥ ೫ ॥

ಸಾಯಾನ್ಹ ಸಮಯ ಸಂಧ್ಯಾನ ಗಾಯತ್ರಿ ಜಪ ।
ಶ್ರೀಯರಸನಂಘ್ರಿಗಳ ಪೂಜೆಯನು ಮಾಡಿ ॥
ವಾಯುಸಖಮುಖದಲಾಹುತಿಯಿತ್ತು ಲಕ್ಷ್ಮೀನಾರಾಯಣನ
ಗಾಯನದಿ ಕೊಂಡಾಡುತ್ತಾ ಹಿಗ್ಗುತ್ತ ॥ ೬ ॥

ಈ ವಿಧದಿ ದಿನಗಳನು ಕಳೆದು ರಾತ್ರಿಯಲೊಂದು ।
ಝಾವದನಂತರ ಸುಖದಿ ಮಲಗಿ ॥
ಝಾವ ಝಾವದೊಳೆದ್ದು ನೆರೆಹೊರೆಯು ಕೇಳ್ವಂತೆ ।
ಪಾವನ್ನ ಚರಿತ ಹಯವದನನ್ನಸ್ಮರಿಸುತ್ತ ॥ ೭ ॥

# ಜೀವನದಲ್ಲಿ ಎಚ್ಚರಿಕೆಯಿಂದ ನಡೆಯಬೇಕು
## ಶ್ರೀವಿಜಯದಾಸರ ಅಪ್ಪಣೆ

ರಾಗ - ಪಂತುವರಾಳಿ ತಾಳ - ಆದಿ

ಎಚ್ಚತ್ತು ಇರು ಕಂಡ್ಯಾಮನವೆ ॥ ಪಲ್ಲ ॥
ನಮ್ಮ ಅಚ್ಯುತನಂಘ್ರಿಯ ನೆನೆಕಂಡ್ಯಾ ಮನವೆ ॥ ಅ.ಪ. ॥

ಅಡದಿರುವಾದಗಳನು ಕೊಂಡಾಡದಿರಿನ್ನು ಚಿಲ್ಲರೆ ದೈವಗಳನು । ಬೇಡದಿರುಭಯ ಸೌಖ್ಯವನು ।
ನೀ ಮಾಡದಿರಿನ್ನು ದುರ್ಜನರ ಸೇವೆಯನ್ನು । ಸಜ್ಜನರ ದ್ವೇಷವನ್ನು ॥ ೧ ॥

ನರಜನ್ಮ ಬರುವುದೇ ಕಷ್ಟ ಇದು ತಿಳಿದುನೋಡು ವಿಪ್ರತ್ವಶ್ರೇಷ್ಠ । ಮರಳಿಬಾಹುದು ಉತ್ಕೃಷ್ಟ
ನಮ್ಮ ಮರುತ ಮತವ ಪೊಂದುವುದೇ ದುರ್ಘಟ ।ಕೇಳೆಲವೊ ಮರ್ಕಟ ॥ ೨ ॥

ಹಾಳು ಹರಟೆಗೆ ಪೋಗಬ್ಯಾಡ ಕಂಡ ಕೂಳುಗಳನು ತಿಂದು ಒಡಲ್ಹರಿಯ ಬೇಡ ಕಾಲ ವ್ಯರ್ಥ
ಕಳೆಯಬೇಡ ನಿನ್ನ ಪ್ರಾರಬ್ಧ ಭೋಗಕ್ಕೆ ಮನ ಸೋಲಬೇಡ ಶ್ರೀಹರಿ ದಯಮಾಡ ॥ ೩ ॥

ಅನ್ಯ ಸ್ತ್ರೀಯರ ನೋಡಬ್ಯಾಡ ಹಿಂದೆ ಮಣ್ಣು ಗೂಡಿದರು ನೀ ತಿಳಿದುಕೋ ಮೂಢ
ಅನ್ಯಶಾಸ್ತ್ರವನೋದಬ್ಯಾಡ ನಮ್ಮ ಪೂರ್ಣಪ್ರಜ್ಞರ ಬೋಧ ತಿಳಿದುಕೋ ಗಾಢ । ಮೈ ಮರೆತಿರಬೇಡ।

ಗೋ ವಿಪ್ರರ ಸೇವೆ ಮಾಡೋ । ಸೋಹಂ ಭಾವಗಳನು ಬಿಟ್ಟು ದಾಸತ್ವ ಕೂಡೋ ಕೇವಲ ವೈರಾಗ್ಯ
ಮಾಡೋ । ಎಂಟು ಝಾವಗಳಲಿ ಒಮ್ಮೆ ಹರಿಯ ಕೊಂಡಾಡೋ ಲಜ್ಜೆಯನೀಡಾಡೋ । ೫ ।

ನಾನು ಎಂಬುದು ಬಿಡು ಕಂಡ್ಯಾ ನಿನ್ನ ಮಾನಾಭಿಮಾನಕ್ಕೆ ಹರಿಯನ್ನು ಕಂಡ್ಯಾ ಜ್ಞಾನಿಗಳೊಳಗಾಡೋ
ಕಂಡ್ಯಾ । ವಿಷಯ ಜೇನೆಂದು ಮೆದ್ದರೆ ಅದು ವಿಷ ಕಂಡ್ಯಾ ಬೀಳುವಿ ಯಮಗೊಂಡ್ಯಾ ॥ ೬ ॥

ಕಷ್ಟ ಪಡದೇ ಸುಖ ಬರದು ಕಂಗೆಟ್ಟ ಮೇಲೆನ್ನುತಾ ಕಷ್ಟ ತಿಳಿಯೋದು । ದುಷ್ಟ ವಿಷಯ ಬುದ್ಧಿ
ಜರಿದು ವಿಜಯವಿಠ್ಠಲನೆಂದು ಕೂಗದೆ ಮುಕ್ತಿ ಬರದು । ಕೂಗೆಲವೊ ಬಾಯ್ದೆರೆದು ॥ ೭ ॥

## ಸುಲಭಪೂಜೆ

(ಬಲವಿಲ್ಲದವರು ಎಂದರೆ ಜ್ಞಾನಬಲ, ದೈಹಿಕ ಬಲ - ಇಲ್ಲದವರು ಎಂದು ಅರ್ಥ)
ಈ ಹಾಡನ್ನು ಕಂಠಪಾಠಮಾಡಿ ಆಯಾ ಹೊತ್ತಿನಲ್ಲಿ ತಪ್ಪದೇ ಸ್ಮರಿಸುವುದು.

ರಾಗ - ಭಾಗೇಶ್ವರಿ ತಾಳ - ಆದಿ

ಸುಲಭಪೂಜೆಯ ಮಾಡಿ ಭಲವಿಲ್ಲದವರು ॥ ಪ ॥ ನಳಿನನಾಭನ ಪಾದ ನಳಿನ ಸೇವಕರು ॥ ಅ ॥
ಇರುಳು ಹಚ್ಚುವ ದೀಪ ಹರಿಗೆ ನೀರಾಜನವೋ । ಮರೆಮಾಡುವ ವಸ್ತ್ರ ಪರಮಮಡಿಯೋ ॥
ತಿರುಗಾಡಿದಣಿಯುವುದೇ ಹರಿಗೆ ಪ್ರದಕ್ಷಿಣೆಯೋ । ಹೊರಳಿ ಮಲಗುವದೆಲ್ಲ ಹರಿಗೆವಂದನೆಯೋ ॥ ೧ ॥

ನುಡಿವ ಮಾತುಗಳೆಲ್ಲ ಕಡಲಶಯನನ ಜಪವೋ । ಮಡದಿ ಮಕ್ಕಳು ಮತ್ತೆ ಒಡೆಯನಾ ಪರಿವಾರ ।
ನಡುಮನೆಯು ಅಂಗಳವು ಉಡುಪಿ ವೈಕುಂಠಗಳೋ । ಎಡಬಲದ ಮನೆಯವರೇ ಕಡುಭಾಗವತರು ॥ ೨ ॥

ಹೀಗೆ ಅನುದಿನ ತಿಳಿದು ಹಿಗ್ಗುವ ಜನರಾ ಅವರೋಗ ಪರಿಹರವು । ಮೂರ್ಜಗದಿ ಸುಖವು ॥
ಹೋಗುತಿದೆ ಈ ಆಯು ಬೇಗದಿಂದಲಿ ನಮ್ಮ । ಯೋಗೇಶ ಪುರಂದರವಿಠಲನ್ನ ನೆನೆನೆನೆದು ॥ ೩ ॥

# ಮಾಧ್ವರ ಮನೆ ಘಂಟೆ ಏನು ಹೇಳುತ್ತೇ ಗೊತ್ತೇ?



ವಿನಯ ಶಿಕ್ಷಣ

ಕೇಳಿ-ಅದು ಹೇಳುತ್ತೇ-ಬಾಲ ಮುದುರಿಕೊಂಡು ಬಾಯಿ ಮುಚ್ಚಿಕೊಂಡು ಭಕ್ತಿಯಿಂದ ಮೊದಲು ಕೈಮುಗಿದು ಹೇಳಿದ ಹಾಗೆ ಕೇಳಿ, ಆಮೇಲೆ ಮುಂದಿನ ವಿಚಾರ ಅಂತ. ಇದೇ ಮಿಲಿಟರಿ ಶಿಸ್ತಿನ ಮೂಲ.

ಹಾಗಿಲ್ಲದಿದ್ದರೆ, ಯದ್ವಾತದ್ವಾರಂಪರಾದ್ಧಾಂತವಾಗಿ ಅವ್ಯವಸ್ಥೆಯ ಪರಮಾವಧಿ ಮುಟ್ಟಿ ಸ್ವಸ್ಥತೆ ನಾಶವಾಗಿ ಫಜೀತಿಃ ಪಜೀತಿಃ ಪರಾರಿಃ ಪರಾರಿಃ ಅಂತ್ಯವಾಗುತ್ತದೆ. ಯಾವ ಕೆಲಸವನ್ನೂ ಸರಿಯಾಗಿ ಮಾಡಿಕೊಳ್ಳಲಾರೆವು. ಅದಕ್ಕೇ ಸಾತ್ವಿಕರಿಗೆ ಮೊದಲು ಇರಬೇಕಾದ ಗುಣ ವಿನಯ, ಭಕ್ತಿ, ಶಿಸ್ತು, ಸಂಯಮ ಮುಂತಾದವುಗಳು.



ಅವಿಧೇಯರಿಗೆ ಶಿಕ್ಷಾಕ್ರಮ

"ಭುವನಾದ್ಭುತಮಧ್ವಚೇಷ್ಟಿತಂ" - ಶ್ರೀಮುಖ್ಯಪ್ರಾಣದೇವರು ಬ್ರಹ್ಮಾಂಡವನ್ನು ೨ ತುಂಡು ಮಾಡಿ ತಾಳ ಹೊಡೆಯಬಲ್ಲರು. ತ್ರಿವಿಧ ಜೀವರಾಶಿಗಳಲ್ಲಿ ಅವರವರ ಸ್ವಭಾವದಂತೆ ಉಸಿರಾಟವೇ ಮೊದಲಾದ ಸಕಲ ಕಾರ್ಯಗಳಿಗೂ ಪ್ರಚೋದಿಸುವವರು, ಶ್ರೀಹನುಮಂತದೇವರಾಗಿ ಬಂದು ಸಮುದ್ರದ ಮೇಲೆ ಹಾರಿ ರಾಮಸಂದೇಶವನ್ನು ಸೀತಾ ಅಮ್ಮನವರಿಗೆ ತಿಳಿಸಿ ವನಭಂಗ ಮಾಡಿ, ದೊಡ್ಡ ಮರಗಳನ್ನು ಕಿತ್ತು, ರಾಕ್ಷಸರನ್ನು ಕೊಂದು, ಲಂಕಾದಹನ ಮಾಡಿ ಸೀತಾಸಂದೇಶವನ್ನು ಶ್ರೀರಾಮದೇವರಿಗೆ ತಿಳಿಸಿ, ಗಂಭೀರವಾಗಿ ವಿನಯಾಭರಣಭೂಷಿತರಾಗಿ ಅಷ್ಟಾಂಗ ವಿಶಿಷ್ಟಚೇಷ್ಟಿತರಾಗಿ, ಶ್ರೀರಾಮಪಾದಗಳಿಗೆ ನಮಿಸಿ ಸುಮ್ಮನಿದ್ದರು. ಶ್ರೀರಾಮದೇವರು ದಯಾರ್ದ್ರ ದೃಷ್ಟಿಯಿಂದ ಶ್ರೀಹನುಮಂತದೇವರನ್ನು ನೋಡಿ, ತಮ್ಮ ಅಮೃತಹಸ್ತವನ್ನು ಅವರ ಶಿರಸ್ಸಿನಲ್ಲಿ ಇಟ್ಟು, ಕೊಂಡಾಡಿದಾಗ, "ಸ್ವಾಮಿ ಎಲ್ಲಾ ನಿನ್ನ ದಯ" ಅಂತ ಒಂದೇ ಮಾತಾಡಿದರು. ಇದೇ ನಿಜವಾದ ವಿನಯಗುಣ. ಹನುಮಂತದೇವರಿಂದ ನಾಶರಾದ ದೈತ್ಯರೆಲ್ಲಾ ಪುನಃ ಹುಟ್ಟಿ ಜಗಳಕ್ಕೆ ಬಂದರು. ಆಗ ಶ್ರೀಭೀಮಸೇನದೇವರಾಗಿ ಬಂದು ಗದಾಪ್ರಹಾರದಿಂದ ಅವರನ್ನೆಲ್ಲಾ ಧ್ವಂಸ ಮಾಡಿದರು. ಶ್ರೀಹನುಮಂತದೇವರು ಶ್ರೀಭೀಮಸೇನ ದೇವರುಗಳಿಂದ ಹತರಾದ ದೈತ್ಯರು ಭಗ್ನ ಬಾಹುಬಲರಾಗಿ ಇನ್ನೂ ಪುನಃ ಯುದ್ಧ ಮಾಡಿ ಗೆಲ್ಲಲು ಸಾಧ್ಯವಿಲ್ಲವೆಂದು ನಿಶ್ಚಯಿಸಿ ವಾಗ್ಯುದ್ಧ ಮಾಡಿ ಗೆಲ್ಲೋಣ ಅಂತ ತೀರ್ಮಾನ ಮಾಡಿ ತಪಸ್ಸಿನಿಂದ ರುದ್ರದೇವರಿಂದ ವರ ಪಡೆದು ಬ್ರಾಹ್ಮಣ ಕುಲದಲ್ಲಿ ಹುಟ್ಟಿ ವೇದಶಾಸ್ತ್ರಗಳಿಗೆ ಅಪಾರ್ಥ ಮಾಡಿ ನಿಜವಾದ ತತ್ವಗಳನ್ನು ಕೆಡಿಸಿ, ಸಜ್ಜನರಿಗೆ ಸಂಶಯಗಳನ್ನು ತಂದ್ಹಾಕಿ ಹಾವಳಿ ಮಾಡಲು ಪ್ರಾರಂಭಿಸಿದರು. ಆಗ ಶ್ರೀಹರಿಯ ಆಜ್ಞೆಯಿಂದ ಶ್ರೀವಾಯುದೇವರು ಬಾಹುಯದ್ಧದ ಬದಲು ವಾಗ್ಯುದ್ಧ ಮಾಡುವುದಾಗಿ ನಿಶ್ಚಯಿಸಿ, ಶ್ರೀಮಧ್ವಾವತಾರ ಮಾಡಿ ಸನ್ಯಾಸ ಸ್ವೀಕರಿಸಿ ದಂಡಪಾಣಿಗಳಾಗಿ ಬಂದು ವಾಗ್ಯುದ್ಧಗಳಿಂದ ದುಷ್ಟಮತಗಳನ್ನು ಖಂಡಿಸಿ ಸಚ್ಛಾಸ್ತ್ರಗಳನ್ನು ರಚಿಸಿಕೊಟ್ಟು ಸಜ್ಜನರನ್ನು ಉದ್ಧಾರ ಮಾಡಿದರು. ಇಂತಹ ಭುವನಾದ್ಭುತ ಮಧ್ವಚೇಷ್ಟಿತಂ ಎಂಬ ಮಹಿಮೋಪೇತರಾದ ಶ್ರೀಮುಖ್ಯಪ್ರಾಣದೇವರು ಮಾಧ್ವರ ಮನೆ ಘಂಟೆ ಮೇಲೆ ಬಾಲಮುದುರಿಕೊಂಡು ಕೈಮುಗಿದು, ಭಕ್ತಿಯಿಂದ ವಿನಯದಿಂದ ನಿಂತಿದ್ದಾರೆ. ಇದರಿಂದ ನಾವು ಯಾವುದೇ ವಿಚಾರದಲ್ಲಿ ಶ್ರೇಷ್ಠತ್ವ ಪಡೆದಿದ್ದರೆ ಅದು ಶ್ರೀಹರಿವಾಯುಗಳು ಕೊಟ್ಟ ಅನುಗ್ರಹ ಅಂತ ತಿಳಿದು ವಿನಯದಿಂದ ಬಾಳಬೇಕು. ಹಾಗಿಲ್ಲದೆ, ನಾನೇ ಇದಕ್ಕೆ ಕಾರಣ ಅಂತ ಸ್ವತಂತ್ರ ಕರ್ತೃತ್ವ ಜ್ಞಾನ ಬಂದರೆ, ದೇವರಿಂದ ಸ್ವತಂತ್ರ ಕರ್ತೃತ್ವ ಅಭಿನ್ನವಾದ್ದರಿಂದ ನಾನೇ ದೇವರು ಅಂತ ಐಕ್ಯ ಚಿಂತನೆ ಮಾಡಿದಂತಾಯಿತು ಇದರ ಫಲ. ಅಂಧತಮಸ್ಸು ಪ್ರಾಪ್ತಿ. ಆದ್ದರಿಂದ ಎಲ್ಲವೂ ಭಗವದಧೀನ, ನಾನು ಪರಾಧೀನ ಅಂತ ತಿಳಿದು ವಿನಯವಂತರಾಗಬೇಕು.

ಇದೇ ಮಾಧ್ವರಮನೆ ಘಂಟೆ ಹೇಳುತ್ತಿರುವುದು. ಇದನ್ನು ಮೀರಿದರೆ, ಶ್ರೀವ್ಯಾಸರಾಜರು ಪ್ರತಿಷ್ಠಿಸಿದ ನೂರಾರು ವೀರಾಂಜನೇಯರ ಭಂಗಿ ನೋಡಿದರೆ ಅರ್ಥವಾಗುತ್ತೆ. ಬಾಲಕ್ಕೆ ಘಂಟೆ ಕಟ್ಟಿಕೊಂಡು ಹಾರ ಕಾಲು ಹಾಕಿ ದೈತ್ಯರನ್ನು ಕಾಲಲ್ಲಿ ತುಳಿದು ಹಾಕಿ ಕಪಾಳಕ್ಕೆ ಹೊಡೆದು ಹಲ್ಲು ಮುರಿಯುತ್ತೇನೆ ಅಂತ ಬಲಗೈಯನ್ನು ಮೇಲಕ್ಕೆ ಎತ್ತಿದ್ದಾರೆ. ಶ್ರೀಹನುಮಂತದೇವರ ಬಾಲ ಎಷ್ಟು ಉದ್ದ ಬೇಕಾದರೂ ಆಗುತ್ತದೆ. ಅದನ್ನು ಭಕ್ತಿಯಿಂದ ಹಿಡಿದುಕೊಂಡರೆ, ಸಂಸಾರದಿಂದ ಬಿಡುಗಡೆ ಮಾಡಿ ಶ್ರೀವೈಕುಂಠಕ್ಕೆ ಒಯ್ಯುತ್ತಾರೆ. ಅಲ್ಲಿ ದುಃಖರಹಿತವಾದ ಶಾಶ್ವತಸುಖ; ಉದಾಸೀನದಿಂದ ಸುಮ್ಮನೆ ಹಿಡಿದುಕೊಂಡರೆ ಹೆಚ್ಚಿಗೆ ದುಃಖ, ಕಡಿಮೆ ಸುಖ ಇರುವ ಸಾಂತಾನಿಕ ಲೋಕ ಪ್ರಾಪ್ತಿ. ದ್ವೇಷದಿಂದ ಹಿಡಿದುಕೊಂಡರೆ ಲಂಕಾದಹನ, ಬರೇ ದುಃಖಮಯವಾದ ನಿತ್ಯನರಕ ಪ್ರಾಪ್ತಿ.

## ಶ್ರೀರಾಘವೇಂದ್ರಗುರುಗಳ ವೃಂದಾವನ ಚಿಂತನಾ ಕ್ರಮ

ಶ್ರೀರಾಘವೇಂದ್ರ ಸ್ವಾಮಿಗಳು ವೃಂದಾವನದ ಕೆಳಭಾಗದಲ್ಲಿ (ಭೂಮಿಯಲ್ಲಿ) ಊರ್ಧ್ವಪುಂಡ್ರ ಶ್ರೀಮುದ್ರಾಧಾರಣ, ದಂಡಕಮಂಡಲು, ತುಳಸೀಮಣಿ, ಕಮಲಾಕ್ಷಿಮಣಿಗಳ ಹಾರ, ಕಾಷಾಯ ವಸ್ತ್ರಗಳನ್ನು ಧರಿಸಿ ಹಸನ್ಮುಖರಾಗಿ ಕೃಪಾದೃಷ್ಟಿಯಿಂದ ನಮ್ಮನ್ನೇ ನೋಡುತ್ತಾ ಪ್ರಕಾಶಮಾನವಾದ ತೇಜೋಮಯವಾದ ಸುಂದರರೂಪದಿಂದ ಪದ್ಮಾಸನಾರೂಢರಾಗಿ ವಿರಾಜಿಸುತ್ತಿದ್ದಾರೆ ಎಂದು ಮನದಲ್ಲಿ ಚಿಂತಿಸಬೇಕು.

ವೃಂದಾವನದ ಕೆಳಭಾಗದಲ್ಲಿ ೭೦೦ ಸಾಲಿಗ್ರಾಮಗಳು ಇವೆ. ಅದರ ಮೇಲೆ ಒಂದು ಶಿಲೆ ಮುಚ್ಚಿ, ಅದರಲ್ಲಿ ವಜ್ರ ವೈಢೂರ್ಯ, ಬಂಗಾರ ಮುಂತಾದ ನವರತ್ನಗಳನ್ನು ಲಕ್ಷ್ಮೀಸನ್ನಿಧಾನಕ್ಕಾಗಿ ಇಟ್ಟು ಅದರ ಮೇಲೆ ಒಂದು ಶಿಲೆ ಮುಚ್ಚಿರುತ್ತಾರೆ. ಅದರ ಮೇಲೆ ಮೃತ್ತಿಕೆ ಇರುತ್ತದೆ. ಅದರಲ್ಲೇ ರಾಯರ ಸನ್ನಿಧಾನವಿರುತ್ತದೆ. ಶ್ರೀರಾಯರ ವೃಂದಾವನದಲ್ಲಿ ಎಲ್ಲಾ ಗುರುಗಳ, ದೇವತೆಗಳ ಸನ್ನಿಧಾನವಿರುತ್ತದೆ. ಶ್ರೀಭಾರತೀಪತಿಗಳಾದ ವಾಯುದೇವರ ಸನ್ನಿಧಾನವಿರುತ್ತದೆ. ಶ್ರೀರಾಮ ರೂಪದಿಂದ ಭಕ್ತರಿಗೆ ಊಟ(ಉದ್ಯೋಗ) ಕೊಡುತ್ತಾರೆ. ಶ್ರೀಕೃಷ್ಣರೂಪದಿಂದ ಮದುವೆ, ಮುಂಜಿ ಮುಂತಾದ ಮಂಗಳಕಾರ್ಯ ಮಾಡಿಸುತ್ತಾರೆ. ಶ್ರೀವೇದವ್ಯಾಸರೂಪದಿಂದ ಜ್ಞಾನಭಕ್ತಿವೈರಾಗ್ಯ ಶಾಸ್ತ್ರಜ್ಞಾನ ಕೊಡುತ್ತಾರೆ. ಶ್ರೀನರಸಿಂಹರೂಪದಿಂದ ರೋಗ ಭೂತಪ್ರೇತಪಿಶಾಚಿಪೀಡೆಗಳ ಪರಿಹಾರ ಮಾಡುತ್ತಾರೆ. ಈ ರೀತಿ ಶ್ರೀರಾಯರ ವೃಂದಾವನ ಚಿಂತನೆ ಮಾಡಬೇಕು. "ಇಂಥಾ ವೃಂದಾನವನದ ಮುಂದೆ ಒಂದು ಬಂಗಾರದ ತಟ್ಟೆಯಲ್ಲಿ ಬಾದಾಮಿ, ಗೋಡಂಬಿ, ದ್ರಾಕ್ಷಿ, ಉತ್ತತ್ತಿ, ಕಲ್ಲುಸಕ್ಕರೆ (ಪಂಚಕಜ್ಜಾಯ) ಇಟ್ಟು ಒಂದು ಸಾವಿರ ಬಂಗಾರದ ಪ್ರಣತಿಗಳಲ್ಲಿ ತುಪ್ಪದ ದೀಪವನ್ನು ಹಚ್ಚಿದ್ದೇವೆ" ಎಂದು ಮನಸಾ ಚಿಂತನೆ ಮಾಡಿ ಭಕ್ತಿಯಿಂದ ನಮಸ್ಕಾರ ಮಾಡುವುದು.

## ಇಂಥಾ ಗುರುಗಳಲ್ಲಿ ಪ್ರಾರ್ಥನೆ

ನನಗೇನೂ ಗೊತ್ತಿಲ್ಲ, ನಿಮ್ಮ ಪಾದಕ್ಕೆ ಬಿದ್ದೆ, ಕೆಟ್ಟದ್ದು ಬಿಡಿಸಿ, ಒಳ್ಳೇದು ಕೊಟ್ಟು, ದುಷ್ಟರ ಸಹವಾಸ ತಪ್ಪಿಸಿ, ಸಜ್ಜನರ ಸಹವಾಸ ಕೊಟ್ಟು, ನಿಮ್ಮ ಹಾದೀಗೆ ಎಳೆದುಕೊಂಡು ಉದ್ಧಾರ ಮಾಡಿ ಸ್ವಾಮಿ. ಅಂತ್ಯಕಾಲಕ್ಕೆ ಅನ್ಯವಾರ್ತೆಗೆ ಮನಸ್ಸು ಹೋಗದೆ ಗುರುಗಳಂತರ್ಯಾಮಿ ಶ್ರೀಹರಿಯಲ್ಲಿ ಮನಸ್ಸು ಬರುವಂತೆ ಅನುಗ್ರಹ ಮಾಡಿ ಸ್ವಾಮಿ.

| | | |
|---|---|---|
| ಲೌಕಿಕವಾದ ಕೆಟ್ಟದ್ದು | - | ದುರ್ಗುಣಗಳು; |
| ಪಾರತ್ರಿಕ ಕೆಟ್ಟದ್ದು | - | ಮಿಥ್ಯಾಜ್ಞಾನ, ಅನ್ಯಥಾ ಜ್ಞಾನ |
| ಲೌಕಿಕ ಒಳ್ಳೆಯದು | - | ಭಾಗವತ ಧರ್ಮಾದಿ ಒಳ್ಳೆಯ ಗುಣಗಳು; |
| ಪಾರತ್ರಿಕ ಒಳ್ಳೆಯದು | - | ಯಥಾರ್ಥಜ್ಞಾನದಿಂದ ನಿರ್ದುಃಖಾನಂದ ಭರಿತವಾದ ಶಾಶ್ವತಸುಖ-ದೀಕ್ಷೆ |

(ರಾಯರದು - ವೃಂದಾವನ ; ತುಳಸಿಕಟ್ಟೆಯದು - ಬೃಂದಾವನ)

# ಮಾತ್ಸರ್ಯ ಲೋಭ ಇಲ್ಲದವರೇ ಸಜ್ಜನರು (ಸಾಧಕರು)

## ಸಂಸಾರದಿಂದ ಬಿಡುಗಡೆಯಾಗಿ ನಿರ್ದುಃಖಾನಂದ ಮೋಕ್ಷ ಬಯಸುವ ಸಾಧಕರಿಗೆ

### ೧. ಇರಬಾರದ ಗುಣಗಳು

ಇನ್ನೊಬ್ಬರಲ್ಲಿರುವ - ವಿದ್ಯೆ - ಪಾಂಡಿತ್ಯ - ರೂಪ - ಶಕ್ತಿ - ಔದಾರ್ಯ - ಕುಲ - ಒಳ್ಳೆಯ ಆಚರಣೆ - ಶ್ರದ್ಧೆ ಮುಂತಾದ ಒಳ್ಳೆಯ ಗುಣಗಳ ಬಗ್ಗೆ ಹೊಟ್ಟೆಕಿಚ್ಚು ಪಡುವುದು - ಮತ್ತು ಇವುಗಳ ಹಿನ್ನೆಲೆಯಿಂದ ಅವರಿಗೆ ಕೇಡು ಮಾಡುವುದು. ನಮಗೆ ಒದಗಿದ ಕಷ್ಟ ಮತ್ತು ದುಃಖಗಳಿಗಾಗಿ ಪರರನ್ನು ಮತ್ತು ದೇವರನ್ನು ನಿಂದಿಸುವುದು.

ನಮ್ಮಲ್ಲಿರುವ ವಿದ್ಯೆ - ಪಾಂಡಿತ್ಯ - ಐಶ್ವರ್ಯ - ರೂಪ - ನಿಷ್ಠಾವಂತ ಸದಾಚಾರಣೆ ಮುಂತಾದ ಗುಣಗಳಿಗಾಗಿ ಅಹಂಕಾರಪಡುವುದು. ವಿದ್ಯೆಯನ್ನು ಶಿಷ್ಯರಿಗೆ ಪಾಠ ಹೇಳದೆ ಇರುವುದು ಅಥವಾ ಏನಾದರೂ ಪ್ರತಿಫಲ ನಿರೀಕ್ಷಿಸಿ, ಪಾಠ ಹೇಳುವುದು, ಐಶ್ವರ್ಯ ಕೊಟ್ಟಾಗ ಸತ್ಪಾತ್ರರಲ್ಲಿ ಉದಾರವಾಗಿ ದಾನ ಮಾಡದೆ ಲೋಭ ಮಾಡುವುದು, ಭೋಜನ ಪಂಕ್ತಿಯಲ್ಲಿ ವಂಚನೆ ಮಾಡುವುದು, ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯವೆಂಬ ಅರಿಷಡ್ವರ್ಗಗಳಲ್ಲೇ ಎಲ್ಲಾ ಕೆಟ್ಟಗುಣಗಳೂ ಅಂತರ್ಭಾವವಾಗಿರುತ್ತದೆಯಾದ್ದರಿಂದ ಅರಿಷಡ್ವರ್ಗಗಳ ಅಧೀನರಾಗುವುದು.

### ೨. ಇರಬೇಕಾದ ಗುಣಗಳು

ಇರಬಾರದ ಗುಣಗಳು ಎಂದು ಹಿಂದೆ ಹೇಳಿರುವ ವಿಚಾರಕ್ಕೆ ವಿರೋಧವಾದುದೇ ಇರಬೇಕಾದ ಗುಣಗಳು ಎಂದು ತಿಳಿದುಕೊಳ್ಳುವುದು. ಇದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಿ. ತಾಳುವಿಕೆಗಿಂತ ತಪವು ಇಲ್ಲ - ಕೇಳಬಲ್ಲವರಿಗೆ ಹೇಳುವೆನು ಸೊಲ್ಲ. ದುಷ್ಟ ಮನುಜರು ನುಡಿವ ನಿಷ್ಠೂರದ ನುಡಿ ತಾಳು - ಕಷ್ಟಬಂದರೆ ತಾಳು ಕಂಗೆಡದಿರು ಪಕ್ಷೀಶ ಹಯವದನ ಶರಣೆಂದು ಬಾಳು. - ಎಂದು ಶ್ರೀವಾದಿರಾಜಸ್ವಾಮಿಗಳು; ಬಂದೆದ್ದೆಲ್ಲಾ ಬರಲೀ ಗೋವಿಂದನದಯವೊಂದಿರಲಿ-ಎಂದು ಶ್ರೀಪುರಂದರದಾಸರು ; ನಿನ್ನ ಪ್ರಾರಬ್ಧ ಕರ್ಮಕ್ಕೆ ಮನಸೋಲಬೇಡ - ಎಂದು ಶ್ರೀವಿಜಯದಾಸರು, ಕ್ಲೇಶಾನಂದಗಳೀಶಾಧೀನ - ಎಂದು ಶ್ರೀಜಗನ್ನಾಥದಾಸರು ಹೇಳಿರುತ್ತಾರೆ.

ಈ ರೀತಿ ತಿಳಿದುಕೊಂಡು ಆದಷ್ಟು ಮಟ್ಟಿಗೆ ಪರರಿಗೆ ಪೀಡೆ ಮಾಡದೆ ಆದಷ್ಟು ಉಪಕಾರಿಗಳಾಗಿ - ದಯಾಗುಣ - ಕ್ಷಮಾಗುಣಗಳನ್ನು ಬೆಳೆಸಿಕೊಂಡು - ಲಾಭನಷ್ಟ - ಜಯ ಅಪಜಯ, ಮಾನ ಅವಮಾನಗಳು - ಯಾವ ಜಡ ಮತ್ತು ಚೇತನರಿಂದ ಬರುತ್ತದೋ ಅಧಿಷ್ಠಾನಗಳ ಬಗ್ಗೆ ವಿಕಾರಗೊಳ್ಳದೆ ಅವರವರಲ್ಲಿರುವ ಶ್ರೀಹರಿಯಿಂದ ಆಯಿತು ಎಂದು ತಿಳಿದುಕೊಳ್ಳುವುದು, ಇದೇ ರೀತಿ ಇನ್ನೂ ಒಳ್ಳೆಯ ಗುಣಗಳನ್ನು ಜಾರಿಯಲ್ಲಿಟ್ಟುಕೊಳ್ಳುವುದು - ಏನೇ ಕಷ್ಟಬರಲಿ ಶ್ರೀಹರಿಯು ನಮ್ಮನ್ನು ಕಾಪಾಡುತ್ತಾನೆ ಎಂದು ನಂಬಿಕೆ ಇಡುವುದು.

### ೩. ಇರಬಾರದ ಜ್ಞಾನಗಳು

ಮಿಥ್ಯಾ ಜ್ಞಾನ - ಅನ್ಯಥಾ ಜ್ಞಾನ - ಭ್ರಾಂತಿ - ಸಂದೇಹ - ನನ್ನ ಸಮಾನ ಯಾರಿದ್ದರೆ - ನಾನು ಬಹಳ ಸುಖಿ, ಈ ಸಂಸಾರ ಬಹಳ ಚೆನ್ನಾಗಿದೆ, ಮತ್ತು ಶಾಶ್ವತವಾಗಿರುತ್ತದೆ ಎಲ್ಲಾ ನಾನೇ ಮಾಡಿಕೊಂಡಿದ್ದು, ನಾನು ಏನು ಬೇಕಾದರೂ ಮಾಡಬಲ್ಲೆ, ವೇದ - ಶಾಸ್ತ್ರ - ಪುರಾಣ ಎಲ್ಲಾ ಯಾರೋ ಬರೆದುಕೊಂಡಿದ್ದು, ದೇವರು ಸ್ವರ್ಗ, ನರಕ, ಪಾಪ-ಪುಣ್ಯ ಏನೂ ಇಲ್ಲ - ಯಾವ ಕರ್ಮಾನುಷ್ಠಾನ, ಪೂಜೆ - ವ್ರತ ಬೇಕಿಲ್ಲ, ಸತ್ತಮೇಲೆ ಏನೂ ಇಲ್ಲವಾದ್ದರಿಂದ ಬದುಕಿರುವಾಗಲೇ

ಸಾಲ ಮಾಡಿ ತುಪ್ಪ ತಿಂದು ಭೋಗ ಮಾಡಿ ಸುಖಪಟ್ಟು ಇನ್ನೊಬ್ಬರ ತಲೆಯ ಮೇಲೆ ಸಾಲ ಹೊರಿಸಿ ಹೋಗಿ ಬಿಡುವುದು ಮುಂತಾದವುಗಳು.

## ೪. ಇರಬೇಕಾದ ಜ್ಞಾನಗಳು

ಹಿಂದೆ ಹೇಳಿದ ಎಲ್ಲಾ ಇರಬಾರದ ಜ್ಞಾನಗಳಿಗೂ ವಿರೋಧವಾದ ಜ್ಞಾನಗಳು ಇರಬೇಕು.

ಶ್ರೀವಾಯುದೇವರ ಶಾಸ್ತ್ರಕ್ಕೆ ವಿರುದ್ಧವಾದ ಶಾಸ್ತ್ರಗಳಲ್ಲಿ ಸಾದಕಗಳಿಲ್ಲದೇ - ಭಾದಕಗಳಿರುವುದರಿಂದ ಅವುಗಳನ್ನು ಖಂಡಿಸಿ ಭಾದಕಗಳಿಲ್ಲದ ಸಾಧಕಗಳಿರುವ ಶ್ರೀವಾಯುದೇವರ ಶಾಸ್ತ್ರಗಳನ್ನು ಸ್ಥಾಪನೆ ಮಾಡುವುದು.

ಪರಮಸ್ವತಂತ್ರ ಶ್ರೀಹರಿಯೊಬ್ಬನೇ - ಈ ಜೀವ ಜಡಾತ್ಮಕವಾದ ಜಗತ್ತು ಸಂಸಾರ ಜೀವನ ಅಶಾಶ್ವತ ಮತ್ತು ಬದಲಾವಣೆಯಾಗುವ ಸ್ವಭಾವವುಳ್ಳದ್ದು - ಎಲ್ಲವೂ ಶ್ರೀಹರಿಯ ಅಧೀನ, ಅವನು ಎಲ್ಲಕ್ಕೂ ಸ್ವಾಮಿ, ನನಗೂ ಅವನೇ ಸ್ವಾಮಿ - ನಾನು ಅವನವನು (ಅವನಿಗೆ ಬೇಕಾದವನು). ನಮ್ಮ ವಸ್ತುಗಳಿಂದ ನಾವೇ ಅಗಲಬಹುದು ಅಥವಾ ಅವೇ ನಮ್ಮಿಂದ ಅಗಲಬಹುದು, ಇದರಿಂದ ಯಾವ ವಿಕಾರಕ್ಕೂ ಒಳಗಾಗಬಾರದು. ಮರಣವೇ ಮೊದಲಾದ ಸಾವಿರಾರು ಕಷ್ಟಗಳು ಒಟ್ಟಿಗೇ ಬಂದರೂ ಅವನು ನನ್ನನ್ನು ಕೈಬಿಡದೆ ಕಾಪಾಡುತ್ತಾನೆ ಎಂಬ ದೀಕ್ಷೆ ಧೃಡ ನಂಬಿಕೆಯೇ, ಅಂತರಂಗ ದೀಕ್ಷೆ. ಇದು ಬಹಳ ಮುಖ್ಯ.



ಶ್ರೀ ೧೦೮ ಶ್ರೀಸತ್ಯಧ್ಯಾನತೀರ್ಥಶ್ರೀಪಾದಂಗಳವರು

'ಶ್ರೀಮಣಿಮಂಜರೀ'ಯನ್ನು ಮಧ್ವಶಾಸ್ತ್ರದ ಮೊದಲನೇ ಪಾಠವೆಂದು ಮಂಡನಮಾಡಿ, ಗೀತಾಪ್ರತಿಪದಾರ್ಥ, ಸಾಂಬಗಳ ಹಸ್ತಿಕ, ಸಿವಿಲ್‌ಸೂಟ್, ಮುಂತಾದ ಗ್ರಂಥಗಳನ್ನು ರಚನೆ ಮಾಡಿ ಸಾಮಾನ್ಯ ಜನಕ್ಕೆ ಮಧ್ವಶಾಸ್ತ್ರದ ಸಿದ್ಧಾಂತದ ಜ್ಞಾನವನ್ನು ಮತ್ತು ದೀಕ್ಷೆಯನ್ನು ಕೊಟ್ಟು ಉಪಕಾರ ಮಾಡಿದವರ

# ನಾನಾ ಸಂಖ್ಯಾನಗಳು

**ಆಚಾರ್ಯರು ಎಂದರೆ** - ಸತ್‌ಸಂಪ್ರದಾಯಗಳನ್ನು ತಾವು ಸರಿಯಾಗಿ ತಿಳಿದುಕೊಂಡು ಅದರಂತೆ ಆಚರಿಸಿ, ಇನ್ನೊಬ್ಬರ ತಪ್ಪು ತಿದ್ದಿ ಸರಿಯಾದುದನ್ನು ತಿಳಿಸುವವರು.

**ಆಚಾರ - ಆಚರಣೆ ಮಾಡುವುದು**

೧. **ಅನಾಚಾರ** : ಮಾಡಬೇಕಾದ ವಿಹಿತ ಆಚರಣೆ ಬಿಡುವುದು, ಇದಕ್ಕೆ ಕಾರಣ - ಅಜ್ಞಾನ - ದ್ವೇಷ - ಸೋಮಾರಿತನ - ಅನಾದರ. ಫಲ - ಪಾಪ ಸಂಪಾದನೆ - ನರಕಪ್ರಾಪ್ತಿ.

೨. **ದುರಾಚಾರ** : ಮಾಡಬಾರದ ನಿಷೇಧ ಕರ್ಮಗಳನ್ನು ಮಾಡುವುದು. ಇದಕ್ಕೆ ಕಾರಣ - ದ್ವೇಷ - ದುಷ್ಟ ಸಹವಾಸಗಳು. ಫಲ - ನರಕಪ್ರಾಪ್ತಿ.

೩. **ಸದಾಚಾರ** : ಹಿಂದೆ ಹೇಳಿದ ಎರಡು ಆಚಾರಗಳನ್ನು ಬೆರೆಸದೆ ಸ್ವೋಚಿತ ಕರ್ಮಗಳನ್ನು ಆಚರಿಸುವುದು. ಇದು ಕಾಮ್ಯಕರ್ಮವಾದರೆ ಸಂಸಾರ ಬಂಧನಕ್ಕೆ ಕಾರಣ, ಇದು ನಿಷ್ಕಾಮ ಕರ್ಮವಾದರೆ - ಅಂದರೆ ನಾನು ನನ್ನದು ಎಂಬುದನ್ನು ಬಿಟ್ಟು ಕೇವಲ ಶ್ರೀಹರಿ ಪ್ರೀತಿಗಾಗಿ ಮಾಡುವುದು. ಇದು ಸಂಸಾರ ಬಿಡುಗಡೆಗೆ ಕಾರಣ.

ಇದು ಆಡಂಬರವಾಗಿ ಪ್ರದರ್ಶನಕ್ಕಾದರೆ - ಅದು ಮೋಸ. ಫಲ ಅನಿಷ್ಟ ಪ್ರಾಪ್ತಿ, ಇದನ್ನು ಮಾಡಿದವನು ಹಾಳಾದ, ನೋಡಿದವನು ಉದ್ಧಾರವಾದ.

## ಜ್ಞಾನ - ತಿಳುವಳಿಕೆ

೧. **ಅಜ್ಞಾನ** : ತಿಳುವಳಿಕೆ ಇಲ್ಲದಿರುವುದು - ತಿಳಿದವರಲ್ಲಿ ಹೋಗಿ ತಿಳಿದುಕೊಳ್ಳದಿದ್ದರೆ ತಪ್ಪಾಗುತ್ತದೆ, ಆದ್ದರಿಂದ ತಿಳಿದುಕೊಳ್ಳಲು ಹೋಗಬೇಕು.

೨. **ಭ್ರಾಂತಿ ಜ್ಞಾನ** : 'ತದಭಾವೇಸತಿ ತತ್ಪ್ರಕಾರಕ ಜ್ಞಾನಂ' ಒಂದು ವಸ್ತು ಇಲ್ಲದೇ ಇರುವಾಗ ಇನ್ನೊಂದರಲ್ಲಿ ಅದರ ಸಾದೃಶ್ಯ ನೋಡಿ ಅದೇ ಎಂದು ತಿಳಿದುಕೊಳ್ಳುವುದು. ಉದಾಹರಣೆಗೆ : ಕತ್ತಲಿನಲ್ಲಿ ಸೊಟ್ಟವಾಗಿ ಬಿದ್ದಿದ್ದ ಹಗ್ಗವನ್ನು ನೋಡಿ ಹಾವು ಅಂತ ತಿಳಿದುಕೊಳ್ಳುವುದು.

೩. **ಸಂಶಯ ಜ್ಞಾನ** : "ಏಕಸ್ಮಿನ್ ಧರ್ಮಿಣಿ ಭಾಸಮಾನ ವಿರುದ್ಧ ಅನೇಕಾಕಾರ ಅವಗಾಹೀ ಜ್ಞಾನಂ", ಅರ್ಧ ಕತ್ತಲಲ್ಲಿ ಎದುರಿಗಿರುವ ಮೋಟು ಮರವನ್ನು ನೋಡಿ, ಮರವೋ ಅಥವಾ ಮಾನವನೋ ಎಂದು ಸಂದೇಹ ಪಡುವುದು.

೪. **ವಿಪರೀತ ಜ್ಞಾನ** : ಇರುವ ವಿಚಾರವನ್ನು ಅತಿ ಬುದ್ಧಿಯ ಪ್ರಭಾವದಿಂದ, ಅದಕ್ಕೆ ವಿರುದ್ಧವಾಗಿ ತಿಳಿದುಕೊಳ್ಳುವುದು. ಕಾರಣ ಸ್ವಭಾವ ಅಥವಾ ದುರಾಗ್ರಹದಿಂದ ಅರ್ಥ ಮಾಡಿಕೊಳ್ಳುವುದು.

೫. **ಮಿಥ್ಯಾಜ್ಞಾನ** : ಸರಿಯಾಗಿ ಸತ್ಯವಾಗಿ ಇರುವ ವಿಚಾರವನ್ನು ದುರಾಗ್ರಹದಿಂದ ಇರುವ ಹಾಗೆ ಕಾಣಿಸುತ್ತದೆ. ಆದರೆ ಅದು ಇಲ್ಲ ಎಂದು ತಿಳಿಯುವುದು. ಸತ್ಯವಾದ ಜಗತ್ತನ್ನು ಸುಳ್ಳು ಎಂದು ತಿಳಿದುಕೊಳ್ಳುವುದು.

೬. **ಯಥಾರ್ಥಜ್ಞಾನ** : ಇರುವ ವಿಚಾರವನ್ನು ಅದರಂತೆಯೇ ಹಾಗೆಯೇ ತಿಳಿದುಕೊಳ್ಳುವುದು.

## **ಪಾಂಡಿತ್ಯ** - ವಿದ್ಯಾಭ್ಯಾಸದಿಂದ ಬಂದಿರುವ ಒಂದು ಮಟ್ಟದ ಜ್ಞಾನ

೧. **ಶಬ್ದ ಪಾಂಡಿತ್ಯ** : ಶಬ್ದಪಾಂಡಿತ್ಯ ಕೇವಲ ಪ್ರದರ್ಶನಕ್ಕಾಗಿ ಮಾತ್ರ.
ಕೀರ್ತಿಕಾಮರು : ಕೇವಲ ಹೆಸರು ಪಡೆಯುವುದಕ್ಕಾಗಿ ಮಾತ್ರ.
**ಧನಕಾಮರು** : ದುಡ್ಡು ಸಂಪಾದಿಸುವುದ್ಕಾಗಿ ಮಾತ್ರ
} ಒಂದು ತರಹದ ಮೋಸ
**ಮುಕ್ತಿಕಾಮರು** : ಯಾವ ಫಲಾಪೇಕ್ಷ ಇಲ್ಲದೇ ಕೇವಲ ಉದ್ಧಾರಮಾಡುವುದಕ್ಕಾಗಿ ಮಾತ್ರ.

೨. **ಅನುಸಂಧಾನ ಪಾಂಡಿತ್ಯ** : ಓದಿದ ವಿದ್ಯೆಯನ್ನು ಸರಿಯಾಗಿ ಅರ್ಥಮಾಡಿಕೊಂಡು ಅದರಂತೆ ಮನಸಾಚಿಂತನೆ ಮಾಡುವುದು.

೩. **ಅನುಭವ ಪಾಂಡಿತ್ಯ** : ಓದಿದ ವಿದ್ಯೆಯ ಅನುಸಂಧಾನದ ಫಲವಾಗಿ ಶ್ರೀಹರಿವಾಯುಗಳ ದಯದಿಂದ ಮನಸ್ಸಿಗೆ ಅನುಭವಕ್ಕೆ ಬರುವುದು.

೪. **ಅಪರೋಕ್ಷಪಾಂಡಿತ್ಯ** : ಶ್ರೀಹರಿವಾಯುಗಳ ದಯೆಯಿಂದ ಪ್ರತ್ಯಕ್ಷವಾಗಿ ವಿದ್ಯೆಯ ಸಿದ್ಧಿ ಪಡೆಯುವುದು.

## **ಸುಧಾ ಪಂಡಿತರು** (ಪುಟ 133 ನೋಡಿ)

ಶ್ರೀಮಧ್ವಶಾಸ್ತ್ರದಲ್ಲಿ ವಿದ್ಯೆಯ ಪರಾಕಾಷ್ಟತೆ ಪಡೆದವರು

೧. **ಸುಧಾರಿಸಿದ ಪಂಡಿತರು**: (ಸುಧಾ ಆದರಿಸಿದವರು) ಶ್ರೀಮಣಿಮಂಜರಿ, ಶ್ರೀಸುಮಧ್ವವಿಜಯ, ಶ್ರೀಮಹಾಭಾರತ ತಾತ್ಪರ್ಯನಿರ್ಣಯ - ದಶಪ್ರಕರಣಗಳು ಎಲ್ಲಾ ಪಾಠಗಳನ್ನು ಕ್ರಮವಾಗಿ ಸರಿಯಾಗಿ ಪೂರ್ಣವಾಗಿ ಅಭ್ಯಾಸ ಮಾಡಿ ಪರಮತ ಖಂಡನ ಪೂರ್ವಕ ಸ್ವಮತ ಸ್ಥಾಪನ, ಬುದ್ಧಿಯಿಂದ ಕೂಡಿ, ಅದಕ್ಕೆ ತಕ್ಕಂತೆ ಆಚರಣೆ, ಅಂತರಂಗ ಬಹಿರಂಗ ದೀಕ್ಷೆವುಳ್ಳವರಾಗಿ ನೇಮ ನಿಷ್ಠೆಗಳಿಂದ ಅಂತರಂಗದೀಕ್ಷೆಯನ್ನು ಶಿಷ್ಯ ವರ್ಗದಲ್ಲಿ ನಾಟಿ ಮಾಡಿ ಸತ್ಸಂಪ್ರದಾಯ ಸಂತತಿ ಬೆಳೆಸುವವರು.

೨. **ಸುಧಾರಿಸದಪಂಡಿತರು**:(ಸುಧಾ ಆದರಿಸದವರು) ಪೂರ್ವೋಕ್ತ ಆಪಾದಮೌಳಿ ಪರ್ಯಂತವಾದ ಲಕ್ಷಣಗಳು, ಪೂರ್ಣವಾಗಿಯಾಗಲೀ, ಸ್ವಲ್ಪಭಾಗವಾಗಲೀ ಕಂಡುಬರದೆ ಅಸಂಭವಗಳೇ ಜಾಸ್ತಿಯಾಗಿ ಇರುವವರು, ಇದರಿಂದ ಅವರಿಗೇ ಫಲವಿಲ್ಲ - ಪರರಿಗೆ ದೂರತೋಪಾಸ್ತ.

## **ಭಕ್ತಿ**

ಭಕ್ತಿ ಎಂದರೆ ಮರಣವೇ ಕೊನೆಯಾಗಿ ಸಾವಿರಾರು ಕಷ್ಟಗಳು ಒಟ್ಟಿಗೇ ಬಂದರೂ ಸಹ ಶ್ರೀಹರಿ ನನ್ನನ್ನು ಕಾಪಾಡುತ್ತಾನೆ ಎಂಬ ನಂಬಿಕೆಯಲ್ಲಿ ಸಂದೇಹ ಪಡದೆ ದೃಢವಾಗಿ ನಂಬಿಕೊಂಡಿರುವುದು.

೧. **ಸಾಮಾನ್ಯ ಭಕ್ತಿ** : ಕೇವಲ ದೇವರು ಇದ್ದಾನೆ, ಎಂದು ತಿಳಿದುಕೊಂಡು ಕೈಮುಗಿಯುವುದು ಅವನು ಹೇಳಿದ ಆಚರಣೆಗಳಲ್ಲಿ ಶ್ರದ್ಧೆ ಇಲ್ಲದಿರುವುದು, ಕಷ್ಟಬಂದರೆ ದೇವರ ವಿರೋಧಿಗಳನ್ನು ಆಶ್ರಯಿಸುವುದು.

೨. **ಅಪಕ್ವ ಭಕ್ತಿ** : ದೇವರು ಹೇಳಿರುವಂತೆ ನಡೆಯುವಾಗ ಕೆಲವರಿಗೆ ತತ್ಕಾಲದಲ್ಲಿ ಫಲವಾಗುವುದಿಲ್ಲ. ಆದರೆ ದೇವರು ಇಲ್ಲ, ಶಾಸ್ತ್ರಗಳು ಸುಳ್ಳು ಎಂದು ಒಪ್ಪಿಕೊಳ್ಳಲು ಇಷ್ಟವಾಗುವುದಿಲ್ಲ. ಈ ರೀತಿ ಡೋಲಾಯಮಾನವಾದ ಪರಿಸ್ಥಿತಿ. ದೇವರು ಕಾಪಾಡುತ್ತಾನೆ ಎಂದು ಮಹಡಿ ಮೇಲಿಂದ ನೆಲಕ್ಕೆ ಹಾರಿ ಎಂದರೆ - ಒಳಗೆ ದಾರ್ಢ್ಯವಿದ್ದು, ಹಾರಿದರೆ ಏನೂ

ತೊಂದರೆ ಆಗುವುದಿಲ್ಲ. ಹಾಗಲ್ಲದೆ ಒಳಗೆ ಸ್ವಲ್ಪ ಸಂದೇಹ, ಪುಕಪುಕ ಭಯ ಬಂದರೆ ಹಾರಬಾರದು. ಹಾಗೆ ಮಾಡಿದರೆ ಕಾಲು ಮುರಿಯುತ್ತದೆ. ಇದರಿಂದ ದೇವರ ಮೇಲೆ ನಂಬಿಕೆ ಹೋಗಿ ದೋಷ ಹೇಳಬೇಕಾಗುತ್ತದೆ. ನಮಗೆ ಇನ್ನೂ ಪಕ್ವಭಕ್ತಿ ಇಲ್ಲವಾದ್ದರಿಂದ ಇಂತಹ ಸಾಹಸಕ್ಕೆ ಹೋಗಬಾರದು. ಹಿಂದೆ ಮೈಸೂರು ಮಹಾರಾಜ ಮುಮ್ಮಡಿಕೃಷ್ಣರಾಜಒಡೆಯರ ಕಾಲದಲ್ಲಿ ಅರಮನೆಯಲ್ಲಿ ದ್ವೈತ ಅದ್ವೈತದ ಬಗ್ಗೆ ವಾದ ನಡೆದಾಗ ಶ್ರೀಹರಿಸರ್ವೋತ್ತಮ ಎಂದು ಸಾಧಿಸುವುದಕ್ಕೆ ಒಬ್ಬ ಹರಿದಾಸರು ಅರಮನೆಯ ವರಾಹದೇವರ ಗುಡಿಯ ಗೋಪುರದಿಂದ ಕೆಳಕ್ಕೆ ಹಾರಿದರು. ಅವರಿಗೆ ಯಾವುದೇ ರೀತಿಯ ತೊಂದರೆಯು ಆಗಲಿಲ್ಲ. ಇದರಿಂದ ಹರಿಸರ್ವೋತ್ತಮ ಎಂಬುದು ಸ್ಥಾಪನೆಯಾಯಿತು. ಅಂದರೆ ಅವರಿಗೆ ಪರಿಪಕ್ವವಾದ ಭಕ್ತಿ ಇತ್ತು ಎಂದು ಅಭಿಪ್ರಾಯ.

**ಪಕ್ವಭಕ್ತಿ** : ಅಪಕ್ವ ಭಕ್ತಿಯಿರುವವರಿಗೆ ಯಾವುದಾದರೂ ಮಹಾಪತ್ತು ಬಂದು ಒದಗಿ ಆಗ ಶ್ರೀಹರಿವಾಯುಗಳ ಗುರುಗಳ ಸ್ಮರಣೆ ಬಂದು ಕಷ್ಟ ಪರಿಹಾರವಾದರೆ ಹಿಂದಿನ ಭಕ್ತಿಗಿಂತ ಸ್ವಲ್ಪ ಹೆಚ್ಚು ಧಾರ್ಢ್ಯ ಬಂದಂತಹ ಅನುಭವವಾಗುತ್ತದೆ. ಆಗ ದೇವರು ನಮ್ಮನ್ನು ರಕ್ಷಿಸುತ್ತಾನೆ ಎಂಬ ನಂಬಿಕೆ ದೃಢವಾಗುತ್ತದೆ. ಆದರೆ ಇಷ್ಟಕ್ಕೆ ಸಿದ್ಧಿಯಾಯಿತು ಎಂದು ತಿಳಿಯಬಾರದು. ಪ್ರಾರಂಭ ಎಂದು ತಿಳಿಯಬೇಕು, ಇನ್ನೂ ಇದೆ ಮುಂದೆ.....

**ಪರಿಪಕ್ವಭಕ್ತಿ** :"ಕಂಡರೆ ಬಾರದು, ಕಲಿತರು ಬಾರದು, ಪುಂಡರೀಕಾಕ್ಷನ ದಯಬಾಹೊತನಕ"; "ಹರಿ ನಿನ್ನೊಲುಮೆಯು ಆಗುವ ತನಕ ಅರಿತು ಸುಮ್ಮನಿರುವುದೇ ಲೇಸು" ; "ಬಹು ಜನ್ಮನಾಂ ಅಂತೆ" - ಅನೇಕ ಜನ್ಮಗಳು ಕಳೆದ ಮೇಲೆ ಪರಿಪಕ್ವ ಸ್ಥಿತಿಗೆ ಬಂದ ಮೇಲೆ ಅಪರೋಕ್ಷ ಜ್ಞಾನವಾಗುತ್ತದೆ. ಆಗ ಒಳಗಡೆ ಬಿಂಬದರ್ಶನವಾಗುತ್ತದೆ. ಸಾರಾಸಾರವಿವೇಕ ಪರಿಪಾಕದಿಂದ ಭಗವಂತನನ್ನು ಬಿಟ್ಟು ಇತರ ವಿಷಯಗಳ ಸಂಗ ಬಿಡುತ್ತಾರೆ. ದೇಹಾಭಿಮಾನ ಬಿಡುತ್ತಾರೆ. ತಮಗಾಗಿ ಏನನ್ನೂ ಬೇಡುವುದಿಲ್ಲ. ಪ್ರಯತ್ನ ಮಾಡುವುದಿಲ್ಲ. ಹುಲಿ, ಕರಡಿ, ಬೆಂಕಿ, ಚಳಿ, ಮಳೆ, ಬಿಸಿಲು, ಮುಂತಾದ ಯಾವುದರಿಂದಲೂ ಭಯ ಉಂಟಾಗುವುದಿಲ್ಲ. ತಪ್ಪಿಸಿಕೊಳ್ಳಲು ಪ್ರಯತ್ನಿಸುವುದಿಲ್ಲ. ದೇವರು ಕಾಪಾಡುತ್ತಾನೆ ಎಂಬ ದೃಢವಾದ ಭಕ್ತಿ ಇರುತ್ತದೆ. ಅವಧೂತ ದೆಸೆಯಲ್ಲಿರುತ್ತಾರೆ. ಶ್ರೀಪ್ರಹ್ಲಾದರಾಜರು, ಶ್ರೀಜಡಭರತರಾಜರು, ಶ್ರೀಜನಕರಾಜರು, ಶ್ರೀಪ್ರಿಯವ್ರತರಾಜರು ಮುಂತಾದ ಮಹಾ ಅಧಿಕಾರಿಗಳಿಗೆ ಇದು ಸಾಧ್ಯ. ಇಂತಹ ಮಹಾಮಹಿಮರನ್ನು ಸ್ಮರಿಸಿ ಭಕ್ತಿ ಮಾಡುವುದು ನಮ್ಮ ಕರ್ತವ್ಯ.

## ಪ್ರಸಾದ - ಅನುಗ್ರಹವಾಗುವುದು

### ೧ನೇ ಪ್ರಸಾದ

ಕಡಲೆಹಿಟ್ಟು, ಕೋಸಂಬರಿ, ರಸಾಯನ, ಭೋಜನಪದಾರ್ಥಗಳು ದೇವರಿಗೆ ನೈವೇದ್ಯವಾಗಿರುವಾಗ, ದೇವರು ಕರುಣಾಮಯವಾದ ಅನುಗ್ರಹ ಪೂರ್ವಕವಾದ ನೋಟದಿಂದ ಅದನ್ನು ನೋಡಿ, ಅದನ್ನು ತನ್ನ ಪ್ರಸಾದವಾಗಿ ಮಾಡಿರುತ್ತಾನೆ. ಅದನ್ನು ಭಕ್ತಿಯಿಂದ, ಮೇಲಿನ ಅನುಸಂಧಾನದಿಂದ ಸ್ವೀಕರಿಸಿದರೆ ದೇವರ ಅನುಗ್ರಹ ನಮ್ಮ ಮೇಲೆ ಆಗುತ್ತದೆ. ಆದುದರಿಂದ ಇದು ಬಹಳ ಮುಖ್ಯವಾದುದು ನಿರಾಕರಿಸುವಂತಿಲ್ಲ.

ಕಂಡಕೂಳುಗಳನು ತಿಂದು ಒಡಲ್ಹೊರೆಯಬೇಡ" ಎಂದರೆ ದೇವರ ನೈವೇದ್ಯವಾಗದಿರುವ ಪದಾರ್ಥಗಳನ್ನು ತಿಂದು ಬದುಕಬೇಡ ಎಂದು ಶ್ರೀವಿಜಯದಾಸರ ವಚನ.

**೨ನೇ ಪ್ರಸಾದ**

ಶ್ರೀಹರಿವಾಯುಗಳದಯೆಯಿಂದ ಸಾಧನ ಮಾರ್ಗಕ್ಕೆ ಅಡಚಣೆಯಾಗಿರುವ ಅನಿಷ್ಟ ಕರ್ಮಗಳನ್ನು ಕಳೆದು ಸಾಧನ ಸುಖವಾಗಿ ಸಾಗಲು ಅನುಕೂಲ ಮಾಡಿಕೊಡುವುದೇ ೨ನೇ ಪ್ರಸಾದ. ಇದು ಬಹಳ ಮುಖ್ಯವಾದುದು.

**೩ನೇ ಪ್ರಸಾದ**

ಶ್ರೀಹರಿಯ ಮನ್ನಣೆ "ಏನಂ ಮೋಚಯಾಮಿ" ಎಂದರೆ ಈ ಜೀವನನ್ನು ಸಂಸಾರದಿಂದ ಬಿಡುಗಡೆ ಮಾಡಿ ಮೋಕ್ಷಕ್ಕೆ ಅನುಕೂಲ ಮಾಡಿಕೊಡುವುದೇ ಅತ್ಯರ್ಥ ಪ್ರಸಾದವೆನಿಸಿಕೊಳ್ಳುತ್ತದೆ. ಇದು ಕೊನೆಯ ಅನುಗ್ರಹ. ಮುಕ್ತಿ ಹೊಂದಿದರೂ ಸಹ ಅಲ್ಲಿಯೂ ಕೂಡ ಶ್ರೀಹರಿಯ ಅಧೀನವಾಗಿ ಅವನ ಅನುಗ್ರಹದಿಂದಲೇ ಬಾಳಬೇಕು.

ತತ್ವವಿಚಾರದಲ್ಲಿ
ಮಿಥ್ಯಾ ಜ್ಞಾನದಿಂದ ತಮಸ್ಸು

ಸುಳ್ಳು ಜ್ಞಾನದಿಂದ, ದುಃಖದಿಂದ
ಕೂಡಿದ ಶಾಶ್ವತ ನರಕ



ತತ್ವ ವಿಚಾರದಲ್ಲಿ
ಸತ್ಯವಾದ ಜ್ಞಾನದಿಂದ ಪರಮಪದ

ಸರಿಯಾದ ಜ್ಞಾನದಿಂದ ಸುಖದಿಂದ
ಕೂಡಿದ ಶಾಶ್ವತ ಮೋಕ್ಷ।

ಅವತಾರತ್ರಯೋಪೇತ ವಾಯುದೇವರ ಭಾವೀ ಬ್ರಹ್ಮ ಪಟ್ಟಸೂಚನೆ

## ಅಪೂರ್ವ ಸುಸಂದೇಶ

### ಶ್ರೀಮಧ್ವಾಚಾರ್ಯರಿಗೆ ಈ ಹೆಸರು ಹೇಗೆ ಬಂತು?

ಶ್ರೀಮಧ್ಯಗೇಹಭಟ್ಟರು ಮಾಡಿದ ನಾಮಕರಣ **ಶ್ರೀವಾಸುದೇವಾಚಾರ್ಯರು**

ಸನ್ಯಾಸ ಸ್ವೀಕರಿಸಿದಾಗ ಮಾಡಿದ ನಾಕರಣ **ಶ್ರೀಪೂರ್ಣಪ್ರಜ್ಞರು**

ವೇದಾಂತ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದಾಗ ಮಾಡಿದ ನಾಮಕರಣ **ಶ್ರೀಆನಂದತೀರ್ಥರು**

ಅಪೌರುಷೇಯ ಬಳಿತ್ಥಾಸೂಕ್ತ ಮಾಡಿದ ನಾಮಕರಣ **ಶ್ರೀಮಧ್ವ, ದಶಪ್ರಮತಿಗಳೆಂದು.**

*ವೇದದಲ್ಲಿ ಉಕ್ತವಾಗಿದೆ ನಿಮ್ಮ ಅಂದ- (ದಾಸವಾಣಿ)*

# ದೀಕ್ಷೆ - ಶಿಸ್ತಿನಿಂದ ನಡೆದುಕೊಳ್ಳುವುದು

## ಬಾಹ್ಯದೀಕ್ಷೆ

ಒಂದು ಮತ ಅಥವಾ ಅಭಿಪ್ರಾಯದ ಗುಂಪಿನ ನಿಯಮಗಳನ್ನು ಅನುಸರಿಸಬೇಕಾದ ಬಾಹ್ಯ ಚಿಹ್ನೆಗಳು. ಇದರಿಂದಲೇ ಗುಂಪನ್ನು ಗುರುತಿಸಲು ಸಾಧ್ಯವಾಗುವುದು. ಲೋಕದಲ್ಲಿ ಸ್ಕೌಟ್, ಪೊಲೀಸ್, ಎನ್.ಸಿ.ಸಿ., ಬಿ.ಸಿ.ಸಿ., ಎ.ಸಿ.ಸಿ ಮುಂತಾದ ದಳಗಳನ್ನು ಅದರದರ ಬಾಹ್ಯದೀಕ್ಷೆಗಳಿಂದ (ಯೂನಿಫಾರಂ) ತಿಳಿದುಕೊಳ್ಳುತ್ತೇವೆ. ಅದರಂತೆ ವೈಷ್ಣವ, ಶೈವ, ಹರೋಹರ, ಅಯ್ಯಪ್ಪ, ಕ್ರಿಶ್ಚಿಯನ್, ಮುಸಲ್ಮಾನ್, ಮುಂತಾದ ಮತಗಳಲ್ಲಿ ಅವರವರ ದೀಕ್ಷೆಗಳನ್ನು ಇಂದಿಗೂ ಸಹ ನಡೆಸಿಕೊಂಡು ಬಂದಿರುತ್ತಾರೆ. ಇಂತಹ ದೀಕ್ಷೆಗಳಲ್ಲೆಲ್ಲಾ ಸಾಧಕವಾದ ಸಾತ್ವಿಕರಿಗೆ ವೈಷ್ಣವ ದೀಕ್ಷೆ ಬಹಳ ಅತ್ಯಾವಶ್ಯಕವಾದುದು. ಇದು ಇಲ್ಲದಿದ್ದರೆ ಸಾಧನರಂಗಭೂಮಿಗೆ ಪ್ರವೇಶವೇ ಇಲ್ಲವಾಗುತ್ತದೆ.(ಟಿಕೇಟು ಪಡೆಯದಿದ್ದರೆ ಬಸ್ಸು, ರೈಲು, ಸಿನಿಮಾಗಳಲ್ಲಿ ಪ್ರವೇಶವಿಲ್ಲವಾಗುತ್ತದೆ, ಅದರಂತೆ.) ಇದರ ವಿಶೇಷ ಮುಂದೆ ತಿಳಿಸಲಾಗುತ್ತದೆ.

## ಅಂತರಂಗದ ದೀಕ್ಷೆ

ಒಂದು ಮತ ಅಥವಾ ಅಭಿಪ್ರಾಯದ ಬಗ್ಗೆ ದೃಢವಾದ ನಂಬಿಕೆ ಇಡುವುದು. ಇದು ಕಲಿಯುವುದರಿಂದ ಬರುವುದಿಲ್ಲ. ಒಳಗೆ ಇರುವ ನಂಬಿಕೆ, ಅವರವರ ಸ್ವರೂಪ ಸ್ವಭಾವಗಳು ಮುಖ್ಯ ಕಾರಣ. ಇದಕ್ಕೆ ಶ್ರವಣಾದಿಗಳು ಸಾಧಕವಾಗುತ್ತವೆ. ಸಹವಾಸ ಬಹಳ ಮುಖ್ಯವಾದುದು. ಹಿಂದಿನ ಜನ್ಮಗಳಲ್ಲಿ ಮಾಡಿದ ಸಾಧನಗಳ ಪ್ರಬಲ ಸಂಸ್ಕಾರದಿಂದ ಒಳಗೆ ಆ ನಂಬಿಕೆ ಗೂಢವಾಗಿ ಇರುತ್ತದೆ. ಒಂದು ವ್ಯಕ್ತಿಯ ಪ್ರಚೋದನೆ ಅಥವಾ ಸಂದರ್ಭದ ನಿಮಿತ್ತದಿಂದ ಅದು ವಿಶೇಷವಾಗಿ ಪರಿಣಮಿಸುತ್ತದೆ. ಈ ಮೇಲಿನ ಲೇಖನ ತ್ರಿವಿಧ ಜೀವರಾಶಿಗಳಿಗೂ ಅನ್ವಯಿಸುತ್ತದೆ. ಸಾಧಕರಾದ ಸಾತ್ವಿಕರ ಸಾಧನಕ್ಕೆ ಈ ಕೆಳಗಿನ ನಂಬಿಕೆ ಅತಿಮುಖ್ಯವಾದುದು. ಮೂಲಗುರುಗಳು ಜೀವೋತ್ತಮರಾದ ಶ್ರೀಭಾರತೀಪತಿಗಳಾದ ವಾಯುದೇವರು ಮತ್ತು ಶ್ರೀಹರಿಯು ಎಲ್ಲಕ್ಕೂ ಸ್ವಾಮಿಯು. ಅವನು ನನಗೂ ಸ್ವಾಮಿಯು, ನಮ್ಮ ಅನಿಷ್ಟಗಳನ್ನು ಕಳೆದು ಇಷ್ಟವನ್ನು ಕೊಡುವವನು. ನಾನು ಅವನಿಗೆ ಸಂಬಂಧಪಟ್ಟವನು. ಮರಣವೇ ಮೊದಲಾದ ಸಾವಿರಾರು ಕಷ್ಟಗಳು ಒಟ್ಟಿಗೇ ಬಂದರೂ ಸಹ ದೇವರು ನನ್ನನ್ನು ಕಾಪಾಡುತ್ತಾನೆ ಎಂಬ ನಂಬಿಕೆ ಇಡಬೇಕು.

ರೋಗ ಬಂದಿರುವಾಗ ವೈದ್ಯರು ಕೆಲವು ಕಷ್ಟಕರವಾದ ಪಥ್ಯಗಳನ್ನು ಹೇಳುತ್ತಾರೆ. ಶಸ್ತ್ರ ಚಿಕಿತ್ಸೆ ಮಾಡಿ ಹಿಂಸೆ ಮಾಡುತ್ತಾರೆ. ಇದರಿಂದ ವೈದ್ಯರಿಗೆ ನಮ್ಮ ಮೇಲೆ ಕರುಣೆಯಿಲ್ಲ, ಕ್ರೂರಿಗಳು ಎಂದು ಹೇಳಲಾಗುವುದಿಲ್ಲ. ರೋಗ ನಿವಾರಣೆಗೆ ಇದು ಅನಿವಾರ್ಯ. ರೋಗ ನಿವಾರಣೆಯೇ ವೈದ್ಯರ ಕರುಣೆ. ಆದ್ದರಿಂದ ಈ ಕಾಯಕ್ಲೇಶಗಳನ್ನು ಸಹಿಸಲೇಬೇಕು. ಇದರಂತೆ ಭವರೋಗ ವೈದ್ಯನಾದ ಶ್ರೀಹರಿಯು ನಮ್ಮ ಮೋಕ್ಷಸಾಧನೆಗೆ ಅಡ್ಡಿಯಾಗಿರುವ ಕೆಲವು ಕರ್ಮಗಳಿಗೆ ಶಿಕ್ಷಾರೂಪವಾದ ಕಷ್ಟಗಳನ್ನು ಕ್ಲೇಶಗಳನ್ನು ತಂದುಕೊಟ್ಟು ಅದರ ಅನುಭವದಿಂದ ಆ ಕರ್ಮ ಕಳೆದುಕೊಂಡು ಸಾಧನ ಮಾಡಿಕೊಂಡು ಮೋಕ್ಷ ಹೊಂದಲು ಅರ್ಹರಾಗುವಂತೆ ಮಾಡುತ್ತಾನೆ. ಹೀಗೆ ತಿಳಿದುಕೊಳ್ಳದೆ ದೇವರು ಕಷ್ಟಕೊಟ್ಟ ಅಂತ ನಾಸ್ತಿಕರಾಗಬಾರದು. ಕರ್ಮ ಕಳೆಯುವುದೇ ದೇವರು ಮಾಡಿದ ಅನುಗ್ರಹ ಎಂದು ತಿಳಿದುಕೊಳ್ಳಬೇಕು. "ನಿನ್ನ ಪ್ರಾರಬ್ಧ ಕರ್ಮಕ್ಕೆ ಮನಸೋಲಬೇಡ" ಎಂದು ವಿಜಯದಾಸರು, "ಬಂದದ್ದೆಲ್ಲಾ ಬರಲಿ ಗೋವಿಂದನ ದಯವೊಂದಿರಲಿ" ಎಂದು ಪುರಂದರದಾಸರು, "ಕ್ಲೇಶಾನಂದಗಳೀಶಾಧೀನ" ಎಂದು ಶ್ರೀಜಗನ್ನಾಥದಾಸರು ವರ್ಣಿಸಿದ್ದಾರೆ.

ದೇವರನ್ನು ನಂಬಿರಲಿ ನಂಬದಿರಲಿ ಮರಣವನ್ನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ದೇವರನ್ನು ನಂಬದೆ ಮರಣ ಹೊಂದಿದರೆ ಉತ್ತಮ ಗತಿಯಿಲ್ಲ. ದೇವರನ್ನು ನಂಬಿ ಮರಣ ಹೊಂದಿದರೆ ಉತ್ತಮ ಗತಿಯುಂಟು.

## ವೈರಾಗ್ಯ

ಶ್ರೀಹರಿವಾಯುಗುರುಗಳನ್ನು ಬಿಟ್ಟು ಉಳಿದ ವಸ್ತುಗಳಲ್ಲಿ ಇದು ನನ್ನದು ಅಂತ ಅಭಿಮಾನ ಇಟ್ಟುಕೊಳ್ಳದಿರುವುದು ವೈರಾಗ್ಯವೆನಿಸಿಕೊಳ್ಳುತ್ತದೆ.

### ಕಷ್ಟದ ವೈರಾಗ್ಯ

ಇಂದ್ರಿಯನಿಗ್ರಹ ಮಾಡಿಕೊಂಡು, ಕಠಿಣವಾದ ವ್ರತ, ನಿಯಮ, ತಪಸ್ಸು, ಚಳಿ, ಮಳೆ, ಬಿಸಿಲುಗಳಿಂದ ಬರುವ ಕಾಯಕ್ಲೇಶಗಳನ್ನು ಸಹಿಸಿಕೊಂಡು ಮನಸ್ಸಿಗೆ ಬೇಜಾರು ಪಟ್ಟುಕೊಳ್ಳದೆ ಶ್ರೀಹರಿವಾಯುಗಳಲ್ಲಿ ಭಕ್ತಿಮಾಡಿ ಕರ್ಮಗಳನ್ನೂ ಅವರಿಗೆ ಅರ್ಪಿಸಿ ಸಂತೋಷಪಡುವುದು. ಇದು ಉತ್ತಮವಾದುದು. ಆದರೆ ಇಲ್ಲಿ ಮನಸ್ಸಿನಿಂದಲೂ ಹೀಗೆ ಇರಬೇಕು. ಇಲ್ಲದಿದ್ದರೆ ದೋಷವಾಗುತ್ತದೆ. ಉತ್ತಮ ಅಧಿಕಾರಿಗಳಿಂದ ಇದು ಸಾಧ್ಯವಾಗುವುದು.

### ಸುಲಭ ವೈರಾಗ್ಯ

"ಆಯತವಾದದ್ದರೊಳಗೆ ನೋಯದೆ ಉಣ್ಣುವುದೇ ನ್ಯಾಯದ ವೈರಾಗ್ಯ" - ಇದು ಶ್ರೀಗೋಪಾಲದಾಸರ ವಾಣಿ.

ದೇವರು ಯಾವ ಹೊತ್ತಿಗೆ ಸುಖವೋ, ದುಃಖವೋ, ಏನು ಕೊಡುತ್ತಾನೋ ಅದಕ್ಕೆ ಬೇಜಾರು ಪಡದೆ ಅದನ್ನು ಭಗವಂತ ಕೊಟ್ಟಿದ್ದು ಎಂದು ಅನುಭವಿಸುವುದು. ಸುಖ ಬಂದಾಗ ಅತಿ ಸಂತೋಷ ಪಡದೆ ಸ್ವಲ್ಪ ಹತೋಟಿಯಲ್ಲಿಟ್ಟುಕೊಂಡು, ಅದರಂತೆ ದುಃಖ ಬಂದಾಗ ಅತಿದುಃಖ ಪಡದೆ ಸಮಾಧಾನ ಸ್ಥಿತಿಗೆ ತಂದುಕೊಳ್ಳುವುದು. "ನಾನು ಹೋದರೆ ಹೋದೇನು" ಎಂದು ಶ್ರೀಕನಕದಾಸರು ಹೇಳಿದ್ದಾರೆ. ನಾನು ನನ್ನದು ಎಂಬ ಅಭಿಮಾನ ಹೋದರೆ ಮೋಕ್ಷ ಮಾರ್ಗಕ್ಕೆ ಹೋಗಲು ದಾರಿಯಾಗುತ್ತದೆ ಎಂದು ಅರ್ಥ. ನನ್ನದೇ ಎಂದು ತಿಳಿದುಕೊಳ್ಳುವುದನ್ನು ನನಗಾಗಿ ದೇವರು ಕೊಟ್ಟಿದ್ದು ಎಂದು ತಿಳಿದುಕೊಳ್ಳುವುದೇ ಲೇಸು. ಇದರಿಂದ ಅದರ ಮೇಲೆ ಅಭಿಮಾನ ಕಳೆದುಹೋಗುತ್ತದೆ. ಅದು ನಮ್ಮನ್ನು ಬಿಟ್ಟುಹೋದರೆ ದೇವರು ವಾಪಸ್ಸು ತೆಗೆದುಕೊಂಡ ಎಂದು ಮನಸ್ಸಿಗೆ ಬರುತ್ತದೆ. ಈ ಮೇಲಿನ ಅನುಷ್ಠಾನವು - ಮಾಡಬೇಕಾದದ್ದು ಯಾವುದು, ಮಾಡಬಾರದ್ದು ಯಾವುದು ಎಂಬ ತಿಳುವಳಿಕೆಯ ಅಧೀನವಾಗಿ ಇರಬೇಕು. ಇಲ್ಲದಿದ್ದರೆ ವೈರಾಗ್ಯದ ನೆಪದಲ್ಲಿ ಸ್ವೇಚ್ಛಾಪ್ರವೃತ್ತಿಯಿಂದ ದುರಾಚಾರಿಗಳಾಗುವ ಸಂಭವ ಬರುವುದುಂಟು. ಎಚ್ಚರದಿಂದಿರಬೇಕು. ಕಷ್ಟದ ವೈರಾಗ್ಯದಲ್ಲಿ ದೈಹಿಕ ಶ್ರಮವಾದರೆ ಸುಲಭ ವೈರಾಗ್ಯದಲ್ಲಿ ಮನಸ್ಸಿಗೆ ಶ್ರಮವಿದೆ.

### ಬೆಳಿಗ್ಗೆ ಹಾಸಿಗೆ ಮೇಲೆ ಚಿಂತನೆ

ನಾವು ಬೆಳಗಿನ ಜಾವ ನಿದ್ದೆಯಿಂದ ಏಳುವಾಗ ಬಲಗಡೆ ಎದ್ದು ಕುಳಿತು, ಶ್ರೀಮದಾಚಾರ್ಯರು ಬದರಿಕಾಶ್ರಮದಲ್ಲಿ ಅರುಣೋದಯದಲ್ಲಿ ಸೀತಲಗಂಗಾದಲ್ಲಿ ಸ್ನಾನ ಮಾಡಿದರು ಎಂದು ಚಿಂತಿಸಿದರೆ ನಾವೂ ಸಹ ಅವರ ಜೊತೆಯಲ್ಲೇ ಸ್ನಾನ ಮಾಡಿದಂತಾಗುತ್ತದೆ. ಇದು ಮಾನಸಿಕ ಸ್ನಾನವಾಯಿತು. ನಂತರ **ಈ ಕೆಳಗೆ ಹೇಳಿರತಕ್ಕಂತಹ ಎಲ್ಲ ಅಂಶಗಳನ್ನು ಪಠನ ಮಾಡತಕ್ಕದ್ದು.**

ಉತ್ತಿಷ್ಠೋತ್ತಿಷ್ಠ ಗೋವಿಂದ ಉತ್ತಿಷ್ಠ ಗರುಡಧ್ವಜ
ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಳಂ ಕುರು ।

ಕರಾಗ್ರೇ ವಸತೇ ಲಕ್ಷ್ಮೀ ಕರಮಧ್ಯೇ ಸರಸ್ವತೀ
ಕರಮೂಲೇ ಸ್ಥಿತೇ ಗೌರೀ ಸುಪ್ರಭಾತೇ ಕರದರ್ಶನಮ್ ।

ಹರೇಕೃಷ್ಣ ಹರೇಕೃಷ್ಣ ಕೃಷ್ಣಕೃಷ್ಣ ಹರೇಹರೇ
ಹರೇರಾಮ ಹರೇರಾಮ ರಾಮರಾಮ ಹರೇಹರೇ । ೧೬ ಸರಿ ಹೇಳಬೇಕು.

ಗಜೇಂದ್ರವರದ, ಮುಚುಕುಂದವರದ, ಪ್ರಹ್ಲಾದವರದ, ಧೃವವರದ, ಕಂಚೀವರದ, ವೃಷಭಾಚಲ, ಅಂಜನಾಚಲ, ಶೇಷಾಚಲ, ವೆಂಕಟಾಚಲ ಎಂದು ಸ್ಮರಿಸಬೇಕು. ನಮ್ಮ ದೇಹದಲ್ಲಿ ವಾಯುದೇವರು ೨೧,೬೦೦ ಹಂಸಮಂತ್ರಜಪ (ಉಸಿರಾಟ) ಮಾಡುತ್ತಿದ್ದಾರೆ. ಅವರಿಗೆ ಅನಂತಾನಂತ ನಮಸ್ಕಾರಗಳು.

"ತಪತಪ" (ಶ್ರೀಹರಿಯ ನಾಭಿಕಮಲದಲ್ಲಿದ್ದ ಬ್ರಹ್ಮದೇವರಿಗೆ ಕೇಳಿಸಿದ ಶಬ್ದ) ಅವ್ಯಕ್ತ ತತ್ತ್ವ, ಮಹತ್ತತ್ವ, ಅಹಂಕಾರತತ್ವ, ಬುದ್ಧಿ-ಮನಸ್ತತ್ವ, ಶ್ರೋತ್ರ(ಕಿವಿ), ತ್ವಕ್ (ಚರ್ಮ), ಚಕ್ಷುಸ್ (ಕಣ್ಣು), ಜಿಹ್ವಾ (ನಾಲಿಗೆ), ಘ್ರಾಣ (ಮೂಗು), ವಾಕ್ (ಬಾಯಿ), ಪಾಣಿ (ಕೈ), ಪಾದ, ಪಾಯು (ಗುದದ್ವಾರ), ಉಪಸ್ಥ (ಮೂತ್ರದ್ವಾರ), ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ, ವಾಯು, ಅಗ್ನಿ, ಆಪಃ (ನೀರು), ಪೃಥಿವೀ, ಓಷಧೀ (ಸಸ್ಯ), ಅನ್ನ, ಪುರುಷ, ವರ್ಣಾಶ್ರಮ ಧರ್ಮಗಳು, ಧರ್ಮಕ್ಲಪ್ತಿಗಳು, ವ್ಯವಸ್ಥಿತವಾದವು. ಹೆಸರು ಮಾತ್ರ ಪಠಣ (ಆವರಣದಲ್ಲಿರುವುದು ಬೇಡ).

## ವಾಮನಾವತಾರ ಚರಿತೆ

**(ಕಂಠಪಾಠ ಮಾಡಿ; ಅಭ್ಯಾಸವಾದ ಮೇಲೆ ಮಾನಸಿಕ ಚಿಂತನೆ ಮಾಡುವುದು ೩ ನಿಮಿಷಗಳ ಕಾಲ)**

ಶುಕ್ರಾಚಾರ್ಯರು, ಬಲಿಚಕ್ರವರ್ತಿಗಳು - ನರ್ಮದಾ ನದಿತೀರದಲ್ಲಿ ಯಾಗ - ಕಶ್ಯಪರು ಅದಿತಿದೇವಿಯವರ ಪಯೋವ್ರತ - ವಾಮನಾವತಾರ - ವಾಮನದೇವರು ಬಂದು ಬಲಿಚಕ್ರವರ್ತಿಗಳಿಂದ ೩ ಪಾದ ಭೂಮಿ ಬೇಡಿದ್ದು - ದಾನ - ತ್ರಿವಿಕ್ರಮಾವತಾರ - ಬ್ರಹ್ಮಾಂಡಖರ್ಪರಕ್ಕೆ ವಾಮನದೇವರ ಕಾಲುಗುರಿನ ಸ್ಪರ್ಶ - ಗಂಗಾವತರಣ - ಬ್ರಹ್ಮದೇವರು ವಿಷ್ಣುಪಾದ ತೊಳೆದರು - ರುದ್ರ ದೇವರು ಅದನ್ನು ಶಿರಸಾ ಧರಿಸಿದರು - ಭಗೀರಥ ರಾಯರ ಪ್ರಾರ್ಥನೆ - ರುದ್ರದೇವರ ವರದಿಂದ ಜಟಾದಿಂದ ಗಂಗೆಯು ಭೂಮಿಗೆ ಬಂದದ್ದು - ಅಲಕನಂದಾ ಭಾಗೀರಥೀ - ಮಧ್ಯೆ ಜಹ್ನು ಋಷಿಗಳಿಂದ ಗಂಗಾನದಿಯ ಆಪೋಶನ - ಭಗೀರಥರಾಯರ ಪ್ರಾರ್ಥನೆ - ಜಹ್ನು ಋಷಿಗಳ ಬಲಗಿವಿಯಿಂದ ಗಂಗೆಯು ಜಾಹ್ನವಿ ಎಂದು ನಾಮಾಂಕಿತಳಾಗಿ ಪ್ರವಹಿಸಿದ್ದು - ಪಾತಾಳ ಲೋಕ ಪ್ರವೇಶ - ಅಲ್ಲಿ ೬೦,೦೦೦ ಜನ ಸಗರ ಚಕ್ರವರ್ತಿಗಳ ಮಕ್ಕಳು ಸಾಗರರು ಮರಣ ಹೊಂದಿ ಬೂದಿಯಾಗಿದ್ದರು. ಅವರ ಮೇಲೆ ಗಂಗಾ ಪ್ರವಾಹ - ಅವರ ಉದ್ಧಾರ - ದೇವಹೂತಿ, ಕರ್ದಮ ಪ್ರಜಾಪತಿಗಳು - ಕಪಿಲಾವತಾರ.

ಬಲಿಚಕ್ರವರ್ತಿಗಳ ಶಿರಸ್ಸಿನ ಮೇಲೆ ವಾಮನದೇವರ ಪಾದಇಟ್ಟು ಅವರಿಗೆ ಸುತಳ ಲೋಕದಲ್ಲಿ ಪಟ್ಟಾಭಿಷೇಕ - ಅವರ ಮನೆ ಬಾಗಿಲು ವಾಮನದೇವರು ಗದಾಪಾಣಿಯಾಗಿ ಕಾಯುತ್ತಿರುವುದು.

**ಫಲ** : ಈ ವಾಮನದೇವರ ಕಥೆ ಸ್ಮರಣೆಯಿಂದ ಜ್ಞಾನಲಾಭ ಮತ್ತು ಊಟಕ್ಕೆ ತಾಪತ್ರಯವಿರುವುದಿಲ್ಲ.

# ಸ್ಥೂಲ ಚಿಂತನೆ

ಮೊದಲು ಇದನ್ನು ಬಾಯಿಪಾಠ ಮಾಡಿಕೊಂಡು ಅದು ಸ್ವಾಧೀನವಾದ ಮೇಲೆ ಮಾನಸಿಕವಾಗಿ ಚಿಂತನೆ ಮಾಡುವುದು. (೫ ನಿಮಿಷಗಳ ಕಾಲ)

**ಪರಮಾತ್ಮನ ಅವಯವದಲ್ಲಿ ಚಿಂತಿಸುವುದು**

| ಅವಯವಗಳಲ್ಲಿ | ಚಿಂತಿಸುವುದು |
|---|---|
| ಅಂಗಾಲಿನಲ್ಲಿ | ಪಾತಾಳಲೋಕ |
| ಪಾದದ ಮೇಲ್ಭಾಗದಲ್ಲಿ | ರಸಾತಲಲೋಕ |
| ಗೆಣ್ಣಿನಲ್ಲಿ | ಮಹಾತಲಲೋಕ |
| ಮೊಳಕಾಲಿನಲ್ಲಿ | ತಲಾತಲಲೋಕ |
| ಮಂಡಿಯಲ್ಲಿ | ಸುತಲ ಲೋಕ |
| ತೊಡೆಯ ಕೆಳಭಾಗ<br>ತೊಡೆಯ ಮೇಲ್ಭಾಗ | ವಿತಲಲೋಕ<br>ಅತಲಲೋಕ |
| ಸೊಂಟದಲ್ಲಿ | ಭೂಲೋಕ |
| ನಾಭಿಯಲ್ಲಿ | ಭುವರ್ಲೋಕ |
| ಎದೆಯಲ್ಲಿ | ಸುವರ್ಲೋಕ (ಸ್ವರ್ಗ) |
| ಕಂಠದಲ್ಲಿ | ಮಹರ್ಲೋಕ |
| ಬಾಯಿಯಲ್ಲಿ | ಜನೋಲೋಕ |
| ಭ್ರೂಮಧ್ಯದಲ್ಲಿ | ತಪೋಲೋಕ |
| ನೆತ್ತಿಯಲ್ಲಿ | ಸತ್ಯಲೋಕ |
| ನೆತ್ತಿಯ ಮೇಲೆ | ಗೋಲೋಕ |
| ಅದರ ಮೇಲೆ | ವೈಕುಂಠ ಲೋಕ |

**ಜೀವಕ್ಕೆ ದೇಹದ ಸಂಬಂಧ**
**ನಮ್ಮ ದೇಹದ ಹುಟ್ಟಿನ ಅನುಸಂಧಾನ :**

ಜನ್ಮ ಪಡೆವ ಜೀವನು ಈ ಪ್ರಕಾರ ಬರುತ್ತಾನೆ. ಚಂದ್ರ - ಆಕಾಶ - ಮೇಘ - ಮಳೆ - ಭೂಮಿ - ಸಸ್ಯ - ಆಹಾರ - ತಂದೆ - ತಾಯಿ - ಈ ಮೂಲಕ ಬಂದು ದೇಹದಲ್ಲಿ ಸೇರುತ್ತಾನೆ. ಇದನ್ನು ಮನಸಾ ಚಿಂತನೆ ಮಾಡುವುದು. ಇದರ ಬಗ್ಗೆ ದೇವರಲ್ಲಿ ಪ್ರಾರ್ಥಿಸುವುದುನ್ನು ಮುಂದೆ ಗಜೇಂದ್ರ ಮೋಕ್ಷದ ಕೊನೆಯಲ್ಲಿ ಕೊಟ್ಟಿದೆ)

**ಸೃಷ್ಟಿ ಪ್ರಕರಣ ಚಿಂತನ**

| ಅವಯವಗಳಿಂದ | ಸೃಷ್ಟಿಯಾದುದು |
|---|---|
| ತಲೆ ಕೂದಲಿನಿಂದ | ಮೇಘಮಂಡಲ |
| ಕಿವಿಗಳಿಂದ | ದಿಗ್ದೇವತೆಗಳು |
| ಮನಸ್ಸಿನಿಂದ | ಮಹಾರುದ್ರ ದೇವರು |
| ಕಣ್ಣುಗಳಿಂದ | ಸೂರ್ಯ-ಚಂದ್ರರು |
| ಮೂಗಿನಿಂದ | ಅಶ್ವಿನೀ ದೇವತೆಗಳು |
| ಪ್ರಾಣವಾಯುವಿನಿಂದ | ಶ್ರೀ ಮುಖ್ಯಪ್ರಾಣದೇವರು |
| ತುಟಿಯಿಂದ | ಲೋಭ ಲಜ್ಜೆಗಳು |
| ನಾಲಿಗೆಯಿಂದ | ಅಗ್ನಿ ಮತ್ತು ವರುಣದೇವರು |
| ನಾಭಿಯಿಂದ | ಅಂತರಿಕ್ಷ ಲೋಕಗಳು |
| ವೃಷಣದಿಂದ (ಜನನೇಂದ್ರಿಯ) | ದಕ್ಷ ಪ್ರಜಾಪತಿಗಳು ಮತ್ತು ಮನುಚಕ್ರವರ್ತಿಗಳು |
| ಸ್ತನದಿಂದ | ಧರ್ಮ |
| ಬೆನ್ನಿನಿಂದ | ಅಧರ್ಮ |
| ಮುಖದಿಂದ | ಬ್ರಾಹ್ಮಣರು |
| ತೋಳಿನಿಂದ | ಕ್ಷತ್ರಿಯರು |
| ತೊಡೆಯಿಂದ | ವೈಶ್ಯರು |
| ಪಾದದಿಂದ | ಶೂದ್ರರು |
| ಬೆವರಿನಿಂದ | ಎಳ್ಳು |
| ರೋಮಗಳಿಂದ | ಗಿಡ ಮತ್ತು ದರ್ಬೆ |
| ಉಗುರಿನಿಂದ | ಕುದುರೆ, ಹೆಸರಕತ್ತೆ, ಆನೆ, ಒಂಟೆಗಳು |
| ವೀರ್ಯದಿಂದ | ಅನ್ನ |
| ಪರಮಾತ್ಮ ಕಣ್ಣು ಮುಚ್ಚುವುದು | ಪ್ರಳಯ |
| ಕಣ್ಣು ತೆರೆಯುವುದು | ಸೃಷ್ಟಿ |

## ಗಜೇಂದ್ರ ಮೋಕ್ಷ ಸ್ಮರಣೆ

(ಈ ಕೆಳಗೆ ಕೊಟ್ಟಿರುವುದನ್ನು ಮೊದಲು ಕಂಠಪಾಠ ಮಾಡಿಕೊಂಡು ಸ್ವಾಧೀನವಾದ ನಂತರ ಮಾನಸಿಕ ಚಿಂತನೆ ಮಾಡಿ) (೫ ನಿಮಿಷಗಳು)

ಕ್ಷೀರಸಾಗರ - ತ್ರಿಕೂಟ ಪರ್ವತ - ಬಂಗಾರ-ಬೆಳ್ಳಿ-ಕಬ್ಬಿಣದಿಂದ ಮಾಡಿದ್ದು - ಬ್ರಹ್ಮ, ವಿಷ್ಣು, ಮಹೇಶ್ವರ ಸನ್ನಿಧಾನ - ಗಿಡ - ಮರ - ಬಳ್ಳಿ - ಗುಲ್ಮ - ಲತೆ - ಪಾಷಾಣ - ಗಿರಿ - ಗಹ್ವರ - ಗುಹೆ - ದ್ರೋಣಿ - ನದೀ ಸರೋವರಗಳು - ಮೃಗ (ಕ್ರೂರಮೃಗಗಳು) - ಪಶು (ಸಾಧುಪ್ರಾಣಿಗಳು)- ಪಕ್ಷಿ - ಕ್ರಿಮಿಕೀಟಗಳು (ನೊಣ ಮುಂತಾದವು) - ಸರೀಸೃಪ (ಹಾವುಗಳು) - ಶಿಂಶುಮಾರಗಣ (ಚೇಳು) - ಋತುಮತಿ ಸರೋವರ (ಮತ್ಸ್ಯ, ಕಚ್ಛಪ (ಆಮೆ) - ಮೊಸಳೆ - ಹಂಸ - ಬಾತುಕೋಳಿ - ಕಾರಂಡ - ಹೂವಿನ ಗಿಡಗಳು - ಒಂದು ಸಾವಿರ ವರ್ಷ ಆನೆ ಮತ್ತು ಮೊಸಳೆಗಳ ಎಳೆದಾಟ - ಗಜೇಂದ್ರ ಕಮಲ ಪುಷ್ಪ ತೆಗೆದುಕೊಂಡು ಸೊಂಡಿಲಿನಿಂದ ದೇವರಿಗೆ ತೋರಿಸುತ್ತಾ - ನಾರಾಯಣ ಅಖಿಲಗುರೋ ಭಗವನ್ ನಮಸ್ತೇ, ನೋಡು ನನ್ನ ಅವಸ್ಥೇ, ಮಾಡು ನನಗೆ ಸುವ್ಯವಸ್ಥೆ ಎಂದು ಪ್ರಾರ್ಥನೆ - ಕೋಟಿ ಮನ್ಮಥ ಲಾವಣ್ಯಮಯನಾದ ಸ್ವಾಮಿ, ಪೀತಾಂಬರ ವನಮಾಲ, ಯಜ್ಞೋಪವೀತ, ಸರ್ವಾಲಂಕಾರಭೂಷಿತನಾಗಿ ಚಕ್ರ, ಶಂಖ, ಗದಾಪದ್ಮ ಧರಿಸಿ, ಕಸ್ತೂರಿ ತಿಲಕಾಂಕಿತಪಾಲ, ಮಕರಕುಂಡಲ, ಕೋಟಿಸೂರ್ಯ ಪ್ರಕಾಶ ಕಿರೀಟ ಧರಿಸಿ, ಲಕ್ಷ್ಮೀ ಸಹಿತನಾಗಿ, ಗರುಡಾರೂಢನಾಗಿ ಬಂದು - ಗಜೇಂದ್ರ ಕೊಟ್ಟ ಪುಷ್ಪ ತೆಗೆದುಕೊಂಡು ಚಕ್ರದಿಂದ ವಕ್ರನಾದ ನಕ್ರನ ಸಂಹಾರ - ಗಜೇಂದ್ರನ ಉದ್ಧಾರ - ಹಾಹಾ, ಹೂಹೂ ಎಂಬ ಗಂಧರ್ವರು - ಅಸಿತದೇವಲ ಋಷಿಗಳನ್ನು ಕುಚೋದ್ಯ ಮಾಡಲುಹೋಗಿ ಅವರಿಂದ ಹಾಹಾನಿಗೆ ಮೊಸಳೆಯಾಗೆಂದು ಶಾಪ - ಹೂಹೂ ಎಂಬುವನು ಪಾಂಡ್ಯದೇಶದಲ್ಲಿ ಇಂದ್ರದ್ಯುಮ್ನ ರಾಜರಾಗಿ ಇದ್ದಾಗ ಅಗಸ್ತ್ಯರು ಬಂದರೂ ಎದ್ದು ಗೌರವಿಸದಿದ್ದಾಗ, ಆನೆಯಾಗೆಂದು ಶಾಪ. ಅವರಿಬ್ಬರಿಗೂ ಇಲ್ಲಿ ಶಾಪ ವಿಮೋಚನೆ.

ಬೆಳಗಿನ ಜಾವ ಯಾರು ಈ ಕಥೆಯನ್ನು ಸ್ಮರಿಸುತ್ತಾರೋ ಅವರಿಗೆ ಮರಣ ಸಮಯದಲ್ಲಿ ಪರಮಾತ್ಮನ ಸ್ಮರಣೆ ಬರುತ್ತದೆ. ಇದು ಸಂಸಾರದ ಬಿಡುಗಡೆಗೆ ಕಾರಣ.

ಇದರ ಜೊತೆಗೆ ಭಗವಂತನ ೨೨ ಅವತಾರಮಾಲಿಕೆಗಳನ್ನು ಹೇಳಬೇಕು.

ಪುರುಷ - ಸನತ್ಕುಮಾರ - ಕಪಿಲ - ದತ್ತಾತ್ರೇಯ - ಹಯಗ್ರೀವ - ಮಹಿದಾಸ - ಋಷಭ - ಪೃಥುಚಕ್ರವರ್ತಿ (ಆವಿಷ್ಟ ರೂಪ) - ಮತ್ಸ್ಯ - ಕೂರ್ಮ - ವರಾಹ - ಧನ್ವಂತರಿ - ಮೋಹಿನಿ - ನಾರಸಿಂಹ - ವಾಮನ - ಭಾರ್ಗವ - ದಾಶರಥಿ ರಾಮ - ಬಲರಾಮ ( ಆವಿಷ್ಟ ರೂಪ) - ಕೃಷ್ಣ - ಬುದ್ಧ - ಕಲ್ಕ್ಯವತಾರ - ಏಕಾವತಾರ - ದಶಾವತಾರ - ಶತಾವತಾರ - ಸಹಸ್ರಾವತಾರ - ಅನಂತಾವತಾರಗಳನ್ನು ಸ್ಮರಿಸುವುದು. ಎಲ್ಲವೂ ನಮ್ಮ ಪಾಪ ನಾಶನಕ್ಕೆ ಕಾರಣವಾಗುತ್ತದೆ.

## ನಮ್ಮ ದೇಹದ ಹುಟ್ಟಿನ ಅನುಸಂಧಾನದ ಬಗ್ಗೆ ದೇವರಲ್ಲಿ ಪ್ರಾರ್ಥನೆ:

"ಸಾಧನ ಶರೀರವಿದು ನೀ ದಯದಿ ಕೊಟ್ಟದ್ದು, ಸಾಧಾರಣವಲ್ಲ ಸಾಧುಪ್ರಿಯನೇ" - ಪೂರ್ಣಾಯಸ್ಸು, ಆರೋಗ್ಯ, ಐಶ್ವರ್ಯ, ಜ್ಞಾನ - ಭಕ್ತಿ, ವೈರಾಗ್ಯ ಕೊಟ್ಟು, ದುಷ್ಟರ ಸಹವಾಸ ತಪ್ಪಿಸಿ, ಸಜ್ಜನರ ಸಹವಾಸ ಕೊಟ್ಟು, ವಿಷ್ಣು ವೈಷ್ಣವರ ಸೇವಾ ಮಾಡಿಸಿ - ಅಂತ್ಯ ಕಾಲಕ್ಕೆ ಅನ್ಯವಾರ್ತೆಗೆ ಮನಸ್ಸು ಹೋಗದೆ ನಿನ್ನಲ್ಲೇ ಮನಸ್ಸು ಕೊಟ್ಟು ಉದ್ಧಾರ ಮಾಡು ಸ್ವಾಮಿ, ಗುರುಗಳಂತರ್ಯಾಮಿ.

# ಮುಖಪ್ರಕ್ಷಾಳನ

ಹಿಂದಿನ ಕಾಲದಲ್ಲಿ ಹಲ್ಲು ಉಜ್ಜಿ ಶುದ್ಧಿ ಮಾಡಲು ಬೇವಿನಕಡ್ಡಿ, ಮಾವಿನ ಕಡ್ಡಿ ಉಪಯೋಗಿಸುತ್ತಿದ್ದರು. ಇದರಿಂದ ಹಲ್ಲಿನ ರೋಗಗಳು ಬರುತ್ತಿರಲಿಲ್ಲ. ನಂತರ ವನಸ್ಪತಿಗಳಿಂದ ಮಾಡಿದ ದಂತಧಾವನ ಚೂರ್ಣ ಬರುತ್ತಿತ್ತು. ನಂಜನಗೂಡಿನ ಹಲ್ಲುಪುಡಿ ಬಹಳ ಜನಪ್ರಿಯವಾಗಿತ್ತು. ಇದರಿಂದ ಹಲ್ಲಿನ ಮೇಲಿನ ಅಂಟು ಹೋಗುತ್ತಿತ್ತು. ಈಗ ಪೇಸ್ಟ್‌ಗಳು ಬಂದವು, ಹಲ್ಲಿನ ರೋಗಗಳು ಜಾಸ್ತಿಯಾದವು.

ಹಲ್ಲು - ಹರಿ : ಹಲ್ಲುಜ್ಜುವಾಗ ಹರಿ ಹರಿ ಎಂದು ಸ್ಮರಿಸಬೇಕು, ಮುಖ - ಮಾಧವ : ಮುಖ ತೊಳೆದುಕೊಳ್ಳವಾಗ ಕಿವಿಯನ್ನು ಸೇರಿಸಿ ತೊಳೆದುಕೊಳ್ಳಬೇಕು. ಮುಖ ತೊಳೆದುಕೊಳ್ಳುವಾಗ ಮತ್ತು ಬಾಯಿಗೆನೀರು ಹಾಕಿ ಮುಕ್ಕಳಿಸುವಾಗ ಮಾಧವ ಮಾಧವ ಎಂದು ಸ್ಮರಿಸಬೇಕು. ಬಾಯಿ ಮುಕ್ಕಳಿಸುವುದಕ್ಕೆ 'ಗಂಡೂಷ' ಎಂದು ಹೆಸರು. ಆ ನೀರನ್ನು ಹೊರಗೆ ಉಗುಳುವಾಗ ಶ್ರೀಹರಿವಾಯುಗಳ ದ್ವೇಷಿಗಳ ಮುಖದ ಮೇಲೆ ಉಗುಳುವಂತೆ ಅನುಸಂಧಾನ ಮಾಡಬೇಕು.

## ಮೃತಿಕಾಶೌಚ

ಮನೆಕಟ್ಟಬೇಕಾದರೆ ಅಡಿಪಾಯ ಭದ್ರವಾಗಿರಬೇಕು. ಇಲ್ಲದಿದ್ದರೆ ಮನೆ ಬಿದ್ದುಹೋಗುತ್ತದೆ, ಅದರಂತೆ ಸಕಲ ಸತ್‌ಕರ್ಮ ಸಾಧನಗಳೂ ಭದ್ರವಾಗಿರಬೇಕಾದರೆ ಮೃತಿಕಾಶೌಚ ಸರಿಯಾಗಿರಬೇಕು - ಮಲಮೂತ್ರ ವಿಸರ್ಜನೆಯಾದಾಗ ಬರುವ ದುರ್ಗಂಧದ ನಾಶಕ್ಕಾಗಿ ಮೊದಲು ನೀರಿನಿಂದ ಶುದ್ಧ ಮಾಡಿಕೊಂಡು ಮತ್ತು ಕೆಮ್ಮಣ್ಣಿನಿಂದ ದುರ್ವಾಸನೆ ಹೋಗುವ ತನಕ ಮೃತಿಕಾ ಲೇಪನ ಮಾಡಿ ಹಿಂದೆ ಮುಂದೆ ತಿಕ್ಕಿಕೊಂಡು ನಂತರ ನೀರಿನಿಂದ ಶುದ್ಧಿಮಾಡಿಕೊಳ್ಳಬೇಕು. ನಂತರ ಎಡಗೈ, ಬಲಗೈ, ಎಡಗಾಲು, ಬಲಗಾಲುಗಳಿಗೆ ಮೃತಿಕೆ ಲೇಪನಮಾಡಿಕೊಂಡು ಉಜ್ಜಿ ತೊಳೆದುಕೊಳ್ಳಬೇಕು. ನಂತರ ನೀರನ್ನು ಬಾಯಿಗೆ ಹಾಕಿ ಮುಕ್ಕಳಿಸಬೇಕು.

## ಮೃತ್ತಿಕಾಶೌಚ - ಗೃಹಸ್ಥರಿಗೆ

ಮೂತ್ರವಿಸರ್ಜನೆಯಾದಾಗ

| | | |
|---|---|---|
| ಎಡಗೈಗೆ - ೩ ಸಾರಿ | ಎಡಗಾಲಿಗೆ - ೩ ಸಾರಿ | |
| ಬಲಗೈಗೆ - ೩ ಸಾರಿ | ಬಲಗಾಲಿಗೆ - ೩ ಸಾರಿ | ಗಂಡೂಷ - ೩ ಸಾರಿ |

ಮಲವಿಸರ್ಜನೆಯಾದಾಗ

| | | |
|---|---|---|
| ಎಡಗೈಗೆ - ೮ ಸಾರಿ | ಎಡಗಾಲಿಗೆ - ೮ ಸಾರಿ | |
| ಬಲಗೈಗೆ - ೮ ಸಾರಿ | ಬಲಗಾಲಿಗೆ - ೮ ಸಾರಿ | ಗಂಡೂಷ - ೮ ಸಾರಿ |

ಹೆಂಗಸರಿಗೆ ಗಂಡಸರ ಅರ್ಧ ಭಾಗ

ಬ್ರಹ್ಮಚಾರಿಗಳಿಗೆ ಗೃಹಸ್ಥರ ಎರಡರಷ್ಟು ಜಾಸ್ತಿಯಾಗಬೇಕು.

ಸನ್ಯಾಸಿಗಳಿಗೆ ಬ್ರಹ್ಮಚಾರಿಗಳ ನಾಲ್ಕರಷ್ಟು ಜಾಸ್ತಿಯಾಗಬೇಕು.

ಮಲಮೂತ್ರ ವಿಸರ್ಜನೆಗಳು ಕಲಿಯ ಬಾಯಲ್ಲಿ ಅಂತ, ಹಾಗೆ ದೈತ್ಯ ತಾರತಮ್ಯ ಚಿಂತನೆ ಮಾಡಬೇಕು. ಮೃತ್ತಿಕಾಶೌಚ ಮಾಡುವಾಗ ತ್ರಿವಿಕ್ರಮನನ್ನು ಸ್ಮರಣೆ ಮಾಡಬೇಕು. ಗಂಡೂಷ ಮಾಡುವಾಗ ಮಾಧವನನ್ನು ಸ್ಮರಿಸಬೇಕು, ಮಲಮೂತ್ರ ವಿಸರ್ಜನೆ ಮಾಡುವಾಗ ಯಜ್ಞೋಪವೀತವನ್ನು ಬಲಕಿವಿಗೆ ಹಾಕಿಕೊಳ್ಳಬೇಕು. (ಕಾರಣ ಹಿಂದೆ ಹೇಳಿದೆ).

ಮೃತ್ತಿಕಾಶೌಚಕ್ಕೆ ಕೆಮ್ಮಣ್ಣು ಬಿಟ್ಟು ಬೇರೆ ಮಣ್ಣು ಬರುವುದಿಲ್ಲ, ಊರು ಸಂಚಾರ ಮಾಡುವಾಗ ಜೊತೆಗೆ ಕೆಮ್ಮಣ್ಣು ತೆಗೆದುಕೊಂಡು ಹೋಗುವುದು ಕರ್ತವ್ಯ. ಜಿಗುಟು ಮಣ್ಣು, ಜೇಡಿಮಣ್ಣು, ಮರಳು, ಹೊಲಗದ್ದೆ, ಗಿಡದ ಪಾತಿ ಮಣ್ಣು, ಬೀದಿ ಮಣ್ಣು ಬರುವುದಿಲ್ಲ. ಕೆಮ್ಮಣ್ಣು ಬಹಳ ಉತ್ತಮವಾದುದು.

## ತುಳಸಿವಂದನೆ

ರಾತ್ರಿ ಮಲಗಿದ್ದಾಗ ಉಟ್ಟಿದ್ದ ವಸ್ತ್ರವನ್ನು ಬದಲಾಯಿಸಿ ಸ್ನಾನಕ್ಕೆ ಹೋಗುವಾಗ ಧರಿಸುವ ಬೇರೆ ವಸ್ತ್ರವನ್ನು ಧರಿಸಿಕೊಂಡು ಶುದ್ಧವಾದ ನೀರನ್ನು ತಂದು ತುಳಸೀಗಿಡದ ಬುಡಕ್ಕೆ ಹಾಕಿ, ಆ ನೀರನ್ನು ತಲೆಯ ಮೇಲೆ ಪ್ರೋಕ್ಷಣೆ ಮಾಡಿಕೊಂಡು ಒಂದು ಸ್ನಾನವಾಯಿತು ಎಂದು ಚಿಂತನೆ ಮಾಡಬೇಕು. 'ಯನ್ಮೂಲೇ ಸರ್ವತೀರ್ಥಾನೀ' ಯನ್ಮಧ್ಯೇ ಸರ್ವದೇವತಾಃ ಯದಗ್ರೇ ಸರ್ವವೇದಾಶ್ಚ ತುಳಸೀತ್ವಾಂ ನಮಾಮ್ಯಹಂ' ಎಂದು ಹೇಳಬೇಕು. ಯಾವ ಮೂಲದಲ್ಲಿ (ಬುಡದಲ್ಲಿ) ಸರ್ವತೀರ್ಥಗಳು (ನದಿಗಳು), ಯಾವ ಮಧ್ಯದಲ್ಲಿ ಸರ್ವ ದೇವತೆಗಳು, ಯಾವ ಅಗ್ರ (ತುದಿ) ಭಾಗದಲ್ಲಿ ಸರ್ವ ವೇದಗಳು ಇವೆಯೋ ಅಂತಹ ತುಳಸೀಗಿಡಕ್ಕೆ ನಮಸ್ಕರಿಸುತ್ತಿದ್ದೇನೆ ಎಂದು ಹೇಳಿ - ತುಳಸೀ ಮೃತ್ತಿಕೆಯನ್ನು ಗಂಡಸರು, ಮಡಿಹೆಂಗಸರು, ಹಣೆಯಲ್ಲಿ ಊರ್ಧ್ವಪುಂಡದಂತೆ ಹಚ್ಚಿಕೊಂಡು, ಮಧ್ಯೆತಿದ್ದಿಕೊಳ್ಳಬೇಕು. ಮುತ್ತೈದೆಯರು ಕುಂಕುಮ ಹಚ್ಚಿಕೊಳ್ಳಬೇಕು.

## ಸಮುದ್ರಮಥನದ ಕಥೆಯ ಸ್ಮರಣೆ ಮಾಡಬೇಕು

ಶ್ರೀಹರಿಯ ಅಪ್ಪಣೆಯಂತೆ ಗರುಡದೇವರು ಮಂದರಪರ್ವತವನ್ನು ಕ್ಷೀರಸಾಗರದಲ್ಲಿ ತಂದಿಟ್ಟರು. ಅದು ಮುಳಗಿಹೋಯಿತು. ಶ್ರೀಹರಿಯು ಕೂರ್ಮ (ಆಮೆ) ರೂಪಧರಿಸಿ ತನ್ನ ಬೆನ್ನಿನ ಮೇಲೆ ಆ ಬೆಟ್ಟವನ್ನು ಧರಿಸಿ ಮೇಲಕ್ಕೆ ತಂದನು. ಅಜಿತ ರೂಪದಿಂದ ಬೆಟ್ಟದ ಕೆಳಗೆ ಮತ್ತು ಮೇಲೆ ಎರಡು ಕೈಗಳಿಂದ ಬೀಳದಂತೆ ಹಿಡಿದನು. ವಾಸುಕೀ ಸರ್ಪವನ್ನು ಆ ಬೆಟ್ಟಕ್ಕೆ ಸುತ್ತಿದರು, ದೈತ್ಯರು ಹಾವಿನ ಹೆಡೆಯನ್ನು ಹಿಡಿದರು. ದೇವತೆಗಳು ಬಾಲವನ್ನು ಹಿಡಿದರು. ಓಷಧಿಗಳನ್ನು (ಮೂಲಿಕೆಗಳನ್ನು) ತಂದು ಹಾಕಿ ಕಡೆದರು. ಇದಿಷ್ಟು ಅಧಿಷ್ಠಾನದಲ್ಲಿಯೂ ಸಹ ದೇವರು ಒಂದು ವಿಶೇಷ ರೂಪದಿಂದ ಸನ್ನಿಹಿತನಾದನು. ಮೊದಲು ಹುಟ್ಟಿದ್ದು ಹೆಂಡ ಅದನ್ನು ದೈತ್ಯರು ತೆಗೆದುಕೊಂಡರು. ನಂತರ ಹಾಲಾಹಲ ವಿಷ ಹುಟ್ಟಿತು - ಇದನ್ನು ವಾಯುದೇವರು ಪಾನ ಮಾಡಿ ಸ್ವಲ್ಪ ರುದ್ರದೇವರಿಗೆ ಕೊಟ್ಟರು. ಅದನ್ನು ಅವರು ಪಾನ ಮಾಡಿ ಕೈಕೊಡವಿದರು. ಹಾವು, ಚೇಳುಗಳು ಹುಟ್ಟಿಕೊಂಡವು. ಉಚ್ಚೈಶ್ರವ ಎಂಬ ಕುದುರೆ, ಐರಾವತವೆಂಬ ಆನೆ, ಕಲ್ಪವೃಕ್ಷ, ಪಾರಿಜಾತ ವೃಕ್ಷ, ಕಾಮಧೇನು, ಚಿಂತಾಮಣಿಗಳು ಹುಟ್ಟಿದವು. ಇದನ್ನು ಇಂದ್ರದೇವರು ತೆಗೆದುಕೊಂಡರು. ರಮಾದೇವಿಯವರು ಒಂದು ರೂಪದಿಂದ ಬಂದು ಶ್ರೀಹರಿ ದೋಷದೂರ ಸರ್ವೋತ್ತಮ ಎಂದು ತಿಳಿಯಪಡಿಸಿ ಅಜಿತರೂಪಿಯ ಪರಮಾತ್ಮನನ್ನು ವಿವಾಹಮಾಡಿಕೊಂಡರು. ಚಂದ್ರದೇವರು, ಅಪ್ಸರ ಸ್ತ್ರೀಯರು ಹುಟ್ಟಿದರು. ಧನ್ವಂತರೀ ಪರಮಾತ್ಮನ ಅವತಾರ - ಅಮೃತೋತ್ಪತ್ತಿ - ಅಮೃತ ಘಟದಿಂದ ತುಳಸೀ ಉತ್ಪತ್ತಿ - ಶ್ರೀಹರಿಯ ತುಳಸೀ ವಿವಾಹ. ಅಸುರರಿಂದ ಅಮೃತ ಘಟದ ಅಪಹಾರ - ಅವರವರಲ್ಲಿ ಪರಸ್ಪರ ಜಗಳ - ಅವರ ದೋಷ ಪ್ರದರ್ಶನ - ಮೋಹಿನಿ ರೂಪದಿಂದ ಅಮೃತ ಘಟ ದೈತ್ಯರಿಂದ ಸ್ವೀಕಾರ - ದೇವತೆಗಳಿಗೇ ಅಮೃತಪ್ರಾಪ್ತಿ - ದೈತ್ಯರಿಗೆ ಅವರ ದೋಷಕ್ಕೆ ತಕ್ಕಂತೆ ವಂಚನೆ - ಸರ್ಭಾನುವೆಂಬ ದೈತ್ಯ ಸೂರ್ಯಚಂದ್ರರ ಮಧ್ಯೆ ಬಂದು ಕೈಹಿಡಿದು ಅಮೃತಪ್ರಾಶನ ಮಾಡಿದ. (ಅವನು ಪಡೆದ ವರದಂತೆ) ಪರಮಾತ್ಮನ ಕೈಸೌಟಿನಿಂದ ಸರ್ಭಾನುವಿನ ಶಿರಚ್ಛೇದನ, ರಾಹುಕೇತು

ರೂಪ ಪ್ರಾಪ್ತಿ. ದಶಮೀ ಮಥನ - ಏಕಾದಶೀ ಅಮೃತ ಉತ್ಪತ್ತಿ - ದ್ವಾದಶೀ ಅಮೃತಪ್ರಾಶನ ಪಾರಣೆ - ತ್ರಯೋದಶೀ ದೇವದೈತ್ಯರ ಯುದ್ಧ - ಚತುರ್ದಶೀ - ದೇವತೆಗಳಿಗೆ ಜಯ, ದೈತ್ಯರಿಗೆ ಸೋಲು - ಪೌರ್ಣಮೆ ದೇವತೆಗಳಿಗೆ ಸಾಮ್ರಾಜ್ಯ ಪ್ರಾಪ್ತಿ. ಈ ಕಥೆಯನ್ನು ಓದಿ ಅರ್ಥಮಾಡಿಕೊಳ್ಳಿ. ಅನಂತರ ಅದನ್ನು ಸಂಕ್ಷೇಪಮಾಡಿ ಹೇಗೆಂದರೆ - ಕ್ಷೀರಸಾಗರ - ಮಂದರ ಪರ್ವತ - ಓಷಧಿ - ಕೂರ್ಮಾವತಾರ - ಮಥನ ಹೀಗೆ ಒಂದೊಂದೇ ಹೆಸರುಗಳನ್ನು ಮಾತ್ರ ಹೇಳುವುದು. ಕಥೆಯನ್ನು ಜ್ಞಾಪಿಸಿಕೊಳ್ಳುವುದು ಹೀಗೆ ಅಭ್ಯಾಸ ಮಾಡಿಕೊಂಡು ಮನಸ್ಸಿನಲ್ಲಿ ಚಿಂತನೆ ಮಾಡುವುದು. ಇದು ೫ ನಿಮಿಷಗಳಲ್ಲಿ ಮುಗಿಯಬೇಕು. ಇದು ಕೇವಲ ಮನಸ್ಸಿನ ವ್ಯಾಪಾರ, ಬಾಯಲ್ಲಿ ಹೇಳುವುದಲ್ಲ.

## ಸ್ನಾನ ಮಾಡುವುದು

ಸಾವಿರ ಕೆಲಸಬಿಟ್ಟು ಸ್ನಾನ ಮಾಡು - ನೂರು ಕೆಲಸ ಬಿಟ್ಟು ಊಟ ಮಾಡು - ಕೋಟಿ ಕೆಲಸ ಬಿಟ್ಟು ಹರಿಸ್ಮರಣೆ ಮಾಡು ಎಂದು ನಾಡುನುಡಿ ಇದೆ. ಏಕೆಂದರೆ ಆ ಕೆಲಸಗಳಿಗೆ ಆಪತ್ತುಗಳು ಅಡಚಣೆಗಳು ಜಾಸ್ತಿ ಇರುತ್ತದೆ. ಅದಕ್ಕೆ ಮುಂಚೆ ಮಾಡಬೇಕು ಎಂದು ಅಭಿಪ್ರಾಯ. ಮೈತೊಳೆದುಕೊಳ್ಳುವುದು ಎಂದರೆ ದೇಹದ ಮೇಲೆ ಮಾತ್ರ ಶುದ್ಧಿಮಾಡಿಕೊಳ್ಳುವುದು ಎಂದರ್ಥ., ಸ್ನಾನ ಮಾಡುವುದೆಂದರೆ ಒಳಗೆ ಶುದ್ಧಿ ಮಾಡಿಕೊಳ್ಳುವುದು ಎಂದರ್ಥ. ಇದರಿಂದ ಅಂತಃಕರಣ (ಮನಸ್ಸು) ಶುದ್ಧವಾದಂತೆ. ೫ ವರ್ಷದ ಒಳಗಿನ ಮಕ್ಕಳು ಬರಿ ಬತ್ತಲೆ ಸ್ನಾನ ಮಾಡಿದರೆ ದೋಷವಿಲ್ಲ, ಬ್ರಹ್ಮಚಾರಿಗಳು ಕಾಚಹಾಕಿಕೊಳ್ಳದೇ, ಲಂಗೋಟಿ ಹಾಕಿಕೊಂಡು ಸ್ನಾನ ಮಾಡಬೇಕು. ಗೃಹಸ್ಥರು ಲಂಗೋಟಿ, ಕಾಚಹಾಕಿಕೊಳ್ಳಬಾರದು. ಒದ್ದೆ ಕಚ್ಚೆ ಮಡಿಪಂಚೆ ಉಟ್ಟುಕೊಂಡು ಇನ್ನೊಂದು ಮಡಿಪಂಚೆ ಕೈಯಲ್ಲಿ ಹಿಡಿದುಕೊಂಡು ಅಥವಾ ಸೊಂಟಕ್ಕೆ ಸುತ್ತಿಕೊಂಡು ಸ್ನಾನಮಾಡಬೇಕು. ಹೆಂಗಸರು ಒಂದು ತುಂಡು ಸೀರೆ ಉಟ್ಟಿಕೊಂಡು ಸ್ನಾನ ಮಾಡಬೇಕು. ಕೆಲವರು ಬಚ್ಚಲ ಮನೆ ಬಾಗಿಲು ಹಾಕಿಕೊಂಡು ಒಳಗೆ ಬೌದ್ಧಾವತಾರದಂತೆ ಬೆತ್ತಲೆ ಗೋಮಟೇಶ್ವರನ ಮಸ್ತಾಭಿಷೇಕದಂತೆ ಸ್ನಾನ ಮಾಡುತ್ತಾರೆ. ಇಂಥವರಿಗೆ ಬಟ್ಟೆಯನ್ನು ಹಾಕದಿರುವ ಪ್ರಾಣಿಗಳ ಅಥವಾ ಪಿಶಾಚಿಗಳ ಜನ್ಮ ಮುಂದೆ ಬರುತ್ತದೆ. ಗಂಡಸರು, ಮಡಿಹೆಂಗಸರು ತಲೆಯ ಮೇಲೆ ಮುಂಚೆ ನೀರುಹಾಕಿಕೊಂಡು ಸ್ನಾನ ಪ್ರಾರಂಭ ಮಾಡಬೇಕು. ಮತ್ತೈದೆಯರು ಮತ್ತು ಹೆಣ್ಣುಮಕ್ಕಳು ಅವರ ಬೈತಲೆಯಲ್ಲಿ ಗಂಗಾಸನ್ನಿಧಾನವಿರುವುದರಿಂದ ಅವರು ತಲೆಯ ಮೇಲೆ ಸ್ನಾನಮಾಡಬಾರದು, ಕಂಠದ ತನಕ ಸ್ನಾನ ಮಾಡಬೇಕು. ಮುಟ್ಟಾದಾಗ ಮಂಗಳ ಸ್ನಾನದ ದಿವಸ ಗ್ರಹಣ, ಸೂತಕ, ತೀರ್ಥಯಾತ್ರೆ, ನದೀಸ್ನಾನ ಮುಂತಾದ ಸಂದರ್ಭಗಳಲ್ಲಿ ತಲೆಯ ಸ್ನಾನ ಮಾಡಬಹುದು. ರೋಗ ಮುಂತಾದ ಕೆಲವು ಕಾರಣಗಳಿಂದ ಗಂಡಸರು ಟೊಂಕದ (ಕಟಿಸ್ನಾನ) ಮತ್ತು ಕಂಠ ಪರ್ಯಂತ ಸ್ನಾನ ಮಾಡುತ್ತಾರೆ. ಆದರೆ ಇದು ಯಾವಾಗಲೂ ಅಲ್ಲ. ಇನ್ನೂ ಕೆಲವರು ಕ್ರಾಪು, ತುಂಬಾ ಜುಟ್ಟು ಬೆಳೆಸಿಕೊಂಡು ಸೀತವಾಗುತ್ತದೆ ಎಂದು ತಲೆಯ ಮೇಲೆ ಸ್ನಾನ ಮಾಡುವುದಿಲ್ಲ. ಆದರೆ ಇದು ಸರಿಯಾದ ಕಾರಣವಲ್ಲ. ಇದು ಸ್ನಾನವೇ ಆಗುವುದಿಲ್ಲ ಶಿಖಾ ಗೋಪಾದದಷ್ಟು ಮಾತ್ರವಿರಬೇಕೇ ಹೊರತು ಹೆಚ್ಚಿಗೆ ಇರುವುದು ಅನಾವಶ್ಯಕ. ದೇಹದಲ್ಲಿರುವ ದುರ್ವಾಸನೆ ಮುಂತಾದ ಕಷ್ಮಲಗಳನ್ನು ಕಳೆದುಕೊಂಡು ದೇಹದ ಶುದ್ಧಿಗಾಗಿ ಮಾಡುವ ಸ್ನಾನಕ್ಕೆ ಮಲಸ್ನಾನವೆಂದು ಹೆಸರು. ಅನಂತರ ಮಡಿ ನೀರು ಹಾಕಿಕೊಳ್ಳಬೇಕು.

### ಚುಟುಕೇಶ್ವರ

ಸ್ನಾನ ಮಾಡುವಾಗ, ಉಡುಪಿ ಶ್ರೀಕೃಷ್ಣನಿಗೆ ಅಭಿಷೇಕ ಮಾಡಿದರು ಎಂದು ಸ್ಮರಿಸಿದರೆ, ನಮ್ಮ ಸ್ನಾನ ನಮ್ಮಂತರ್ಯಾಮಿ ಶ್ರೀಹರಿಗೆ ಅಭಿಷೇಕವಾಗುತ್ತದೆ.

## ಮಡಿ ನೀರು ಎಂದರೆ ಏನು?
## ಮಡಿ ನೀರು ಏಕೆ ಹಾಕಿಕೊಳ್ಳಬೇಕು?

ಮಡಿ ಎಂದರೆ - ಗಿಡಕ್ಕೆ ಮಾಡುವ ಪಾತಿ, ಅಗಸನ ಮಡಿ, ಸಾವು, ಶುದ್ಧಿ ಎಂದು ನಾನಾರ್ಥಕೋಶ. ಅದರಲ್ಲಿ ಈ ಸಂದರ್ಭಕ್ಕೆ ಶುದ್ಧಿ ಮಾಡುವುದು ಎಂದು ಅರ್ಥಮಾಡಬೇಗು. ಎಂದರೆ ಶುದ್ಧಿ ಮಾಡುವ ನೀರು ಎಂದು ಅರ್ಥ. ಬಚ್ಚಲಮನೆ ಸ್ನಾನದ ನೀರಿಗೆ ಮತ್ತು ಸ್ನಾನ ಮಾಡುವ ತಂಬಿಗೆಗಳಿಗೆ ಮಕ್ಕಳ ಎಂಜಲ ಕೈ ಸ್ಪರ್ಷ, ಮೃತ್ತಿಕಾಶೌಚ ಮಾಡದಿರುವವರ ಹಸ್ತ ಸ್ಪರ್ಷ, ಸ್ವಕೀಯ ಕ್ಷೌರ ಮಾಡಿಕೊಂಡವರ ಹಸ್ತ ಸ್ಪರ್ಷ - ಕೇಶವಾಚಾರಿಣಿಯರ (ಪೂರ್ವಸುವಾಸಿನಿಯರು) ಹಸ್ತ ಸ್ಪರ್ಷ ಮೊದಲಾದ ಅಷ್ಟೋತ್ತರ ಶತ (೧೦೮) ಮೈಲಿಗೆ ಸ್ಪರ್ಷಗಳ ಸಂಪರ್ಕ ಆಗಿರುತ್ತಾದ್ದರಿಂದ ಅಲ್ಲಿ ಶುಭ್ರತ್ವವಿದೆಯೇ ಹೊರತು ಶುದ್ಧತ್ವವಿರುವುದಿಲ್ಲ, ಆ ಶುದ್ಧತ್ವ ಪ್ರಾಪ್ತಿಗಾಗಿಯೇ ಮಡಿನೀರು ಹಾಕಿಕೊಳ್ಳಬೇಕು.

ಕೊಳಾಯಿಯಿಂದ ನೇರವಾಗಿ ಬಂದ ನೀರು, ಭಾವಿ ನೀರು, ಬೋರ್‌ವೆಲ್ ನೀರು ಯಾವುದೋ ಅಂತು ಬೇರೇ ನೀರನ್ನು ತಂದು, ಜುಟ್ಟನ್ನು ಕೊನೆಯಲ್ಲಿ ಗಂಟುಹಾಕಿಕೊಂಡು ಆಚಮನ ಸಂಕಲ್ಪ ಮಾಡಿ, ಅವತ್ತಿನ ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳನ್ನು ಹೇಳಿ 'ಗಂಗಾಭಾಗೀರಥಿ ಸ್ನಾನಮಹಂ ಕರಿಷ್ಯೆ' ಎಂದು ಹೇಳಿ ಮಡಿನೀರಿನಲ್ಲಿ ಅರ್ಘ್ಯಕೊಡಬೇಕು. ನಂತರ 'ನಮಸ್ತೇ ಕಮಲನಾಭಾಯ ನಮಸ್ತೇ ಜಲಶಾಯಿನೇ ॥ ನಮಸ್ತೇ ಹೃಷೀಕೇಶಾಯ । ಗೃಹಾಣಾರ್ಘ್ಯಂ ನಮೋಸ್ತುತೇ' ಎಂದು ಹೇಳಿ ಒಂದು ಅರ್ಘ್ಯವನ್ನು ದೇವರಿಗೆ ಕೊಡಬೇಕು. ಇನ್ನೊಂದು ಮಂತ್ರ 'ಗಂಗಾದ್ಯಾಃಸರಿತಃಸರ್ವಾಸ್ತೀರ್ಥಾನಿಚ ತಥಾಪ್ರದಾಃ ಪ್ರತಿಗೃಹ್ಯಮಯಾದತ್ತಮರ್ಘ್ಯಂ ಸಮ್ಯಕ್‌ಪ್ರಸೀದತ ॥ ಎಂದು ಹೇಳಿ ಇನ್ನೊಂದು ಅರ್ಘ್ಯವನ್ನು ತೀರ್ಥಾಭಿಮಾನಿಗಳಿಗೆ ಕೊಡಬೇಕು. ಅನಂತರ ॥ ಗಂಗಾ ಗಂಗಾ ಯೋಬ್ರೂಯಾತ್ ಯೋಜನಾನಾಂ ಶತೈರಪಿ ಮುಚ್ಯತೇಸರ್ವಪಾಪೇಭ್ಯೋ ವಿಷ್ಣುಲೋಕಂ ಚ ಗಚ್ಛತಿ ॥

ಗಂಗೆಯ ಮಹಿಮೆಯನ್ನು ತಿಳಿದುಕೊಂಡು ಗಂಗಾ ಎಂದು ಅಂದರೆ ಸ್ನಾನದ ಫಲ ಬರುತ್ತದೆಯೇ ಹೊರತು ಇಲ್ಲದಿದ್ದರೆ ಬರುವುದಿಲ್ಲ. ಗಂಗಾ ಗಂಗಾ ಎಂದು ಸ್ಮರಣೆ ಮಾಡಿದವರು ಗಂಗಾನದಿಯಿಂದ ನೂರು ಯೋಜನ ದೂರದಲ್ಲಿದ್ದರೂ ಸಹ ಗಂಗಾಸ್ನಾನದ ಫಲವನ್ನು ಹೊಂದಿ ಕಾಲಾಂತರದಲ್ಲಿ ವಿಷ್ಣುಲೋಕವನ್ನು ಹೊಂದುತ್ತಾರೆ.

ಸ್ನಾನ ಮಾಡುವಾಗ ಯಾವ ಯಾವ ನದಿಗಳಲ್ಲಿ ಸ್ನಾನ ಮಾಡಿದ್ದೀರೋ ಆ ನದಿಗಳನ್ನು ನೆನಪಿಗೆ ತಂದುಕೊಂಡು ಅಲ್ಲೇ ಸ್ನಾನ ಮಾಡುತ್ತಿದ್ದೇನೆ ಎಂದು ಸ್ಮರಣೆ ಮಾಡಿದರೆ - ನಾವು ಮನೆಯಲ್ಲೇ ಸ್ನಾನ ಮಾಡಿದರೂ ಸಹ ನಮ್ಮ ಮನಸ್ಸು ಅಲ್ಲಿಗೆ ಹೋಗಿರುತ್ತದೆಯಾದ್ದರಿಂದ ನಾವು ಆ ನದಿಯಲ್ಲೇ ಸ್ನಾನ ಮಾಡಿದಂತಾಯಿತು. ಶ್ರೀಮನ್ ಮಧ್ವಾಚಾರ್ಯರು ಮಧ್ವಸರೋವರದಲ್ಲಿ ಸ್ನಾನ ಮಾಡಿದರು ಎಂದು ಸ್ಮರಿಸಿಕೊಂಡರೆ ನಾವು ಸಹ ಅವರ ಜೊತೆಯಲ್ಲೇ ಸ್ನಾನ ಮಾಡಿದಂತಾಯಿತು. ಶ್ರೀಮದಾಚಾರ್ಯರು ಶೀತಲಗಂಗಾದಲ್ಲಿ ಸ್ನಾನ ಮಾಡಿದರು ಎಂದು ಸ್ಮರಿಸಿಕೊಂಡರೆ ಬದರಿ ಕ್ಷೇತ್ರದಲ್ಲಿ ಶೀತಲ ಗಂಗಾದಲ್ಲಿಯೇ ಸ್ನಾನಮಾಡಿದಂತಾಯಿತು. ಮನಸ್ಸಿನಲ್ಲಿ ಸ್ಮರಸಿಕೊಳ್ಳುವುದರ ಮಹಿಮೆ ಎಷ್ಟು ಇದೆ ನೋಡಿ. ಹೀಗೆ ಮನಸ್ಸಿನಿಂದ ಬೇಕಾದಷ್ಟು ಒಳ್ಳೆಯ ಸಾಧನ ಮಾಡಿಕೊಳ್ಳಬಹುದು, ನಾವು ಕಲಿಯುಗದಲ್ಲಿದ್ದರೂ ಸಹ ತಮ್ಮ ಪಾಲಿಗೆ ಇದು ಕೃತಯುಗವೇ ಆಗುತ್ತದೆ. ಕೆಟ್ಟಮನಸ್ಸೇ ಕಲಿಯುಗ, ಭಗವತ್ಪರವಾದ ಒಳ್ಳೆಯ ಮನಸ್ಸೇ ಕೃತಯುಗ.

ಕೇವಲ ನೀರು ಜಡ - ದೇಹ ಜಡ - ಯಾವುದನ್ನು ಯಾವುದು ಮಡಿ ಮಾಡಬಲ್ಲದು ಎಂದರೆ ಬರೇ ನೀರು ಮಾಡಿತೆಂದರೆ ಇದು ಸರಿಯಾದ ಜ್ಞಾನವಲ್ಲ ತಪ್ಪು. ಆ ನೀರಿನಲ್ಲಿರುವ ಜಲಧಿ ಮಂದಿರನ ಶುಭನಾಮ ಅಂದರೆ ಭಗವಂತನ ಸನ್ನಿಧಾನದಿಂದ ದೇಹಕ್ಕೆ ಮಡಿ ಎಂದರೆ ಶುದ್ಧಿಯಾಯಿತು ಎಂದು ತಿಳಿಯುವುದೇ ಸರಿಯಾದ ಜ್ಞಾನ. ಅದರ ಕ್ರಮ ಹೀಗೆ - 'ತದ್ರೂಪ, ತನ್ನಾಮ, ತತ್ತೇಜ, ತದ್ಭಿನ್ನ, ತಂ, ಶ್ರೀನಿವಾಸಂ ನಮಾಮಿ' ಈ ಮಂತ್ರ ಮರಿಯಬೇಡಿ, ಗಂಡು ಹೆಣ್ಣು, ಹುಡುಗಿ, ಹುಡುಗ, ಮುದುಕ, ಪಂಡಿತ, ಪಾಮರ, ಬ್ರಾಹ್ಮಣ, ಶೂದ್ರ ಯಾರೇ ಆಗಲಿ ಮೇಲಿನ ಮಂತ್ರವನ್ನು ತಿಳಿದುಕೊಳ್ಳಲು ನಿರ್ಬಂಧವಿಲ್ಲ ಎಲ್ಲರೂ ಹೇಳಬಹುದಾದ ಮಂತ್ರ. ಇದೇ ಎಲ್ಲಾ ಅನುಸಂಧಾನಕ್ಕೂ ಮೂಲಮಂತ್ರ, ಜುಟ್ಟಿನ ಗಂಟನ್ನು ಬಿಚ್ಚಿ ತ್ರಿವಿಕ್ರಮದೇವರ ಪಾದೋದಕ ಗಂಗೆಯು ತನ್ನ ದೇಹದ ಮೇಲೆ ಬಿದ್ದು ಒಳಗಿರುವ ಇಡಾ, ಪಿಂಗಳ, ಸುಷುಮ್ನ, ನಾಡಿಗಳಲ್ಲಿ ಪ್ರವೇಶ ಮಾಡಿ ಅಂತರಂಗ, ಬಹಿರಂಗ ಶುದ್ಧಿಯನ್ನು ಕೊಡುತ್ತದೆ ಮತ್ತು ನಮ್ಮ ದೇಹದಲ್ಲಿರುವ ತತ್ವೇಶ ದೇವತೆಗಳು - ಅವರ ಒಳಗೆ ಶ್ರೀಭಾರತೀಪತಿಗಳಾದ ವಾಯುದೇವರು - ಅವರ ಅಂತರಂಗದಲ್ಲಿ ಇರುವ ಶ್ರೀಹರಿಗೆ ಅಬಿಷೇಕ ಎಂದು ಚಿಂತನೆ ಮಾಡಬೇಕು. ನಾನು ಶುದ್ಧನಾದೆ ಎಂದು ಮನಸಾ ಚಿಂತಿಸಿಕೊಳ್ಳಬೇಕು. ಅನಂತರ ಬೆನ್ನನ್ನು ಒರೆಸಿಕೊಂಡು ಆಮೇಲೆ ಮುಖ, ತಲೆ, ಕೈಗಳನ್ನು ಒರೆಸಿಕೊಳ್ಳಬೇಕು. ಒರೆಸಿದ ನಂತರ ಯಜ್ಞೋಪವೀತವನ್ನು ಬಲಕಿವಿಗೆ ಹಾಕಿ ಒರಸಿದ ಬಟ್ಟೆಯನ್ನು ಸುತ್ತಿಕೊಂಡು ಉಟ್ಟಿದ್ದ ಪಂಚೆಯನ್ನು ಮೇಲಗಡೆಯಿಂದ ತೆಗೆಯಬೇಕು, ಹಾಗೆಯೇ ಕೆಳಗಡೆ ಬಿಡಬಾರದು. ಜುಟ್ಟಿನ ಕೊನೆಯನ್ನು ಗಂಟುಹಾಕಬೇಕು. ನಂತರ ಒಂದು ತೊಂಬಿಗೆಯ ನೀರನ್ನು ಕೈಯಲ್ಲಿ ಹಿಡಿದುಕೊಂಡು ಒದ್ದೆ ಬಟ್ಟೆಯನ್ನು ಎಡಗೈ ಮೇಲೆ ಹಾಕಿಕೊಂಡು ದೇವರ ಮನೆಗೆ ಪ್ರವೇಶ ಮಾಡಬೇಕು. ಮನೆಯ ಹೊರಗಡೆ ಸ್ನಾನ ಮಾಡಿದ್ದರೆ ಮನೆಗೆ ಪ್ರವೇಶ ಮಾಡುವಾಗ ಕಾಲು ತೊಳೆದುಕೊಳ್ಳಬೇಕು. ಆಗ ಶ್ರೀಮದಾಚಾರ್ಯರು ಸ್ನಾನ ಮಾಡಿಕೊಂಡು ಕಾಲು ತೊಳೆದು ಒಳಗೆ ಹೋದರು ಎಂಬುದ ಸ್ಮರಿಸಿಕೊಳ್ಳಬೇಕು. ಇದರಿಂದ ಸಂಸಾರ ಬಿಡುಗಡೆ ಹಾಗೂ ಮೋಕ್ಷ ಪ್ರಾಪ್ತಿಗೆ ಕಾರಣವಾಗುತ್ತದೆ. 'ಗಮನಾಸನಸಂಕಥಾಧಿಲಿಲಾಃಸ್ಮೃತಿಮಾತ್ರೇಣಭವಪವರ್ಗದಾತ್ರೀ (ಪ್ರಮಾಣ)'.

ಗಳುವಿನ ಮೇಲೆ ಒಣಗಿಹಾಕಿದ ಮಡಿಪಂಚೆ ಎಳೆದುಕೊಳ್ಳಲು ಮಡಿಕೋಲು ಹಿಡಿಯಬೇಕು. ಆಗ ಶ್ರೀಮದಾಚಾರ್ಯರು ದಂಡಪಾಣಿಗಳಾಗಿ ಪರಮತ ಖಂಡನ ಮಾಡಿ, ಸ್ವಮತ ಸ್ಥಾಪನೆ ಮಾಡಿದರು ಎಂದು ಸ್ಮರಿಸಿಕೊಳ್ಳಬೇಕು. 'ಬಟ್ಟೆ ಎಳೆದುಕೊಳ್ಳುವಾಗ ದ್ರೌಪದಿ ಅಭಿಮಾನ ರಕ್ಷಕ' ಎಂದು ಸ್ಮರಿಸುವುದು. ಬಟ್ಟೆಯನ್ನು ಉಡುವಾಗ 'ಬೆಳ್ಳುಡಿಗೆ ಉಡುವಲ್ಲಿ ಯಶೋದೆನಂದನಗೆನ್ನಿ' (ದಾಸವಾಣಿ). ಎಂದು ಹೇಳಿ ನಮ್ಮ ಅಂತರ್ಯಾಮಿಯಾದ ತತ್ವೇಶ ದೇವತೆಗಳು, ಅವರ ಅಂತರ್ಗತ, ಭಾರತೀಪತಿ ಮುಖ್ಯಪ್ರಾಣದೇವರಂತರ್ಗತ ಶ್ರೀಗೋಪಾಲಕೃಷ್ಣನಿಗೆ ಸಮರ್ಪಣೆ ಮಾಡಿ ಸಂತೋಷ ಪಡಬೇಕು. ಇದೇ ಸಾಧನ ಮಾರ್ಗ. ಅನುಭವ ಹೊಂದುವ ಕ್ರಮ. ನಾಳೆಗೆ ಮಡಿಗೆ ಹಾಕುವ ಒದ್ದೆ ಬಟ್ಟೆಗಳಿಗೆ ಮಡಿ ನೀರುಹಾಕಿ ಮಡಿಮಾಡಬೇಕು. ಹಿಂದೆ ಹೇಳಿದಂತೆ ಒದ್ದೆ ಬಟ್ಟೆ, ಮಡಿ ನೀರು, ನಮ್ಮ ಶರೀರ, ಎಲ್ಲಾ ಜಡಪಾದಾರ್ಥಗಳು, ಯಾವುದನ್ನು ಯಾವುದು ಮಡಿಮಾಡಬಲ್ಲದು ಎಂದರೆ ಅವುಗಳೊಗೆ ಇರುವ ಜಲಧಿಮಂದಿರನ ಶುಭನಾಮದ ಸ್ಮರಣೆಯಿಂದ ಮಡಿಯಾಯಿತು ಎಂದು ತಿಳಿಯಬೇಕು. ಶ್ರೀಪಾದರಾಜರು ಶಂಖತೀರ್ಥ ಪ್ರೋಕ್ಷಣೆಯಿಂದ ಕಪ್ಪಾಗಿದ್ದ ಗೇರಣ್ಣೆ ಬಟ್ಟೆಯನ್ನು ಶುದ್ಧವಾದ ಬಿಳಿಯ ವಸ್ತ್ರವನ್ನಾಗಿ ಮಾಡಿದರು ಎಂದು ಸ್ಮರಸಿದರೆ ಅವರ ಸ್ಮರಣೆ ಮಹಿಮೆಯಿಂದ ಈ ಬಟ್ಟೆ ಮಡಿಯಾಯಿತು ಎಂದು ಚಿಂತಿಸಬೇಕು. ಬಟ್ಟೆಯನ್ನು ಹಿಂಡುವಾಗ ಮಧುಕೈಟಭ ಎಂಬ ದೈತ್ಯರನ್ನು ಶ್ರೀಹರಿಯು ಹಿಂಡಿ ಸಂಹಾರ ಮಾಡಿದನು ಎಂದು ಚಿಂತನೆ ಮಾಡಬೇಕು. ಬಟ್ಟೆ ಒಣಗಿ ಹಾಕುವಾಗ ಕೋಲಿನ ಮೇಲೆ ಸಿಕ್ಕಿಸಿಕೊಂಡು ಗಳುವಿನ ಮೇಲೆ ಹಾಕುವಾಗ ಗೋಪಿವಸ್ತ್ರಾಪಹಾರಕನಾದ ಶ್ರೀಕೃಷ್ಣನನ್ನು ಸ್ಮರಿಸಬೇಕು. ಹರಿಸ್ಮರಣೆಯ ಮಹಿಮೆಯಿಂದ ಎಲ್ಲವೂ ಪವಿತ್ರವಾಗುತ್ತದೆ. ಹೀಗೆ ಕೂತಲ್ಲಿ, ನಿಂತಲ್ಲಿ, ಹೋದಲ್ಲಿ, ಬಂದಲ್ಲಿ ಯಾವುದೇ

ಸಂದರ್ಭದಲ್ಲಿಯಾದರೂ ಆ ಸಂದರ್ಭಕ್ಕೆ ಹೊಂದುವ ಹರಿಯ ಲೀಲೆಗಳನ್ನು ಹರಿಭಕ್ತರ ಲೀಲೆಗಳನ್ನು ಸ್ಮರಿಸಿಕೊಳ್ಳುವುದೇ ಕಲಿಯುಗದಲ್ಲಿ ಸಾಧನಮಾರ್ಗ. ಇದೇ ಆಗಬೇಕಾದ ಕೆಲಸ ಈ ಅಭಿಪ್ರಾಯದಿಂದ ಶ್ರೀಪುರಂದರದಾಸರು 'ಕಲಿಯುಗದಲಿ ಹರಿನಾಮವ ನೆನೆದರೆ ಕುಲಕೋಟಿಗಳು ಉದ್ಧರಿಸುವವು' ಎಂದು ನುಡಿದಿದ್ದಾರೆ.

## ನದಿಯ ಸ್ನಾನ

ನದಿಯಲ್ಲಿ ಮುಳುಗಿ ಹಾಕಿ ಸ್ನಾನ ಮಾಡುವುದಕ್ಕೆ 'ಅವಗಾಹನ ಸ್ನಾನ'ವೆಂದು ಹೆಸರು ಇದು ಬಹಳ ಉತ್ತಮ. ನದಿ ನೀರು ಯಾವ ಕಡೆಯಿಂದ ಬರುತ್ತದೋ ಅದರ ಕಡೆಗೆ ತಿರುಗಿಕೊಂಡು ಸ್ನಾನ ಮಾಡಬೇಕು. ಹಿಂದೆ ಹೇಳಿದಂತೆ ಆಚಮನ, ಸಂಕಲ್ಪ, ಅರ್ಘ್ಯಪ್ರಧಾನ, ಸ್ನಾನದ ಅನುಸಂಧಾನ ಮಾಡುವುದು. ನದಿಯಲ್ಲಿ ಸ್ನಾನ ಮಾಡುವಾಗ, ಲಂಗೋಟಿ, ಮಡಿಪಂಚೆ, ಭದ್ರವಾಗಿರಬೇಕು, ಇಲ್ಲದಿದ್ದರೆ ನದಿಯ ಪ್ರವಾಹದಿಂದ ಎರಡೂ ಸಹ ಅಪಹಾರವಾಗಿ ಭಗವಂತನ ಒಂಭತ್ತನೇ ಅವತಾರವನ್ನು (ಬೌದ್ಧಾವತಾರ) ಸ್ಮರಣೆ ಮಾಡಬೇಕಾಗುತ್ತದೆ. ಗಂಗಾನದಿಯ ಸ್ನಾನ ಮಾಡಿದರೂ ಸಹ, ಗಂಗಾನದಿಯ ನೀರೇ ಗಂಗಾ ಎಂದು ತಿಳಿದುಕೊಂಡು ಸ್ನಾನ ಮಾಡಿದರೆ ಪ್ರಯೋಜನವಿಲ್ಲ. ಹಿಂದೆ ಹೇಳಿದ ಅನುಸಂಧಾನದಿಂದ ಸ್ನಾನ ಮಾಡಬೇಕು. ಇಲ್ಲದಿದ್ದರೆ ಅಲ್ಲೇ ಯಾವಾಗಲೂ ಇರುವ ಕಪ್ಪೆ, ಮೀನು, ಮೊಸಳೆ, ಮುಂತಾದವಕ್ಕೂ ನಮಗೂ ಏನು ವ್ಯತ್ಯಾಸವಿಲ್ಲದಂತಾಗುತ್ತದೆ. ಗಂಗಾ ನೀರು ಜಡ, ಅದರ ಅಭಿಮಾನಿ ದೇವತೆ ವರುಣ ಭಾಗೀರಥಿಯರನ್ನು ಅವರಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವಾಸುದೇವನನ್ನು ಸ್ಮರಿಸಿ ಸ್ನಾನ ಮಾಡಿದರೆ ಗಂಗಾ ಸ್ನಾನ ಫಲ. ಪಾಪನಾಶನ, ಪುಣ್ಯಫಲಪ್ರದ ಹೀಗೆ ಎಲ್ಲೇ ಸ್ನಾನ ಮಾಡಿದರೂ ಸಹ ಅಲ್ಲಿ ಸ್ಮರಣೆಯಿಂದ ಅದೇ ಫಲ ಬರುತ್ತದೆ.

## ಸಮುದ್ರ ಸ್ನಾನ

ಸಮುದ್ರ ಸ್ನಾನ ನೇರವಾಗಿ ಹೋಗಿ ಮಾಡುವಂತಿಲ್ಲ, ಕೆಲವು ವಿಹಿತ ದಿನಗಳಲ್ಲಿ ಮಾತ್ರ, ಸ್ನಾನ ಮಾಡಬೇಕು. ಮೊದಲು ಒಂದು ಕೊಳದಲ್ಲಿ ಸ್ನಾನ ಮಾಡಿ ಆಮೇಲೆ ಹಾಗೆಯೇ ಹೋಗಿ ಸಮುದ್ರ ಸ್ನಾನ ಮಾಡಬೇಕು. ಸೊಂಟದವರೆಗೆ ಮಾತ್ರ ಸಮುದ್ರದಲ್ಲಿ ಪ್ರವೇಶ ಮಾಡಿ ಮುಂದಕ್ಕೆ ಹೋಗಬೇಡಿ. ಅಲೆ ಬಂದಾಗ ತಲೆ ಬಗ್ಗಿಸಬೇಕು ಇಲ್ಲದಿದ್ದರೆ ನಿಮ್ಮನ್ನು ಉರುಳಿಸಿ ಒಳಕ್ಕೆ ಎಳೆದುಕೊಂಡು ಹೋಗುತ್ತದೆ. ಉಟ್ಟ ಬಟ್ಟೆ ಭದ್ರವಾಗಿರಬೇಕು. ಇಲ್ಲದಿದ್ದರೆ ವಸ್ತ್ರಾಪಹಾರವಾಗಬಹುದು. ಕಣ್ಣು, ಬಾಯಿ, ಕಿವಿ, ಮೂಗು ಎಲ್ಲವನ್ನು ಮುಚ್ಚಿಕೊಂಡು ಮುಳುಗಬೇಕು. ಇಲ್ಲದಿದ್ದರೆ ಸಮುದ್ರದ ನೀರು ಒಳಗೆ ನುಗ್ಗಿ ತೊಂದರೆಯಾಗುತ್ತದೆ. ಸಮುದ್ರ ಸ್ನಾನ ಮಾಡಿದ ಮೇಲೆ ಮೈಯೆಲ್ಲಾ ಉಪ್ಪಿನ ಅಂಟು ಇರುತ್ತದೆ. ಆದರೂ ಪುನಃ ಸ್ನಾನ ಮಾಡಬಾರದು. ಸಮುದ್ರ ಸ್ನಾನ ಮಾಡುವಾಗ ಕ್ಷೀರಸಮುದ್ರಶಾಯಿಯಾದ ಶ್ರೀಮೂಲರೂಪಿ ಪದ್ಮನಾಭದೇವರನ್ನು ಸ್ಮರಿಸಿ ಸ್ನಾನದ ಫಲವನ್ನು ಅವರಿಗೆ ಅರ್ಪಿಸಬೇಕು. ಶ್ರೀಮದಾಚಾರ್ಯರು ಸಮುದ್ರ ಸ್ನಾನ ಮಾಡಿದ ಪ್ರಸಂಗವನ್ನು ಸ್ಮರಿಸಿಕೊಳ್ಳಬೇಕು.

## ಕಚ್ಚೆ ಪಂಚೆ

ಕಚ್ಚೆ ಪಂಚೆ ಎಂದರೆ ಐದು ನೆರಗೆಗಳಿಂದ ಕೂಡಿದ ಪಂಚೆ ಎಂದು ಅರ್ಥ. ಸಮಾನ ಗೋತ್ರಕ್ಕೆ (ಗುಂಪಿಗೆ) ಸೇರಿದ ಕಾಚ, ಅದರಣ್ಣ, ತೆಳುವಾದ ಅಂಡರ್‌ವೇರ್ ನಿಕ್ಕರ್, ಅದರ ಸೋದರಮಾವ ಪೈಜಾಮ, ಅದರ ಪಿತ (ಅಪ್ಪ) ದಪ್ಪ ಚೆಡ್ಡಿ, ಪಿತಾಮಹ (ತಾತ) ಪ್ಯಾಂಟ್ ಇವೆಲ್ಲ ಕವಚ ಎನಿಸಿಕೊಳ್ಳುತ್ತದೆ. ಇದನ್ನು ಧರಿಸಿದ ವ್ಯಕ್ತಿಯನ್ನು ವೀಕ್ಷಿಸಿ ನೋಡಿದಾಗ ಮುಂಭಾಗದಲ್ಲಿ

ಗುಹ್ಯೇಂದ್ರಿಯದ ಸೂಕ್ಷ್ಮ ಪರಿಚಯ ಪ್ರದರ್ಶನ, ಹಿಂಭಾಗದಲ್ಲಿ ಪೃಷ್ಠದ ಸೂಕ್ಷ್ಮಭಾಗದ ಪರಿಚಯ ಪ್ರದರ್ಶನವಾಗುತ್ತದೆ. ಇದು ಮ್ಲೇಂಛ ಸಂಪ್ರದಾಯ, ಸನಾತನ ಸಂಪ್ರದಾಯವಲ್ಲ, ಈ ದೋಷ ನಿವಾರಣ ಮಾಡುವುದೇ ಕಚ್ಚೆಯ ಮಹಿಮೆ. ಮುಂಭಾಗ ಕಚ್ಚೆ ಮತ್ತು ಹಿಂಭಾಗದ ಕಚ್ಚೆಗಳು ಈ ದೋಷಗಳನ್ನು ಆಚ್ಛಾದನ ಮಾಡಿ ವ್ಯಕ್ತಿಯ ಮಾನ ಕಾಪಾಡಿ ಗೌರವ ಮತ್ತು ಒಂದು ಅಂದವನ್ನು ಕೊಡುತ್ತದೆ. ಕಚ್ಚೆ ಪಂಚೆ ಉಡುವುದು ಸನಾತನ ಸಂಪ್ರದಾಯ, ಕವಚ ಧರಿಸುವುದನ್ನು ಇಲ್ಲಿ ನಿಷೇಧ ಮಾಡಿರುತ್ತಾರೆ.

ಉಡುವ ಪಂಚೆಗೆ ಧೋತ್ರವೆಂದು, ಹೊದೆಯುವ ಪಂಚೆಗೆ ಉತ್ತರೀಯವೆಂದು ಹೆಸರು. ಪಂಚೆಯ ಉದ್ದ ೮ ಮೊಳ, ೮½ ಮೊಳ, ೯ ಮೊಳವಿರುತ್ತದೆ. ಮುಂಭಾಗದ ಕಚ್ಚೆಯಲ್ಲಿ ದೇವತೆಗಳ ಸನ್ನಿಧಾನವಿರುತ್ತದೆ. ಹಿಂಭಾಗದ ಕಚ್ಚೆಯಲ್ಲಿ ದೈತ್ಯರ ಸನ್ನಿಧಾನವಿರುತ್ತದೆ. ಆದುದರಿಂದ ಪಂಚೆ ಹೊಸದಾಗಿ ಉಟ್ಟ ಮೇಲೆ ಅದು ಹರಿಯುವ ತನಕ ಮುಂಭಾಗದ ಕಚ್ಚೆ ಹಿಂದಕ್ಕೆ ಹೋಗಬಾರದು. ಅಂಚು ಸರಗು ಸೇರುವ ಮೂಲೆಯಲ್ಲಿ ಒಂದು ಗಂಟನ್ನು ಹಾಕಿಬಿಡಿ. ಇದು ಗುರುತಿಗೆ ಅನುಕೂಲ. ಮುಂಭಾಗದ ಕಚ್ಚೆ, ಬಲಭಾಗದ ಕಾಲಿನ ಮೇಲೆ ಬರಬೇಕು. ಹಿಂಭಾಗದ ಕಚ್ಚೆ ಎಡಗಾಲಿನ ಕಡೆಗೆ ಹೋಗಬೇಕು. ಕೆಲವರು ಮುಂಭಾಗದ ಕಚ್ಚೆಯನ್ನು ಎಡಗಾಲಿನ ಮೇಲೆಯೂ, ಹಿಂಭಾಗದ ಕಚ್ಚೆಯನ್ನು ಬಲಗಾಲಿನ ಮೇಲೆಯೂ ಉಟ್ಟಿಕೊಳ್ಳುತ್ತಾರೆ. ಇದು ಸರಿಯಲ್ಲ ತಪ್ಪು. ಇದನ್ನು ತಿಳಿದವರು ಗೊತ್ತಿದ್ದರೂ ಸಹ ಹೇಳುವುದಿಲ್ಲ, ಸರಿಯಲ್ಲ ತಪ್ಪು ತಿದ್ದಿಕೊಳ್ಳಿ ಎಂದು ಹೇಳುವುದಿಲ್ಲ ಇದಕ್ಕೆ ಕಾರಣಗೊತ್ತಿಲ್ಲ. ಅದಕ್ಕೆ ಈ ವಿಚಾರವನ್ನು ಇಲ್ಲಿ ಬರೆಯಬೇಕಾಯಿತು.

## ಕಚ್ಚೆಪಂಚೆ ಉಟ್ಟುಕೊಳ್ಳುವ ಕ್ರಮ

ಗಂಟನ್ನು ಬಲಗೈಯಲ್ಲಿ ಹಿಡಿದುಕೊಂಡು, ಅಂಚಿನ ಕಡೆಯಿಂದ ಕೇಶವ, ನಾರಾಯಣ ಎಂದು ಶ್ರೀಕೃಷ್ಣನ ಪರ್ಯಂತ ಹೆಸರು ಹೇಳಿಕೊಳ್ಳುತ್ತಾ ೨೪ ನೆರಗೆ ಹಿಡಿದು ಅದನ್ನು ಬಲಗೈಯಲ್ಲಿ ಹಿಡಿದುಕೊಂಡು ಉಳಿದ ಭಾಗವನ್ನು ಬೆನ್ನಿನ ಕಡೆಯಿಂದ ಸುತ್ತಿಕೊಂಡು, ಬಲಭಾಗಕ್ಕೆ ತೆಗೆದುಕೊಂಡು ಬಂದು, ಎಡಭಾಗಕ್ಕೆ ಒಂದೂವರೆ ಮೊಳದ ಉದ್ದ ಬಟ್ಟೆಯನ್ನು ಬಿಟ್ಟು ಬಲಭಾಗದ ಸೊಂಟದ ಹತ್ತಿರ ಒಂದು ಗಂಟನ್ನು ಹಾಕಿ ಬಿಗಿ ಮಾಡಿಕೊಳ್ಳಬೇಕು. ಅನಂತರ ಬಲಗೈಯಲ್ಲಿದ್ದ ನೆರಗೆಯನ್ನು ಮುಂಭಾಗದಲ್ಲಿ ಸೆಕ್ಕಿಸಿಕೊಳ್ಳಬೇಕು. ಆಮೇಲೆ ಮುಂಭಾಗದ ನೆರಗೆಯ ಕೆಳಭಾಗದಿಂದ ಅಂಚಿನ ಭಾಗವನ್ನು ಹಿಡಿದುಕೊಂಡು ಸೆರಗಿನ ಭಾಗದಲ್ಲಿ ಅನಿರುದ್ಧ, ಪ್ರಧ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ಎಂದು ೫ ನೆರಗೆಗಳನ್ನು ಮಾಡಿ ಮುಂಭಾಗಕ್ಕೆ ಸಿಕ್ಕಿಸಿಕೊಳ್ಳಬೇಕು. ಎಡಗಡೆ ಉಳಿಸಿದ ಒಂದೂವರೆ ಮೊಳದ ಭಾಗವನ್ನು ಕಾಲನ್ನು ಎತ್ತದೆ ಎರಡು ತೊಡೆಗಳ ಸಂದಿಯಿಂದ ಹಿಂದಕ್ಕೆ ತೆಗೆದುಕೊಂಡು ಅಲ್ಲಿ ನೆರಗೆಯನ್ನು ಮಾಡಿ ಬೆನ್ನಿನ ಕಡೆ ಸೆಕ್ಕಿಸಿಕೊಳ್ಳಬೇಕು. ಕಾಲಿನ ಹತ್ತಿರವಿರುವ ಅಂಚಿನ ಭಾಗ ಎಳೆದುಕೊಳ್ಳುವುದರಿಂದ ಎಡಭಾಗ, ಬಲಭಾಗ ಸರಿಮಾಡಿಕೊಳ್ಳಬಹುದು. ಹಿಂದೆ ಮುಂದೆ ಕಚ್ಚೆ ನೇತಾಡುವಂತೆ ಮಾಡಿಕೊಳ್ಳಬಾರದು. ಅದಕ್ಕೆ ಪುಚ್ಛ ಕಚ್ಛ ಎಂದು ಹೆಸರು. ಗೊತ್ತಿಲ್ಲದವರು ಇದನ್ನು ತಿಳಿದುಕೊಂಡು ಸರಿಪಡಿಸಿಕೊಂಡರೆ ನಮ್ಮ ಶ್ರಮ ಸಾರ್ಥಕವಾಗುತ್ತದೆ.

## ಗಂಟನ್ನು ಏಕೆ ಹಾಕಿಕೊಳ್ಳಬೇಕು

ಗಂಟು ಭದ್ರವಾಗಿದ್ದರೆ ಎಲ್ಲಾ ಉಳಿದಿರುತ್ತದೆ. ಇಲ್ಲದಿದ್ದರೆ ಎಲ್ಲಾ ಸಡಿಲವಾಗಿ ಪತನವಾಗುತ್ತದೆ. ಹೊಟ್ಟೆ ದಪ್ಪವಿರುವವರಿಗೆ ಮತ್ತು ವಯಸ್ಸಾದವರಿಗೆ ಪಂಚೆಗಳು, ಕಚ್ಚೆಗಳು ಸಡಿಲವಾಗಿ ಬಿಚ್ಚಿಹೋಗಿ ಕೊನೆಗೆ ವಸ್ತ್ರವೇ ವಿಸರ್ಜನೆಯಾಗುವ ಪ್ರಸಂಗವೂ ಬರಬಹುದು. ಇದನ್ನು ತಪ್ಪಿಸುವುದೇ ಗಂಟಿನ ಮಹಿಮೆ. ಗಂಟು ಭದ್ರವಾಗಿದ್ದರೆ ಆಸಾಮಿ ತಲೆಕೆಳಗಾದರೂ ಪಂಚೆ ಮಾತ್ರ ಬಿಚ್ಚುಕೊಳ್ಳುವುದಿಲ್ಲ.

ಯಾವ ದುಶ್ಶಾಸನರೂ ವಸ್ತ್ರಾಪಹರಣ ಮಾಡಲಾರರು. ಕೆಳಗೆ ಕೊಟ್ಟಿರುವ ಚಿತ್ರ ಗಮನಸಿ ನೋಡಿ ತಪ್ಪಿದ್ದರೆ ತಿದ್ದಿಕೊಳ್ಳಿ.

ಪುಚ್ಛ ಕಚ್ಚೆಯಲ್ಲಿ ಹಿಂದುಗಡೆ 'X' - ಈ ಗುರುತಿರುವ ಜಾಗದಲ್ಲಿ ಒಂದು ಬೆಕ್ಕು ತೂರಿಕೊಂಡು ಹೋಗುವಷ್ಟು ಜಾಗವಿರುತ್ತದೆ. ಇದಕ್ಕೆ ಕಾರಣ ಹಿಂದುಗಡೆಗೇ ಹೆಚ್ಚು ಬಟ್ಟೆ ಬಿಡುವುದು ಮತ್ತು ಕಾಲುಸಂಧಿಯಲ್ಲಿ ಸರಿಯಾಗಿ ತೂರಿಸದೆ ತಲೆಕೆಳಕಾಗಿ ಮಾಡಿಕೊಳ್ಳುವುದು. ಇದನ್ನೆಲ್ಲಾ ತಿದ್ದಿಕೊಂಡರೆ ಸರಿಹೋಗುತ್ತದೆ.




**ಕಚ್ಚೆಪಂಚೆ ಉಡುವುದರಲ್ಲಿ ತಪ್ಪು - ಸರಿ ತೋರಿಸುವ ಚಿತ್ರ**

ತಪ್ಪನ್ನು ತಿದ್ದಿಕೊಂಡು ಸರಿಯಾದ್ದನ್ನು ಅಭ್ಯಾಸ ಮಾಡಿ.



| ಮುಂಭಾಗದ ಕಚ್ಚೆಗಳು | | | ಹಿಂಭಾಗದ ಕಚ್ಚೆಗಳು | | | |
|---|---|---|---|---|---|---|
| ಮುಂಭಾಗ | ಮುಂಭಾಗ | ಮುಂಭಾಗ | ಹಿಂಭಾಗ | ಪಕ್ಕ | ಪಕ್ಕ | ಪಕ್ಕ |
| ಎಡಕಚ್ಚೆ | ಲಂಬಕಚ್ಚೆ | ಬಲಕಚ್ಚೆ | ಸರಿಕಚ್ಚೆ | ಪುಚ್ಛಕಚ್ಚೆ | ತೂರುಕಚ್ಚೆ | ಸರಿಕಚ್ಚೆ |
| ತಪ್ಪು | ತಪ್ಪು | ಸರಿ | ಸರಿ | ತಪ್ಪು | ತಪ್ಪು* | ಸರಿ |

## ಚುಟುಕೇಶ್ವರ

ಕರ್ಮಾಚರಣೆಗೆ ಪ್ರಾರಂಭದ ಪಂಚೆ ಉಡುವುದೇ ಸರಿಯಾಗಿಲ್ಲದಿದ್ದ ಮೇಲೆ ಮುಂದಿನ ಕರ್ಮ ಎಷ್ಟು ಚೆನ್ನಾಗಿ ಆದೀತು? ಆದ್ದರಿಂದ ಪಂಚೆ ಉಡುವುದನ್ನು ಸರಿಯಾಗಿ ತಿಳಿದುಕೊಳ್ಳಿ.

# ಊಟ ಮಾಡುವವರು ಯಾರು?

ಜೀವದ ಪ್ರಮಾಣ ಎಷ್ಟು ಇದೆ ಎಂಬುದನ್ನು ಮುಂಚೆ ತಿಳಿದುಕೊಳ್ಳಬೇಕು. ಕುದುರೆಬಾಲದ ಒಂದು ಕೂದಲಿನ ಕೊನೆಯನ್ನು ನೂರು ಸಮಭಾಗವಾಗಿ ಸೀಳಿ, ಆ ನೂರನೇ ಒಂದು ಭಾಗದ ಕೂದಲನ್ನು ಪುನಃ ನೂರು ಸಮಭಾಗ ಮಾಡಿದರೆ, ಆ ಕೂದಲು ಎಷ್ಟು ಗಾತ್ರವಿರುತ್ತದೋ ಅಷ್ಟೇ ಜೀವದ ಗಾತ್ರ. ಆದುದರಿಂದ ಅತ್ಯಂತ ಸೂಕ್ಷ್ಮವಾದ ರೂಪದಲ್ಲಿ ಜೀವ ಎಂಬ ಚೇತನ ಇದೆ. ಇದು ಜಡದಿಂದ ಮತ್ತು ಪರಮಚೇತನನಾದ ಹರಿಯಿಂದ ಭಿನ್ನವಾದುದು. ಇಂತಹ ಜೀವದಲ್ಲಿ ಪರಮಾತ್ಮನು ಅಂತರ್ಯಾಮಿಯಾಗಿ ಅಣೋರಣೀಯನೆಂದು ಪ್ರಸಿದ್ಧನಾಗಿ ವಾಸಿಸುತ್ತಾನೆ. ಪರಮಾತ್ಮನ ಪ್ರೇರಣೆ ಇಲ್ಲದೆ ಯಾವ ಕೆಲಸವನ್ನೂ ಜೀವನು ಸ್ವತಂತ್ರವಾಗಿ ಮಾಡಲಾರನು.

ಇಂತಹ ಜೀವರನ್ನು ಅತ್ಯಂತ ಸಣ್ಣ ಶರೀರಗಳಾದ ಕ್ರಿಮಿಕೀಟಾದಿಗಳಿಂದ ಹಿಡಿದು ಆನೆ, ತಿಮಿಂಗಲ ಮುಂತಾದ ದೊಡ್ಡ ದೊಡ್ಡ ಪ್ರಾಣಿಗಳ ಸ್ಥೂಲದೇಹಗಳಲ್ಲಿ ಹಾಕಿ ಅವುಗಳಿಂದ ಕಾರ್ಯ ಮಾಡಿಸುತ್ತಾನೆ. ಇರುವೆಗೆ ಒಂದು ಅಕ್ಕಿ ಕಾಳು ಆಹಾರ ಸಾಕು. ಆನೆಗೆ ಹತ್ತು ಮಣ ಆಹಾರ ಬೇಕು. ಇಂತಹ ಎಂಭತ್ತನಾಲ್ಕು ಲಕ್ಷ ಸ್ಥೂಲದೇಹಗಳನ್ನು ಮಾಡಿ ಒಂದೊಂದು ದೇಹದ ಜಾತಿಗಳಲ್ಲೂ ಅನೇಕ ಸಂಖ್ಯೆಯ ಪ್ರಾಣಿಗಳನ್ನು ಸೃಷ್ಟಿ ಮಾಡಿದ್ದಾನೆ. ಒಂದೊಂದು ಪ್ರಾಣಿಗೆ ಒಂದೊಂದು ತರಹದ ರುಚಿಗಳುಳ್ಳ ಆಹಾರಗಳನ್ನು ಸೃಷ್ಟಿ ಮಾಡಿದ್ದಾನೆ. ಕೆಲವು ಪ್ರಾಣಿಗಳಿಗೆ ಮಾಂಸಾಹಾರವನ್ನೂ, ಕೆಲವು ಪ್ರಾಣಿಗಳಿಗೆ ಸಸ್ಯಾಹಾರವನ್ನೂ ದೇವರು ವ್ಯವಸ್ಥೆ ಮಾಡಿದ್ದಾನೆ. ಇಲಿಗೆ ಧಾನ್ಯಗಳು ಆಹಾರವಾದರೆ, ಅಂತಹ ಇಲಿಯನ್ನು ಬೆಕ್ಕಿಗೆ ಆಹಾರವನ್ನಾಗಿ ಮಾಡಿದ್ದಾನೆ. ಕುರಿ, ಮೇಕೆ, ಜಿಂಕೆ ಇತ್ಯಾದಿ ಪ್ರಾಣಿಗಳನ್ನು ಹುಲಿಯೇ ಮೊದಲಾದ ಪ್ರಾಣಿಗಳಿಗೆ ಆಹಾರ ಮಾಡಿದ್ದಾನೆ. ಹಸು ಮುಂತಾದ ಪವಿತ್ರವಾದ ಪ್ರಾಣಿಗಳಿಗೆ ಹುಲ್ಲನ್ನೇ ಆಹಾರ ಮಾಡಿದ್ದಾನೆ.

ಇದು ಪ್ರಾಣಿಗಳ ವಿಚಾರವಾಯಿತು. ಮನುಷ್ಯರಲ್ಲಿ ಸಹ ಕೆಲವರಿಗೆ ಸಿಹಿ, ಕೆಲವರಿಗೆ ಖಾರ, ಕೆಲವರಿಗೆ ಗಟ್ಟಿ ಪದಾರ್ಥಗಳು, ಕೆಲವರಿಗೆ ಮೆತ್ತಗಿರುವ ಪದಾರ್ಥಗಳು, ಕೆಲವರಿಗೆ ಅತಿ ಬಿಸಿಯಾದ ಪದಾರ್ಥಗಳು, ಕೆಲವರಿಗೆ ಹಳಸಿದ ಹಾಗೂ ತಂಗಳಾದ ಪದಾರ್ಥಗಳು, ಕೆಲವರಿಗೆ ನಿಷಿದ್ಧವಾದ ಈರುಳ್ಳಿ, ಬದನೇಕಾಯಿ ಮುಂತಾದ ಪದಾರ್ಥಗಳು ಹಿತವಾಗುತ್ತವೆ. ಹಾಗೆಯೇ ತಿನ್ನತಕ್ಕ ಆಹಾರದ ಪರಿಮಾಣವೂ ಸಹ ವ್ಯತ್ಯಾಸವಾಗುತ್ತದೆ.

ಬ್ರಹ್ಮದೇವರಿಂದ ಹಿಡಿದು ಹುಲ್ಲಿನ ಪರ್ಯಂತವಾಗಿ ಜೀವರುಗಳ ಸ್ವರೂಪದೇಹಗಳು ಪೂರ್ವೋಕ್ತದಂತೆ ಒಂದೇ ಸಮವಾದ ಗಾತ್ರವುಳ್ಳವುಗಳಾಗಿವೆ. ಆದರೆ ತಾರತಮ್ಯದಂತೆ ಶಕ್ತಿ, ರುಚಿ ಮುಂತಾದವುಗಳು ವ್ಯತ್ಯಾಸವಾಗುತ್ತದೆ. ದೇಹದ ಗಾತ್ರ (ಸ್ಥೂಲದೇಹ) ಹೆಚ್ಚು ಕಡಿಮೆಯಾದಂತೆ ಹೊಟ್ಟೆಯೂ ಹೆಚ್ಚು ಕಡಿಮೆಯಾಗಿ ಆಹಾರ ಸ್ವೀಕಾರದ ಪರಿಮಾಣವೂ ವ್ಯತ್ಯಾಸವಾಗುತ್ತದೆ. ಅದರಂತೆಯೇ ಸಾತ್ವಿಕ, ರಾಜಸ, ತಾಮಸ ಜೀವರುಗಳು ಅವರವರ ಸ್ವಭಾವಕ್ಕೆ ತಕ್ಕಂತೆ ರುಚಿಯಾದ ಆಹಾರವನ್ನು ಇಷ್ಟಪಟ್ಟು ಸ್ವೀಕರಿಸುತ್ತಾರೆ. ಶ್ರೀಹರಿಯು ಪ್ರತಿಪ್ರಾಣಿಯ ದೇಹದಲ್ಲಿದ್ದುಕೊಂಡು ಅದರ ಸ್ವಭಾವಕ್ಕೆ ತಕ್ಕಂತೆ ರುಚಿಗಳನ್ನು ಮತ್ತು ಆಹಾರ ಪರಿಮಾಣವನ್ನು ತಿನ್ನಿಸುತ್ತಾನೆ. ಇದರಿಂದ ಸ್ವಾಮಿಗೆ ಯಾವ ಲೇಪವೂ ಇಲ್ಲ.

## ಊಟದ ಒಟ್ಟು ತಾತ್ಪರ್ಯ

ಭೋಜನ ಮಾಡಿಸುವವರಲ್ಲಿ, ಭೋಜನ ಪದಾರ್ಥಗಳಲ್ಲಿ, ಭೋಜನ ಮಾಡುವವರಲ್ಲಿ ಸ್ವಾಮಿಯು ತದಭಿಮಾನಿಗಳಾದ ತತ್ತ್ವೇಶ ದೇವತೆಗಳು, ಮುಖ್ಯಪ್ರಾಣದೇವರು ಇವರುಗಳಲ್ಲಿ

ಇದ್ದುಕೊಂಡು, ಭೋಜನ ಮಾಡುವ ಜೀವನ ಸ್ವಭಾವಕ್ಕೆ ತಕ್ಕಂತಹ ರುಚಿ ಮತ್ತು ಪರಿಮಾಣದ ರೂಪದಲ್ಲಿ ಆಹಾರವನ್ನು ತಾನು ವೈಶ್ವಾನರ ಎಂಬ ಹೆಸರಿನಿಂದ ೭೨,೦೦೦ ನಾಡಿಗಳಲ್ಲಿ ಇದ್ದುಕೊಂಡು ಸ್ವಾಖ್ಯರಸವನ್ನು ಸ್ವೀಕರಿಸಿ, ಲಕ್ಷ್ಮೀ, ಮುಖ್ಯಪ್ರಾಣ, ಭಾರತಿ ಮತ್ತು ತತ್ವೇಶ ದೇವತೆಗಳು ಇವರುಗಳಿಗೆ ಅವರಿವರಿಗೆ ಉಚಿತವಾದ ರಸಗಳನ್ನು ಕೊಟ್ಟು, ಜೀವನಿಗೆ ಉಚಿತವಾದ ರಸವನ್ನು ಕೊಟ್ಟು ತನ್ಮೂಲಕ ತೃಪ್ತಿಯನ್ನು ಕೊಡುತ್ತಾನೆ. ಹೀಗೆಂದು ಅನುಸಂಧಾನ ಮಾಡಿಕೊಂಡು ಭೋಜನ ಮಾಡಿ ಶ್ರೀಹರಿಗೆ ಅರ್ಪಿಸಿ ಸಂತೋಷಪಟ್ಟು ಸುಖಪಡಬೇಕು.

**ಇನ್ನೊಂದು ಪ್ರಕಾರ -**

ದೇವರು ಸುಖಪೂರ್ಣ, ದುಃಖರಹಿತ. ಯಾವುದರಿಂದಲೂ ಲೇಪವನ್ನು ಹೊಂದದೆ ಅದರಿಂದ ಭಿನ್ನನಾಗಿದ್ದುಕೊಂಡು ಜೀವರಿಗೆ ಸುಖ ದುಃಖದ ಅನುಭವವನ್ನು ಕೊಡುತ್ತಾನೆ.

ಸುಖ ದುಃಖದ ಅನುಭವ ಹೊಂದುವುದು ಸೂಕ್ಷ್ಮರೂಪವಾದ ಜೀವ. ಅತ್ಯಂತ ಅಣುವಾದ ಜೀವಕ್ಕೆ ಒಂದು ಅನ್ನದ ಅಗಳು ಬೆಟ್ಟದಷ್ಟು ಗಾತ್ರ ದೊಡ್ಡದು. ಆ ಅಗಳು ಆ ಜೀವದ ಮೇಲೆ ಬಿದ್ದರೆ ಬೆಟ್ಟ ಬಿದ್ದಂತೆ ಆಗುತ್ತದೆ.

ಸ್ಥೂಲದೇಹವು ಜಡಭೂತವಾದುದು. ಜಡದ ಸ್ವಭಾವ ಸುಖ ದುಃಖಗಳನ್ನು ಅನುಭವಿಸದೆ ಇರುವುದು. ಅಣುರೂಪವಾದ ಜೀವ ಈ ಜಡವಾದ ಸ್ಥೂಲದೇಹದಲ್ಲಿ ಇರುವತನಕ ಸುಖದುಃಖಗಳ ಅನುಭವವನ್ನು ದೇಹಸಂಬಂಧ ಇರುವ ಕಾರಣದಿಂದ ಹೊಂದುತ್ತದೆ. ಈ ಜೀವರು ಈ ದೇಹದಿಂದ ಬಿಟ್ಟುಹೋದ ಮೇಲೆ ಆ ದೇಹದಲ್ಲಿ ಯಾವ ತರಹ ಸುಖದುಃಖಗಳ ಅನುಭವವು ಹಾಗೇ ಓಡಾಡುವುದು, ಮಾತಾಡುವುದು, ತಿನ್ನುವುದು ಮುಂತಾದ ಕಾರ್ಯಗಳು ಕಂಡುಬರುವುದಿಲ್ಲ.

ಮನುಷ್ಯ ಬದುಕಿರುವಾಗ ಒಂದು ಸೇರು ಅಕ್ಕಿ-ಅನ್ನ, ಇಪ್ಪತ್ತೈದು ಅಂಬೋಡೆ, ಎಂಟು ಹೋಳಿಗೆ, ಒಂದು ತಂಬಿಗೆ ನೀರು ಇತ್ಯಾದಿಯಾಗಿ, ಪರಮಾಣುರೂಪದ ಜೀವದ ಅನೇಕ ಪಟ್ಟು ಹೆಚ್ಚು ಪ್ರಮಾಣದ ಆಹಾರವನ್ನು ತಿನ್ನುತ್ತಾನೆ. ಆ ಜೀವವು ದೇಹ ಬಿಟ್ಟುಹೋದ ಮೇಲೆ ಆ ಮೃತದೇಹವು ಏನನ್ನೂ ಸ್ವೀಕರಿಸದು.

ಜೀವಕ್ಕೆ ಆಹಾರ ಪ್ರಮಾಣ ಜಾಸ್ತಿ, ಜಡಭೂತವಾದ ದೇಹವು ಭೋಜನಾದಿಗಳನ್ನು ಮಾಡುವುದಿಲ್ಲ. ಹಾಗಾದರೆ ಭೋಜನ ಮಾಡುವವರು ಯಾರು? ಎಂಬ ಸಮಸ್ಯೆ ಬರುತ್ತದೆ. ಈ ಸಮಸ್ಯೆಗೆ ಉತ್ತರವಾಗಿ ಶ್ರೀಮತ್ ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮನು ಈ ರೀತಿ ಅರ್ಜುನನಿಗೆ ಉಪದೇಶ ಮಾಡಿರುತ್ತಾನೆ.

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥**

ಎಂದರೆ ಅಹಂ ಶಬ್ಧದ ವಾಚ್ಯನಾದ ಶ್ರೀಭಗವಂತನು ಹೀಗೆ ಹೇಳುತ್ತಾನೆ -

'ನಾನು ವೈಶ್ವಾನರ ಎಂಬ ಹೆಸರಿನಿಂದ ಪ್ರಸಿದ್ಧನಾಗಿ ಸಕಲ ಪ್ರಾಣಿಗಳ ದೇಹದಲ್ಲಿ ಇದ್ದುಕೊಂಡು ಪ್ರಾಣ ಅಪಾನ ಇತ್ಯಾದಿಗಳಿಂದ ಕೂಡಿಕೊಂಡು ನಾಲಕ್ಕೂ ವಿಧವಾದ ಅನ್ನಗಳನ್ನೂ ಪಚನ ಮಾಡುತ್ತೇನೆ''

ಎಂದರೆ ಶ್ರೀಹರಿಯು ಮುಖ್ಯಪ್ರಾಣದೇವರಿಂದ ಸಹಿತವಾಗಿ ತತ್ತ್ವೇಶ ದೇವತೆಗಳ ಮೂಲಕ ಆ ದೇಹಾಂತರ್ಗತನಾದ ಜೀವನ ಸ್ವಭಾವ, ಕರ್ಮಶಕ್ತಿಗಳಿಗೆ ಅನುಸರಿಸಿ ಅದರದರ ಯೋಗ್ಯತೆಗೆ ತಕ್ಕಂತೆ

ರುಚಿ ಮತ್ತು ಆಹಾರ ಪರಿಮಾಣಗಳನ್ನು ತಿನ್ನಿಸಿ ತಾನು ಅದರಿಂದ ನಿರ್ಲಿಪ್ತನಾಗಿದ್ದುಕೊಂಡು ಊಟ ಮಾಡಿದರೆ ಏನು ತೃಪ್ತಿಯಾಗಬೇಕೋ ಆ ತೃಪ್ತಿಯ ಅನುಭವವನ್ನು ಆ ಜೀವಕ್ಕೆ ಕೊಟ್ಟು ತನ್ಮೂಲಕ ನನಗೆ ಹೊಟ್ಟೆ ತುಂಬಿತು, ಊಟ ಚೆನ್ನಾಗಿತ್ತು ಅಥವಾ ಊಟ ಚೆನ್ನಾಗಿಲ್ಲ ಎಂಬ ಅನುಭವವನ್ನು ಕೊಡುತ್ತಾನೆ ಮತ್ತು ಆಹಾರ ಪಚನಾದಿಗಳನ್ನು ಮಾಡಿ ದೇಹದ ರಕ್ಷಣೆ ಮಾಡುತ್ತಾನೆ.

ಒಟ್ಟು ತಾತ್ಪರ್ಯವೇನೆಂದರೆ ಊಟ ಮಾಡುವವನು ಭಗವಂತನೇ, ಜೀವನಲ್ಲ. ಆದರೆ ಊಟ ಮಾಡಿದ ಭಗವಂತ ಊಟದ ಪದಾರ್ಥಗಳನ್ನು ತಿನ್ನುವುದಿಲ್ಲ, ತನ್ನ ಸ್ವಾಖ್ಯರಸವನ್ನು ಸ್ವೀಕಾರ ಮಾಡಿ ಜೀವನಿಗೆ ಉಚಿತವಾದ ರಸವನ್ನು ಕೊಡುತ್ತಾನೆ. ಸ್ವಾಖ್ಯರಸ ಎಂದರೆ ಆ ರಸದಲ್ಲಿರುವ ತದ್ರೂಪ ಎಂದರೆ ತನ್ನದೇ ರೂಪ ಇರುತ್ತದೆ ಎಂದು ತಿಳಿಯಬೇಕು.

ದೇವರ ನೈವೇದ್ಯ ಮಾಡುವಾಗ ಅನ್ನಾದಿ ನೈವೇದ್ಯಪದಾರ್ಥಗಳಲ್ಲಿ ಹಿಂದೆ ನಿರೂಪಿಸಿದ ನೈವೇದ್ಯ ಪಟ್ಟಿಯಲ್ಲಿನ ಪ್ರಕಾರದಂತೆ, ತದಭಿಮಾನಿ (ರಸಾಭಿಮಾನಿ) ದೇವತೆಗಳನ್ನೂ, ತದಂತರ್ಗತನಾದ ಕೇಶವಾದಿ ಭಗವತ್ ರೂಪಗಳನ್ನು ಚಿಂತಿಸಿಕೊಂಡು ಮೂವತ್ತೆರಡು ಕವಳ (ಒಂದು ಬಾಯಿ ತುಂಬ ತುಂಬಿಕೊಳ್ಳುವಷ್ಟು ಪ್ರಮಾಣ) ಹುಳಿ ಸಾರು ಮಜ್ಜಿಗೆ ಇತ್ಯಾದಿ ಪದಾರ್ಥಗಳ ಸಹಿತವಾಗಿ ಭೋಜನ ಮಾಡಬೇಕು. ಪಲ್ಯ, ಚಟ್ನಿ, ಭಕ್ಷ್ಯ, ಪರಮಾನ್ನ, ಇತ್ಯಾದಿ ವ್ಯಂಜನಪದಾರ್ಥಗಳು ಮೂವತ್ತೆರಡು ಕವಳದಲ್ಲಿ ಸೇರಿಲ್ಲ. ಪ್ರತಿ ಒಂದು ತುತ್ತಿಗೂ ಭಗವನ್ನಾಮಸ್ಮರಣೆ ಮಾಡುತ್ತಾ ಅಂತರ್ಯಾಮಿಯಾದ ಪರಮಾತ್ಮನಿಗೆ ನೈವೇದ್ಯವೆಂದು ಚಿಂತಿಸಿ, ಭೋಜನವನ್ನು ಮಾಡುವುದು. ಇಂದಿನಿಂದಲೇ ಅಭ್ಯಾಸ ಮಾಡಿ. ಕೇಶವಾದಿ ಚತುರ್ವಿಂಶತಿ ಮೂರ್ತಿಗಳ ಚಿಂತನೆ ಅಭ್ಯಾಸ ಮಾಡಲು ಇದು ಸರಿಯಾದ . (ಕಂಠಪಾಠ - ಪ್ರಥಮ ಭಾಗದಲ್ಲಿ ಬರೆದಿದೆ.)

ಬ್ರಹ್ಮಚಾರಿಗಳಿಗೆ ಈ ಕವಳದ ನಿಯಮವಿಲ್ಲ. ಅವರು ವೇದಾಧ್ಯಯನ ಮಾಡಬೇಕಾಗಿರುವುದರಿಂದ ಹೆಚ್ಚಿಗೆ ಶ್ರಮ ಪಡಬೇಕಾಗುತ್ತದೆ. ಆದುದರಿಂದ ಅವರು ಯಥೇಷ್ಟವಾಗಿ ಭೋಜನ ಮಾಡಬಹುದು. ಆದರೆ ಏಕಾದಶೀ ನಿಯಮ ವ್ಯತ್ಯಾಸವಾಗುವಂತಿಲ್ಲ. ಪ್ರತಿದಿನ ಸೂರ್ಯೋದಯವಾದ ಮೇಲೆ ಸೂರ್ಯಾಸ್ತಮಯವಾಗುವುದರೊಳಗಾಗಿ ಎರಡು ಸರಿ ಭೋಜನ ಮಾಡಲು ಅವಕಾಶವಿಲ್ಲ. (ಸಂಪ್ರದಾಯದ ಮೂಲ), ತಿಂಡಿ ತಿನ್ನಬಹುದು.

ಸನ್ಯಾಸಿಗಳು ಕೇವಲ ಶರೀರ ಉಳಿಸಿಕೊಳ್ಳುವಷ್ಟರ ಮಟ್ಟಿಗೆ ಮಾತ್ರ ಆಹಾರ ಸ್ವೀಕಾರ ಮಾಡಬೇಕಾಗುತ್ತದೆ. ಅವರಿಗೆ ತಪಸ್ಸು, ನೇಮ, ನಿಷ್ಠೆಗಳು ಜಾಸ್ತಿ. ಆಹಾರ ಮತ್ತು ನಿದ್ರೆ ಕಡಿಮೆ. ಆದುದರಿಂದ ಸನ್ಯಾಸಿಗಳು ಎಂಟೇ ಕವಳ ಭೋಜನ ಮಾಡಬೇಕು.

ಬ್ರಾಹ್ಮಣರ ಭೋಜನ ಮಾಡಿಸುವಾಗ ಏನು ಅನುಸಂಧಾವೋ ಅದೇ ಅನುಸಂಧಾನ ನಾವು ಭೋಜನ ಮಾಡುವಾಗಲೂ ಚಿಂತಿಸತಕ್ಕದ್ದು.

ಭೋಜನ ಮಾಡಿಸುವವರು, ಭೋಜನ ಮಾಡುವವರು, ಭೋಜನದ ಪದಾರ್ಥಗಳು, ಅಡಿಗೆ ಮಾಡುವವರು, ಅಡಿಗೆಯ ಒಲೆ, ಪಾತ್ರೆ, ಊಟದ ಎಲೆ, ಊಟ ಮಾಡುವ ಪ್ರದೇಶ, ಸಮಯ, ವಾತಾವರಣ ಇತ್ಯಾದಿ ಸಕಲ ಪದಾರ್ಥಗಳಲ್ಲಿ ತತ್ವೇಶದೇವತೆಗಳು, ಭಾರತೀರಮಣ ಮುಖ್ಯಪ್ರಾಣ ದೇವರು, ಇವರುಗಳಲ್ಲಿ ಶ್ರೀಹರಿಯು ಇದ್ದುಕೊಂಡು ಜೀವರ ಸ್ವಭಾವ, ಶಕ್ತಿ, ಕರ್ಮ, ಜ್ಞಾನ ಇತ್ಯಾದಿಗಳಿಗೆ ಅನುಸರಿಸಿ ಫಲವನ್ನು ಕೊಡುತ್ತಾನೆ ಎಂದು ಮನಃಪೂರ್ವಕವಾಗಿ, ಚಿಂತಿಸಿ ಗೊಣಗದೆ ಸಂತೋಷದಿಂದ, ಅದರಿಂದ ಒದಗುವ ಸುಖದುಃಖಗಳನ್ನು ಅನುಭವಿಸಿಕೊಂಡು ಪರಮಾತ್ಮನನ್ನು ಸ್ಮರಿಸಿ ಸುಮ್ಮನಾಗಬೇಕು ; ಆಕ್ಷೇಪಣೆ ಮಾಡಬಾರದು. ಈ ಅನುಸಂಧಾನ ಕೇವಲ ಭೋಜನಕ್ಕೆ ಮಾತ್ರವೇ ಅಲ್ಲ, ನಮ್ಮ ಜೀವನದಲ್ಲಿ ಬರತಕ್ಕ ಸಕಲ ಸುಖದುಃಖಗಳಿಗೂ ಅನ್ವಿಯಸತಕ್ಕದ್ದು.

ಊಟದ ಎಲೆಯನ್ನು ಪೂರ್ವ ಮತ್ತು ಉತ್ತರ ದಿಕ್ಕಿಗೆ ಅಭಿಮುಖವಾಗಿ ಹಾಕಿಕೊಂಡು ಕೂಡಬೇಕು. ಪಶ್ಚಿಮ ದಕ್ಷಿಣಾಭಿಮುಖವಾಗಿ ಊಟಕ್ಕೆ ಕೂಡುವುದು ಉತ್ತಮವಲ್ಲ. ಪಶ್ಚಿಮದಿಕ್ಕಿಗೆ ಕೂಡಬೇಕಾದಾಗ ಒಂದೇ ಎಲೆಯನ್ನು ಹಾಕಿಕೊಂಡು ಕೂಡಬಾರದು. ಪಕ್ಕದಲ್ಲಿ ಇನ್ನೊಂದು ಎಲೆಯನ್ನು ಹಾಕಿಕೊಂಡು ಕುಳಿತುಕೊಳ್ಳಬೇಕು. ಸಮಾರಾಧನೆ ಇತ್ಯಾದಿ ಹೆಚ್ಚಿಗೆ ಜನಸಮೂಹ ಸೇರಿದಾಗ ಈ ನಿಯಮವಿಲ್ಲ. ಚಿತ್ರಾವತಿಯನ್ನು ದಕ್ಷಿಣದಿಂದ ಉತ್ತರಾಭಿಮುಖವಾಗಿ ಹಾಗೂ ಪಶ್ಚಿಮದಿಂದ ಪೂರ್ವಾಭಿಮುಖವಾಗಿ ಇಡಬೇಕು. ಭೋಜನಕ್ಕೆ ಯಾವ ದಿಕ್ಕಿಗೆ ಅಭಿಮುಖವಾಗಿ ಕುಳಿತರೂ ಚಿತ್ರಾವತಿ ಇಡುವ ನಿಯಮ ವ್ಯತ್ಯಾಸವಾಗದೆ ದಕ್ಷಿಣದಿಂದ ಉತ್ತರದ ಕಡೆಗೆ ಅಥವಾ ಪಶ್ಚಿಮದಿಂದ ಪೂರ್ವದ ಕಡೆಗೆ ಇಡಬೇಕು.

ಊಟ ಎಂಬುವುದು ಬರಿ ಹೊಟ್ಟೆ ತುಂಬಿಸಿಕೊಳ್ಳುವುದಕ್ಕೆ ಮಾಡುವ ಕಾರ್ಯವಲ್ಲ. ಇದು ಪ್ರಾಣಾಗ್ನಿಹೋತ್ರ ಎಂಬ ಪರಮಾತ್ಮನ ಪೂಜಾನಿಮಿತ್ತಕವಾದ ಯಜ್ಞವೆನಿಸಿಕೊಂಡಿದೆ. ಅನುಸಂಧಾನ ಪೂರ್ವಕ ಭೋಜನ ಮಾಡಿದರೆ ೩೬,೦೦೦ ದಂಪತಿ ಭೋಜನ ಮಾಡಿಸಿದ ಅಥವಾ ಮಾಡಿದ ಪುಣ್ಯದ ಫಲವುಂಟು. ಪರಮಾತ್ಮನು ಪ್ರೀತನಾಗಿ ಅನುಗ್ರಹ ಮಾಡುತ್ತಾನೆ.

## ಭೋಜನಸೌಖ್ಯ

ನಮಗೆ ಹಸಿವು ಆಗುವುದರಿಂದ ಭೋಜನ ಮಾಡುತ್ತೇವೆ. (ಏಕಾದಶಿ ಬಿಟ್ಟು); ಇದರಿಂದ ಹಸಿವು ನಿವಾರಣೆಯಾಗುತ್ತದೆ. ಬಾಯಾರಿಕೆಯಾದರೆ ನೀರನ್ನು ಕುಡಿಯುತ್ತೇವೆ. ಇದರಿಂದ ಬಾಯಾರಿಕೆ ನಿವಾರಣೆಯಾಗುತ್ತದೆ. ನಮ್ಮ ಭೋಜನದ ಒಟ್ಟು ಪದಾರ್ಥಗಳಲ್ಲಿ ಅರ್ಧಭಾಗ ಘನಪದಾರ್ಥವು, ಕಾಲುಭಾಗ ದ್ರವ ಪದಾರ್ಥವು, ಉಳಿದ ಕಾಲುಭಾಗ ಗಾಳಿಗೆ ಅವಕಾಶವು ಇರಬೇಕು. ಹೀಗೆ ಭೋಜನ ಮಾಡುವುದು ಆರೋಗ್ಯದೃಷ್ಟಿಯಿಂದ ಹಿತಕರವಾದುದು. ಊಟ ಮಾಡುವಾಗ 'ಸಾವಕಾಶವಾಗಿ ಭೋಜನ ಮಾಡಿ' ಎಂದು ಉಪಚಾರ ಮಾಡುತ್ತಾರೆ ಎಂದರೆ, ಹೊಟ್ಟೆ ಭಾರವಾಗುವಂತೆ ಅಥವಾ ಬಿರಿಯುವಂತೆ ಅಥವಾ ಆಯಾಸವಾಗುವಂತೆ ಭೋಜನ ಮಾಡಬಾರದು. ಇನ್ನೂ ಒಂದು ಸ್ವಲ್ಪ ಆಹಾರ ಸ್ವೀಕರಿಸಬಹುದು ಎನ್ನುವ ಹೊತ್ತಿಗೇ ಊಟ ನಿಲ್ಲಿಸುವುದು ಕ್ಷೇಮ. ಭೋಜನದಿಂದ ನಮಗೆ ಹಿತವಾಗಬೇಕೇ ಹೊರತು ಆಯಾಸವಾಗಬಾರದು. ಭೋಜನವಾದ ಮೇಲೆ ಮಲಗಿಕೊಳ್ಳಬೇಕು ಎಂಬ ಪರಿಸ್ಥಿತಿಯು ಹಿತಕರವಾದುದಲ್ಲ. ಭೋಜನಾನಂತರದಲ್ಲಿ ಯಾವುದಾದರೂ ಸದ್ಗ್ರಂಥವನ್ನು ಅವಲೋಕನ ಮಾಡುವಷ್ಟು ಮನಸ್ಸು ಹೊಟ್ಟೆಯ ಹಗುರ ಇರಬೇಕು. ಎಂದರೆ, ಭೋಜನಾನಂತರ ಯಾವುದಾದರೂ ಭಗವಂತನ ವಿಚಾರವಾಗಿ ಕಾಲ ಕಳೆಯುವ ಹಾಗೆ ಮನಸ್ಸಿನ ಪರಿಸ್ಥಿತಿ ಇರಬೇಕು. (ಭೋಜನಾನಂತರ ಎರಡು ಮುಹೂರ್ತ (೪೮ ನಿಮಿಷ) ವಿಶ್ರಾಂತಿ ಪಡೆಯುವುದು ಎಂದು ಭಾಗವತಸಾರೋದ್ಧಾರಕಾರರು ಅಪ್ಪಣೆ ಕೊಡಿಸಿದ್ದಾರೆ). ವಿಶ್ರಾಂತಿ ಎಂದರೆ ನಿದ್ದೆ ಮಾಡುವುದಲ್ಲ, ಪರಮಾತ್ಮನ ಬಗ್ಗೆ ಚಿಂತಿಸುವುದು ಎಂದು ಅರ್ಥ.

## ಚಾತುರ್ಮಾಸ್ಯ ವ್ರತ

ಚಾತುರ್ಮಾಸ್ಯ ವ್ರತವನ್ನು ಪೂರ್ಣವಾಗಿ ಮಾಡಲಾಗದವರು ದಶಮಿ, ದ್ವಾದಶಿ ಎರಡು ದಿನಗಳಲ್ಲಿ ಮಾಡಿದರೂ ಶ್ರೀಹರಿಯು ಸುಪ್ರೀತನಾಗುತ್ತಾನೆ. ಮನಸ್ಸಿನ ದಾರ್ಢ್ಯವಿದ್ದಲ್ಲಿ ದೈಹಿಕ ಶ್ರಮ ಸಹಿಸಿಕೊಂಡು ಮಾಡುತ್ತಾರೆ. ಚಾತುರ್ಮಾಸ್ಯ ವ್ರತ ಪ್ರತಿನಿತ್ಯ ಮಾಡಲು ಆಗುವುದಿಲ್ಲವಲ್ಲ ಎಂಬ ಆತಂಕವಾದರೂ ಮನಸ್ಸಿನಲ್ಲಿ ಇರಬೇಕು.

## ಹೇಗೆ ಊಟ ಮಾಡಬಾರದು?

ಕೆಳಗೆ ಕುಳಿತುಕೊಳ್ಳುವುದಕ್ಕೆ ಆಗದಂತಹ ರೋಗ ಬಂದಿರುವವರನ್ನು ಬಿಟ್ಟು ಉಳಿದವರು ಎಂದೂ ಸಹ ಟೇಬಲ್ ಮೇಲೆ ಊಟ ಮಾಡಬಾರದು. ಸಾಮೂಹಿಕ ಟೇಬಲ್ ಮೀಲ್ಸ್ ಎಂಬುದು ಎಲ್ಲರ ಎಂಜಲು, ಎಲ್ಲರೂ ಸಾಮೂಹಿಕವಾಗಿ ತಿನ್ನಬಹುದಾದ ಸುಲಭೋಪಾಯ. ಇದು ಮುಸಲ್ಮಾನರ ಸಂಪ್ರದಾಯ. ಬಫೇ ಸಿಸ್ಟಮ್ ಎಂಬುದು ಟೇಬಲ್ ಮೀಲ್ಸ್ ನಷ್ಟು ಎಂಜಲು ಬೆರಕೆ ಇಲ್ಲ. ಆದರೆ ಬಫೇ ಸಿಸ್ಟಮ್ ಸರಿಯಾದುದು ಅಂತ ತಿಳಿಯಬೇಡಿ. ಬಫೆ + ಲೋ = ಬಫೆಲೋ ಎಂದರೆ ಇಂಗ್ಲೀಷ್ ಎಮ್ಮೆಗಳಂತೆ ತಿನ್ನುವುದು ಎಂದರ್ಥ.

ಕೈಯಲ್ಲಿ ತಟ್ಟೆ ಹಿಡಿದುಕೊಂಡು ಮನೆಯೆಲ್ಲಾ ಓಡಾಡಿಕೊಂಡು ಊಟ ಮಾಡುವುದು, ತಿಪ್ಪೆಗುಂಡಿಯಲ್ಲಿ ಬಿಸಾಕಿದ ಎಂಜಲು ಎಲೆಯ ಪದಾರ್ಥಗಳನ್ನು ತಿನ್ನುವ ಕತ್ತೆ, ನಾಯಿ, ಎಮ್ಮೆ, ಹಸು ಮುಂತಾದ ಪ್ರಾಣಿಗಳಂತೆ ಆಗುತ್ತದೆ. **ಏನೇನು ಮಾಡಬಾರದೋ ಅದನ್ನೇ ಮಾಡುವುದು ಕಲಿಯುಗದ ಮಹಿಮೆ.** ಸಾಧಕರಾದರೋ ಇಂತಹ ಸನ್ನಿವೇಶಗಳಲ್ಲಿ ಭಾಗವಹಿಸದೆ ಉಪಾಯವಾಗಿ ತಪ್ಪಿಸಿಕೊಳ್ಳುವುದೇ ಧರ್ಮವಾಗುತ್ತದೆ.

## ಲೌಕಿಕ ಊಟ

### ಜನ ಸೇರಿದ್ದ ಸಮಾರಾಧನೆಗಳಲ್ಲಿ ಊಟ ಮಾಡುವ ಕ್ರಮ (ಮನೆಯಲ್ಲಿ ಮಾಡುವ ಊಟಕ್ಕೂ ಅನ್ವಯ)

ಮಂಡಲ ಮಾಡಿ ಎಲೆ ಸಾಕಿ ಪಾತ್ರಾಭಿಗಾರ ಮಾಡಿ ಉಪ್ಪಿನಿಂದ ಪ್ರಾರಂಭಿಸಿ ಪಲ್ಯಗಳು, ಗೊಜ್ಜು, ಚಟ್ನಿ, ಕೋಸಂಬರಿ, ಭಕ್ಷ್ಯ, ಚಿತ್ರಾನ್ನ, ಪಾಯಸ, ತೊವ್ವೆ, ಅನ್ನ, ತುಪ್ಪದ ಅಭಿಗಾರ ಮಾಡಿ ಕೃಷ್ಣಾರ್ಪಣ ಅಂತ ಹೇಳಿ ಶ್ರೀಮದ್ರಮಾರಮಣ ಗೋವಿಂದ ಎಂದು ಹೇಳಿದ ಮೇಲೆ ಊಟ ಪ್ರಾರಂಭ. ಊಟಕ್ಕೆ ಮುಂಚೆ ನಿಮ್ಮ ಮನೆ ದೇವರ ಪೆಟ್ಟಿಗೆ ಜ್ಞಾಪಿಸಿಕೊಂಡು ದೇವರಿಗೆ ಮನಸಾ ನಿವೇದನ ಮಾಡಿ, ಅನಂತರ ಉಪನಯನವಾದವರು ಪರಿಶೇಚನ, ಚಿತ್ರಾವತಿ ಇಟ್ಟು ಆಪೋಶನ ತೆಗೆದುಕೊಂಡು ಊಟ ಪ್ರಾರಂಭಿಸಿ. ಮೊದಲು ಪಾಯಸ ಅನಂತರ ತೊವ್ವೆ ತಿನ್ನಬೇಕು. ಆಮೇಲೆ ಹುಳಿ, ಸಾರು, ಮಜ್ಜಿಗೆ ಪಳದ್ಯ ತಿನ್ನಬೇಕು. ಭಕ್ಷ್ಯಗಳು ಬಹಳ ಇದ್ದರೆ ಹುಳಿ, ಸಾರು, ಅನ್ನ ಕಡಿಮೆ ಮಾಡಿ, ಇಲ್ಲದಿದ್ದರೆ ಹೊಟ್ಟೆ ಭಾರ ಆಗುತ್ತದೆ. ಊಟದ ಮಧ್ಯೆ ಅನ್ನ ಬರುವುದು ತಡವಾದರೆ, ಆಗ ಈ ಕೋಸಂಬರಿ, ಪಲ್ಯ, ಗೊಜ್ಜು ತಿನ್ನುವುದು. ಅದಕ್ಕಾಗಿ ಅದನ್ನು ಮೊದಲೇ ತಿನ್ನಬೇಡಿ. ಸಮಯಕ್ಕಾಗಿ ಕಾದಿರಿಸಿರಿ. ಇದಕ್ಕೆ ಅನ್ನ ಬೆರೆಸಿಕೊಂಡು ತಿನ್ನಬೇಡಿ, ಹಾಗೆ ತಿನ್ನಬೇಕು, ಇಲ್ಲದಿದ್ದರೆ ಹೊಟ್ಟೆ ಭಾರವಾಗುತ್ತದೆ. ಭಕ್ಷ್ಯಗಳು ಬಂದರೆ, ಸಿಕ್ಕಿತಲ್ಲಾ ಅಂತ ಚೆನ್ನಾಗಿ ತಿಂದು ಹೊಟ್ಟೆಡುಬ್ಬಣ್ಣರಾಗಿ ಒದ್ದಾಡಬೇಡಿ. ೮ ಲಾಡು ತಿನ್ನಲು ಶಕ್ತಿ ಇದ್ದರೆ ೪ ಲಾಡು ತಿಂದು ತೃಪ್ತಿಪಟ್ಟಿಕೊಳ್ಳಿ. ಇದರಿಂದ ನಿಮಗೆ ಸುಖ, ಇಲ್ಲದಿದ್ದರೆ ಹಿಂಸೆಯಾಗುತ್ತದೆ. ನಾಲಿಗೆ ರುಚಿ ಗೆಲ್ಲುವ ಅಭ್ಯಾಸಕ್ಕೆ ನಾಂದಿಯಾಗುತ್ತದೆ. ತುಪ್ಪ ಮಿಶ್ರವಾದ ಸಿಹಿ ಪದಾರ್ಥಗಳೇ ಹೊಟ್ಟೆಭಾರಕ್ಕೆ ಕಾರಣ. ಆದ್ದರಿಂದ ಅದನ್ನು ಹೆಚ್ಚಿಗೆ ತಿನ್ನಬಾರದು. ನಾಲಿಗೆ ಮೇಲೆ ೧ ನಿಮಿಷ ಸ್ವರ್ಗ, ನಾಲಿಗೆ ಕೆಳಗೆ ನರಕ. ಹೆಚ್ಚಿಗೆ ತಿಂದು ಹೊಟ್ಟೆಭಾರ ಮಾಡಿಕೊಂಡು ಹೆಚ್ಚಿಗೆ ಗೊಬ್ಬರ ತಯಾರು ಮಾಡಿದಂತಾಗುತ್ತದೆ. ಇದರಿಂದ ನಾವು ಏನು ಮಾಡಿದಂತಾಯಿತು, ಯೋಚನೆ ಮಾಡಿನೋಡಿ. ಬದುಕುವುದಕ್ಕಾಗಿ ತಿನ್ನಬೇಕೇ ಹೊರತು ತಿನ್ನುವುದಕ್ಕಾಗಿ ಬದುಕಬಾರದು. ಬದುಕುವುದಾದರೋ ಭಗವಂತನ ಬಗ್ಗೆ ಜಿಜ್ಞಾಸ ಮಾಡಿ ತಿಳಿದುಕೊಂಡು ಸಂಸಾರ ಬಿಡುಗಡೆಯಾಗಿ ಮೋಕ್ಷ ಪಡೆಯುವುದಕ್ಕೆ. ಮೋಕ್ಷಸ್ಥಾನದಲ್ಲಿ ಎಷ್ಟು ತಿಂದರೂ ಹೊಟ್ಟೆ ಭಾರವಾಗುವುದಿಲ್ಲ, ಅದು ಅಂತಹ ಮಹಿಮೆ ಜಾಗ. ಇದಕ್ಕೆ 'ಭೋಜನ ಸೌಖ್ಯ' ಎಂಬ ಲೇಖನ ನೋಡಿ.

## ಚಟ್ನೇಶ್ವರನ ಮಹಿಮೆ

ಶುಂಠಿ, ಮೆಣಸಿನಕಾಯಿ, ಉಪ್ಪು, ಹುಣಿಸೆಹಣ್ಣುಗಳ ಮಿಶ್ರಣಕ್ಕೆ ಹುರಿಗಡಲೆ ಅಥವಾ ಕಡಲೇಬೇಳೆ ಅಥವಾ ತೆಂಗಿನಕಾಯಿ ಬೆರಕೆಯಾಗಿ ಸಂಯುಕ್ತವಾದ ನುಣ್ಣಗಿರುವ ಪದಾರ್ಥಕ್ಕೆ ಚಟ್ನಿ ಎಂದು ಹೆಸರು. ಬೇರೆ ಬೇರೆ ಸಮ್ಮಿಶ್ರಣದಿಂದ ನಾನಾ ನಾಮಾಂಕಿತವಾದ ಚಟ್ನಿಗಳಾಗುತ್ತದೆ. ಚಟ್ನಿ ಎಂಬುದು ಅನ್ವರ್ಥ ನಾಮ.

ಚಟ್ನಿ ಬೆಣ್ಣೆಯಂತೆ ನುಣ್ಣಗಿರುವ ವಸ್ತು, ಚಟ್ನಿ ಖಾರ ಉಪ್ಪುಗಳಿಂದ ಪ್ರಬಲವಾಗಿರಬೇಕು. ಏಕೆಂದರೆ ಸಾರು, ಹುಳಿಗಳಿಗೆ ಉಪ್ಪು ಖಾರ ಸಾಲದೇ ಸಪ್ಪೆ ಇದ್ದರೆ ಚಟ್ನಿ ಬೆರೆಸಿಕೊಂಡರೆ ರುಚಿ ಬರುತ್ತದೆ. ಊಟ ಮುಗಿದ ಮೇಲೆ ಕೊನೆಯಲ್ಲಿ ಸ್ವಲ್ಪ ಚಟ್ನಿ ತಿಂದು ನೀರು ಕುಡಿದರೆ ತಿಂದ ಪದಾರ್ಥಗಳೆಲ್ಲ ಚಟ್ನಿಯಾಗಿ ಜೀರ್ಣವಾಗುತ್ತದೆ. ಆಪೋಶನ ತೆಗೆದುಕೊಂಡು ಅನ್ನದಾತಾ ಸುಖೀಭವ, ಶ್ರೀ ವಿಷ್ಣು ಪೂಜಾಸ್ತು ಸರ್ವ ಯಜ್ಞ ಭುಜೇ ನಮಃ ಎಂದು ಅರ್ಪಿಸಿ, ಬಲಭಾಗದಲ್ಲಿ ಚಿತ್ರಾವತಿಯ ಪಕ್ಕದಲ್ಲಿ ಕೈಒತ್ತಿ ಕೈತೊಳೆದುಕೊಳ್ಳುವುದು. ಚೆನ್ನಾಗಿ ಬಾಯಿ ಮುಕ್ಕಳಿಸಿ ಶುದ್ಧ ಮಾಡಿಕೊಂಡು 2 ಬಾರಿ ಆಚಮನ ಮಾಡಿ ತೀರ್ಥ ತೆಗೆದುಕೊಳ್ಳಿ. ಇದರಿಂದ ನೀವು ಊಟ ಮಾಡಿದ ಪದಾರ್ಥ ಶುದ್ಧಿಯಾಗುತ್ತದೆ. ದೇವರಿಗೆ ಅರ್ಪಿತವಾದ ತುಳಸಿದಳ ತಿಂದರೆ ನೂರು ಚಾಂದ್ರಾಯಣ ವ್ರತ ಮಾಡಿದ ಪುಣ್ಯ ಬರುತ್ತದೆ. ಉತ್ತರಾಪೋಶನ ತೆಗೆದುಕೊಂಡ ಮೇಲೆ ಎಂಜಲು ಎಲೆಯನ್ನು ಪುನಃ ಮುಟ್ಟಬೇಡಿ. ಕೈಯನ್ನು ತೊಳೆದುಕೊಂಡು ಬಾಯನ್ನು ಮುಕ್ಕಳಿಸಬೇಕು, ಇಲ್ಲದಿದ್ದರೆ ಎಂಜಲು ತಿಂದಂತಾಗುತ್ತದೆ.

## ವೈದಿಕ ಊಟ

ವೈದಿಕ ಊಟ ಎಂದರೆ ತಿಥಿ ಊಟ ಅಂತ ಅಲ್ಲ, ವೇದೋಕ್ತವಾಗಿ ಶಾಸ್ತ್ರಕ್ಕೆ ಸಮ್ಮತವಾಗಿ ಹೇಗೆ ಊಟ ಮಾಡಬೇಕು ಅಂತ ನಮಗೆ ತಿಳಿದಷ್ಟು ಇಲ್ಲಿ ಹೇಳಲಾಗಿರುತ್ತದೆ. "ಎಲ್ಲಾರೂ ಮಾಡವುದು ಹೊಟ್ಟೆಗಾಗಿ, ಗೇಣುಬಟ್ಟೆಗಾಗಿ, ತುತ್ತು ಹಿಟ್ಟಿಗಾಗಿ" ಎಂದು ಕನಕದಾಸರ ವಾಣಿ. ಊಟದಿಂದಲೇ ಪಾಪ, ಪುಣ್ಯಗಳ ಸಂಪಾದನೆಯಾಗುವುದು. "ಇಟ್ಟು, ಸುಟ್ಟು, ಕೊಟ್ಟು ಊಟ ಮಾಡಬೇಕು" ಎಂದು ಹರಿಕಥಾಮೃತಸಾರದಲ್ಲಿ ಶ್ರೀಜಗನ್ನಾಥದಾಸರು ಹೇಳಿದ್ದಾರೆ. ದೇವರ ನೈವೇದ್ಯಕ್ಕೆ 'ಇಟ್ಟು', ಪಂಚಸೂನದೋಷ ಪರಿಹಾರಕ್ಕಾಗಿ 'ಸುಟ್ಟು', ವೈಶ್ವದೇವಹೋಮ ಮಾಡಿ 'ಕೊಟ್ಟು' ಎಂದರೆ ಬ್ರಾಹ್ಮಣರ ಮುಖದಲ್ಲಿ ಭೋಜನ ಮಾಡಿಸಿ ನಂತರ ನಾವು ಊಟ ಮಾಡಬೇಕು. ಇದು ಸರಿಯಾದ ಕ್ರಮ. ಇದು ಇಲ್ಲದಿರುವದು ಅಕ್ರಮ. **ಪಾಠ ಓದಿ, ಊಟ ಮಾಡಿ, ನೀಟಾಗಿ ನೋಟ ನೋಡಿ, ಓಟ ಓಡಿ ಕೀಟಲೆ ಕಾಟಾವಳಿಗಳ ಕೋಟಲೆಯಿಂದ ದಾಟಿ ಮಾಟವಾಗಿ ಬಾಳುವುದು.**

- **ಪಾಠ ಓದಿ** - ಬ್ರಹ್ಮ ಜಿಜ್ಞಾಸ ಮಾಡಿ, ಜ್ಞಾನಿಯಾಗಿ;
- **ಊಟ ಮಾಡಿ** - ವೈಶ್ವಾನರ ಯಜ್ಞ ಮಾಡಿ ;
- **ನೀಟಾಗಿ** - ಸರಿಯಾಗಿ
- **ನೋಟ ನೋಡಿ** - ಪೂರ್ವಪಕ್ಷ ಸಿದ್ಧಾಂತಗಳನ್ನು ಅರ್ಥ ಮಾಡಿಕೊಂಡು;
- **ಓಟ ಓಡಿ ಕೀಟಲೆ ಕಾಟಾವಳಿಗಳ ಕೋಟಲೆಗಳನ್ನು ದಾಟಿ** - ಸುಖದುಃಖ ಮಯವಾದ ಸಂಸಾರವನ್ನು ಬಿಡುಗಡೆ ಮಾಡಿಕೊಂಡು;
- **ಮಾಟವಾಗಿ** - ಶ್ರೀವೈಕುಂಠದಲ್ಲಿ ನಿರ್ದುಃಖಾದನಂದಭರಿತವಾದ ಶಾಶ್ವತಸುಖ ಅನುಭವಿಸುತ್ತಾ ಬಾಳುವುದು.

ಇದಕ್ಕೆಲ್ಲಾ ಮೂಲ ಊಟ.

ಭೋಜನ ಮಾಡಿದ ಪದಾರ್ಥಗಳು ೩ ಭಾಗಗಳಾಗಿ ವಿಭಜನೆಯಾಗುತ್ತದೆ. ೧) ಸಂಸ್ಕಾರ, ೨) ದೇಹಕ್ಕೆ ಪೋಷಕ ೩) ದೇಹದಿಂದ ವಿಸರ್ಜನೆಯಾಗುವ ಅಂಶ.

ಟೆಲಿವಿಷನ್ ನೋಡುತ್ತಾ ಕ್ರಿಕೆಟ್ ಕಾಮೆಂಟರಿ ಕೇಳುತ್ತಾ, ಕೆಟ್ಟ ದೃಶ್ಯಗಳನ್ನು ನೋಡುತ್ತಾ, ಅದರ ಬಗ್ಗೆ ಮಾತನಾಡುತ್ತಾ, ಪಾಕಿಸ್ಥಾನದ ಯುದ್ಧ ಮುಂತಾದ, ಭಗವಂತನನ್ನು ಮರೆಸುವ ಲೌಕಿಕ ವಿಚಾರಗಳಲ್ಲಿ ಮಗ್ನರಾಗಿ ಊಟ ಮಾಡಿದರೆ ಅದು ಸಂಸ್ಕಾರವಾಗಿ ನಿಂತು ವೆಸ್ಟ್ ಇಂಡೀಸ್ನಲ್ಲೇ ಇನ್ನೂ $(11x11)^{11}$ ಹತ್ತಾರು ಜನ್ಮಗಳನ್ನು ಎತ್ತಿ, ಕ್ಲೇಶಕರವಾದ ಸಂಸಾರದಲ್ಲಿ ಬೀಳಬೇಕಾಗುತ್ತದೆ. ಹೀಗಾಗಬಾರದು; ಯೋಚನೆ ಮಾಡಿನೋಡಿ. ಅದರ ಬದಲು ಭಗವಂತನ ಬಗ್ಗೆ ಯೋಚನೆ ಮಾಡುತ್ತಾ, ಅವನ ನಾಮಸ್ಮರಣೆ ಮಾಡುತ್ತಾ ಊಟ ಮಾಡಿದರೆ, ಭಗವಂತನ ಸಂಬಂಧವಾದ ಸಂಸ್ಕಾರ ಹುಟ್ಟುವುದು. ಅದೇ ಮನಸ್ಸಾಗಿ ಸಂಸಾರದಿಂದ ಬಿಡುಗಡೆ ಆಗಿ ನಿರ್ದುಃಖಾನಂದಭರಿತವಾದ ಮೋಕ್ಷ ಹೊಂದಲು ದಾರಿಯಾಗುತ್ತದೆ. ಇದು ಸರಿಯೇ ಎಂದು ಯೋಚನೆ ಮಾಡಿನೋಡಿ;

ಅದಕ್ಕೆ ಊಟ ಮಾಡುವಾಗ ದೇವರನಾಮಗಳು, ಶ್ಲೋಕಗಳನ್ನು ಹೇಳುವುದು ಮತ್ತು ಗೋವಿಂದ ಎಂದು ಹೇಳುವುದು ಸಂಪ್ರದಾಯವಾಗಿ ಬಂದಿರುತ್ತದೆ.

**ತಾತ್ಪರ್ಯ : ದೇವರಸ್ಮರಣೆ ಮಾಡುತ್ತಾ ಊಟ ಮಾಡಬೇಕು ಎಂದು ಗೊತ್ತಾಯಿತೇ?**

ಒಂದೊಂದು ತುತ್ತೂ ಕಂಠದಿಂದ ಹೊಟ್ಟೆಗೆ ಬಿದ್ದ ಕೂಡಲೇ ಶ್ರೀಕೇಶವಾಯ ಸ್ವಾಹ ಎಂದು ಕೇಶವಾದಿ ೨೪ ರೂಪಗಳನ್ನು ಹೇಳುತ್ತಿದ್ದರೆ ಹಾಗೇ ಚಿಂತನೆ ಮಾಡುವ ಅಭ್ಯಾಸ ಮಾಡುತ್ತಿದ್ದರೆ, ಉಂಡ ಊಟ ಭಗವದರ್ಪಿತವಾಗುತ್ತದೆ ಮತ್ತು ರೂಪಗಳ ಆಕಾರ ಮನಸ್ಸಿನಲ್ಲಿ ಚಿಂತನೆಯಾಗಿ ಸ್ವಾಧೀನವಾಗುತ್ತದೆ.

ಶ್ರೀಸುಮಧ್ವವಿಜಯದ ಚತುರ್ದಶ ಸರ್ಗದ ೩೮ನೇ ಶ್ಲೋಕದಲ್ಲಿ ಹೇಳುತ್ತಾರೆ -

"ಕೃತಪರಮಪಸರ್ಯಃ ಸಾಂದ್ರಸಚ್ಚಂದನಾಂಭಃ ಪರಿಮಲಿತ
ಭುಜೋರೋಮಂಡಲಾಂಸೋ ಮನೀಷೀ ।
ಸ್ಮಿತರುಚಿರಮುಖೇಂದುಃ ಸಿಗ್ಧಕೌಶೇಯವಾಸಾಃ
ಸ ಸುರಮುನಿನರಾಣಾನಾಂ ಚಕ್ಷುಸಾಮುತ್ಸವೋಭೂತ್

**ಅಭಿಪ್ರಾಯ :**

ಶ್ರೀಮದಾಚಾರ್ಯರು ದೇವರಪೂಜೆ ಮುಗಿಸಿ, ಶುದ್ಧವಾದ ರೇಷ್ಮೆ ಮಡಿಯುಟ್ಟುಕೊಂಡು ದೇವರಿಗೆ ಅರ್ಪಿತವಾದ ಗಂಧ ಅಂಗಾರ ಅಕ್ಷತೆಗಳ ಲೇಪನದಿಂದ ಅಲಂಕೃತರಾಗಿ ಭೋಜನಕ್ಕಾಗಿ ಎಲೆಯ ಮುಂದೆ ಬಂದು ಕುಳಿತರು. ಆಗ ಆ ದೃಶ್ಯ ದೇವತೆಗಳಿಗೆ, ಮುನಿಗಳಿಗೆ, ಮನುಷ್ಯರಿಗೆ ಬಹಳ ಆನಂದವನ್ನುಂಟು ಮಾಡಿತು. ನಾವು ಭೋಜನಕ್ಕಾಗಿ ಎಲೆಯ ಮುಂದೆ ಕುಳಿತುಕೊಂಡು ಊಟ ಪ್ರಾರಂಭವಾಗುವುದಕ್ಕೆ ಮುಂಚೆ ಈ ದೃಶ್ಯ ಸ್ಮರಿಸಿಕೊಳ್ಳಬೇಕು.

**ಗಮನಾಸನ ಸಂಕಥಾದಿಲೀಲಾಃ ಸ್ಮೃತಿ ಮಾತ್ರೇಣ ಭವಾಪವರ್ಗದಾತ್ರೀ ॥**

ಅಂದರೆ, ಶ್ರೀಮದಾಚಾರ್ಯರು ನಡೆದುದು, ಕುಳಿತದ್ದು, ಪಾಠಪ್ರವಚನ ಮಾಡಿದ ಮುಂತಾದ ಲೀಲೆಗಳನ್ನು ಭಕ್ತಿಯಿಂದ ಸ್ಮರಿಸಿದರೆ ಸಾಕು, ಸಂಸಾರದ ಬಿಡುಗಡೆಯಾಗಿ ಮೋಕ್ಷ ಹೊಂದುವುದರಲ್ಲಿ ಸಂದೇಹವಿಲ್ಲ ಎಂದರ್ಥ. ಜಗತ್ತಿನಲ್ಲಿ ಇಂತಹ ಆಚಾರ್ಯರು ಇವರೊಬ್ಬರೇ ಇರುವುದು. ಅಂದರೆ ನಾವು ಊಟಕ್ಕೆ ಕುಳಿತುಕೊಳ್ಳುವಾಗ ಮಡಿ ಉಟ್ಟುಕೊಂಡು ಗಂಧ ಅಕ್ಷತೆ ಅಂಗಾರಗಳಿಂದ ಅಲಂಕರಿಸಿಕೊಂಡು, ಶ್ರೀಮದಾಚಾರ್ಯರನ್ನು ಸ್ಮರಿಸಬೇಕು. ನಮಗೆ ಆದ ಅಲಂಕಾರ ಅಂತರ್ಯಾಮಿಯಾದ ಶ್ರೀಹರಿಗೆ ಎಂದು ಅರ್ಪಿಸಿ ಶ್ರೀಸುಮಧ್ವವಿಜಯಾದಿ ಸ್ತೋತ್ರ ಪಾರಾಯಣ ಮಾಡುತ್ತಿರಬೇಕು. ಶ್ರೀಮದ್ಭಾಗವತದ ಒಂದು ಶ್ಲೋಕದ ಅರ್ಧಭಾಗ ಅಥವಾ ಕಾಲುಭಾಗ ಹೇಳಿದರೆ ಸಾಕು ಒಂದು ಸಾವಿರ ಗೋದಾನ ಮಾಡಿದ ಪುಣ್ಯ ಬರುತ್ತದೆ. ಹೀಗಿರುವಾಗ ಅದನ್ನು ಖಂಡಿತ ಬಿಡಬಾರದು. ಹೇಳಲೇಬೇಕು. ಊಟಕ್ಕೆ ಮುಂಚೆ ಮಾಡಿದ ಯಾವ ಸತ್ಕರ್ಮಗಳೂ ಸಹ ಬಹಳ ಫಲಪ್ರದವಾಗುತ್ತದೆ.

ಊಟ ಮಾಡುವುದರ ವಿವರಗಳನ್ನು ಕುರಿತು ಈ ಹಿಂದೆಯೇ ಹೇಳಲಾಗಿದೆ. ಅದು ಇಲ್ಲಿಗೂ ಅನ್ವಯಿಸುತ್ತದೆ.

## ಊಟದ ಅನುಸಂಧಾನ

ಆಪೋಶನ ತೆಗೆದುಕೊಂಡ ಮೇಲೆ, ಊಟ ಮಾಡುವುದಕ್ಕೆ ಮುಂಚೆ ಈ ಹದಿನಾರು ಹೆಸರುಗಳನ್ನು ಹೇಳಿಕೊಂಡು ಅನಂತರ ಭೋಜನ ಮಾಡತಕ್ಕದ್ದು.

| **ಬಾಯಿಯಿಂದ ಹೇಳಬೇಕಾದದ್ದು** | **ಮನಸ್ಸಿನಲ್ಲಿ ಚಿಂತನೆ ಮಾಡಬೇಕಾದದ್ದು** |
|---|---|
| ೧. ನಡೆವನು ಜಯಂತ | : ಊಟದ ಎಲೆಯ ಸಮೀಪಕ್ಕೆ ನಡೆದುಕೊಂಡು ಹೋಗುವವರು ಕಾಲಿನಲ್ಲಿರುವ- ಜಯಂತ ದೇವತೆ. |
| ೨. ನೋಡುವನು ಸೂರ್ಯ | : ಊಟದ ಪದಾರ್ಥಗಳನ್ನು ಕಣ್ಣಿನಿಂದ ನೋಡುವವರು ಸೂರ್ಯದೇವರು. |
| ೩. ಅಣಿಮಾಡುವನು ದಕ್ಷ | : ಪದಾರ್ಥಗಳನ್ನು ಕೈಯಿಂದ ಕಲೆಸುವವರು ದಕ್ಷ ಪ್ರಜಾಪತಿಗಳು. |
| ೪. ಖಂಡಿಸುವ ಯಮರಾಯ | : ದವಡೆಹಲ್ಲುಗಳಲ್ಲಿ ಯಮದೇವರು ಪದಾರ್ಥಗಳನ್ನು ತುಂಡು ಮಾಡುತ್ತಾರೆ. |
| ೫. ಮೆಲ್ಲುವನು ಪಾವಕ | ನಾಲಿಗೆಯಲ್ಲಿರುವ ಅಗ್ನಿದೇವರಲ್ಲಿ ಹೋಮ; ಅಗ್ನಿಮುಖದಿಂದ ಸ್ವೀಕಾರ |
| ೬. ರುಚಿ ಪೇಳುವವನು ವರುಣದೇವ | : ಪದಾರ್ಥಗಳ ರುಚಿಯ ಜ್ಞಾನ ವರುಣದೇವರಿಂದ ಆಗುತ್ತದೆ. |
| ೭. ಹೋಮಿಸುವ ಮುಖ್ಯಪ್ರಾಣ | : ಶ್ರೀಮುಖ್ಯಪ್ರಾಣದೇವರು ಕಂಠದಲ್ಲಿದ್ದುಕೊಂಡು ಪದಾರ್ಥಗಳನ್ನು ವೈಶ್ವಾನರ ಹರಿಗೆ ಅರ್ಪಣ ಮಾಡುತ್ತಾರೆ. |
| ೮. ಅನ್ನಮಯ | : ಜಡವಾದ ಅನ್ನದಲ್ಲಿ ಶ್ರೀಹರಿ ಅನ್ನ ರೂಪದಲ್ಲಿರುತ್ತಾನೆ. |
| ೯. ಪ್ರಾಣಮಯ | : ಜೀವನಲ್ಲಿ ಅಂತರ್ಯಾಮಿಯಾಗಿರುತ್ತಾನೆ. |

೧೦. ಮನೋಮಯ : ತಿಂದ ಪದಾರ್ಥ ಮನಸ್ಸಾಗಿ ಸಂಸ್ಕಾರ ಆಗುತ್ತದೆ. ಅಲ್ಲಿ ಮನೋಮಯ ಎಂದು ಇರುತ್ತಾನೆ.

೧೧. ವಿಜ್ಞಾನಮಯ : ಪದಾರ್ಥದ ಮಹಿಮೆಯಿಂದ ವಿಶೇಷವಾದ ಜ್ಞಾನ ಬರುತ್ತದೆ. ಅಲ್ಲಿ ವಿಜ್ಞಾನಮಯ ಎಂದು ಇರುತ್ತಾನೆ.

೧೨. ಆನಂದಮಯ : ಈ ಪದಾರ್ಥಗಳಿಂದ ಆನಂದಮಯನಾಗಿ ಆನಂದವನ್ನು ಕೊಡುತ್ತಾನೆ.

ಮಯ ಎಂದರೆ ಪ್ರಾಚುರ್ಯ ಎಂದು ಅರ್ಥ. ಇದಕ್ಕೆ ಇನ್ನೂ ಅನೇಕ ಅರ್ಥಗಳಿವೆ. ನಮಗೆ ತಿಳಿದಷ್ಟನ್ನು ಇಲ್ಲಿ ಹೇಳಲಾಗಿರುತ್ತದೆ. ಇಷ್ಟು ಮಾಡಿದರೂ ಸಾಧನ ಪಥದಲ್ಲಿ ಒಂದು ಹೆಜ್ಜೆ ಇಟ್ಟಂತೆ ಆಗುತ್ತದೆ.

೧೩. ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ಬೃಹತೀ ಸಹಸ್ರಾಖ್ಯ ನಾಮಕ ನರಸಿಂಹ ನಿನ್ನ ಪ್ರಸಾದ ಎಂದು ಹೇಳಬೇಕು.

**ಗಂಡಸರು ಹೇಳುವುದು**

೧೪. ಅಹಂ ವೈಶ್ವಾನರೋಭೂತ್ವಾ
ಪ್ರಾಣಿನಾಂ ದೇಹಮಾಸ್ಥಿತಃ
ಪ್ರಾಣಾಪಾನ ಸಮಾಯುಕ್ತಃ
ಪಚಾಮ್ಯನ್ನಂ ಚತುರ್ವಿಧಂ

**ಹೆಂಗಸರು ಹೇಳುವುದು**

ವೈಶ್ವಾನರ ಪೆಸರಿಂ ನಾಂ
ಪ್ರಾಣಿಗಳ ದೇಹದೊಳಗಿದ್ದು
ಪ್ರಾಣಾಪಾನರಿಂದೊಡಗೂಡಿ
ಚತುರವಿಧಾನ್ನಗಳ ಪಚನಗೈವೆಂ

೧೫. ಈ ವನಜಜಾಂಡದೊಳುಳ್ಳ ಅಖಿಲ ಚೇತನರು ಭುಂಜಿಪ ಚತುರವಿಧ ಪದಾರ್ಥಗಳಿಗೆ ಚತುರ ರಸ ರೂಪ ತಾನಾಗಿ ಮನಕೆ ಬಂದುದ ಉಂಡುಣಿಸಿ, ಕರಣಕಾನಂದ ಸಂಹನಕುಪಚಯ ಅನಿಮಿಷರಿಗೆ ಆತ್ಮಸುಖ ಪ್ರದರ್ಶನನೀವ ಹರಿ- **(ಶ್ರೀಹರಿಕಥಾಮೃತಸಾರ).**

೧೬. ಶ್ರೀಮದ್ಭಾಗವತದ ಶ್ಲೋಕ : (ಗಂಡಸರು ಹೇಳುವುದು)
ಮಲ್ಲಾನಾಂ ಅಶನಿಃ ನೃಣಾಂನರವರಃ ಸ್ತ್ರೀಣಾಂ
ಸ್ಮರೋಮೂರ್ತಿಮಾನ್ ಗೋಪಾನಾಂ ಸ್ವಜನಃ
ಅಸತಾಂ ಕ್ಷಿತಿಭೃತಾಂ ಶಾಸ್ತಾ ಸ್ವಪಿತ್ರೇ ಶಿಶುಃ
ಮೃತ್ಯುರ್ಭೋಜಪತೇಃ ವಿಧಾತ್ಮಸ್ತತ್ವ ವರಯೋಗಿನಾಂ
ವೃಷ್ಣೀನಾಂ ಪತಿಂ ಸದೈವ ಸಾಗ್ರಜಃ ಅಚ್ಯುತಃ ರಂಗೇ ಶುಶುಭೇ ॥

(ಹೆಂಗಸರು ಹೇಳುವುದು)

ಮಲ್ಲರ್ಗೇ ಶಿಡಿಲುಂ ಮೇಣ್ ನರರ್ಗೆ ದೊರೆಯುಂ
ಸ್ತ್ರೀಯರ್ಗೆ ಮಾರನುಂ ಗೋಪರ್ಗೆ ಸ್ವಜನಮುಂ
ಅಸಜ್ಜನರ್ಗೆ ವಜ್ರಮುಂ, ಸ್ವಪಿತರ್ಗೆ ಶಿಶುವುಂ
ಭೋಜಪತಿಗೆ ಮೃತ್ಯುವುಂ ಯೋಗಿಗಳ್ಗೆ ಪರತತ್ವ ಬ್ರಹ್ಮನುಂ
ವೃಷ್ಣಿಗಳ್ಗೆ ದೈವಸ್ವಾಮಿಯ ತೆರದಿ ತೋರಿದಂ
ರಂಗದೋಳ್ ಸಾಗ್ರಜನಚ್ಯುತಂ

ಶ್ರೀಮದ್ಭಾಗವತ ದಶಮಸ್ಕಂಧ ಪೂರ್ವಾರ್ಧದಲ್ಲಿ ಈ ಒಂದು ಶ್ಲೋಕ ಶ್ರೀಕೃಷ್ಣ ಬಲರಾಮರು ಮಧುರೆಗೆ ಬಂದು ಕಂಸನ ಸಂಹಾರ ಮಾಡುವ ಪ್ರಸಂಗದಲ್ಲಿ ಯಾರಾರಿಗೆ ಹೇಗೆ ಕಾಣಿಸಿದರು ಎಂದು

ವರ್ಣಿಸುತ್ತಾರೆ. ಇದನ್ನು ಅರ್ಥ ಮಾಡಿಕೊಂಡು ಹೇಳಿದರೆ ನಾವೂ ಸಹ ಶ್ರೀಕೃಷ್ಣಬಲರಾಮರ ಜೊತೆಯಲ್ಲೇ ಇದ್ದಂತಾಗುತ್ತದೆ.

ಊಟ ಮಾಡುವ ರೀತಿ ಹಿಂದೆ ಹೇಳಿದೆ. ಅದು ಇಲ್ಲಿಗೂ ಅನ್ವಯಿಸುತ್ತದೆ ಈ ೧೬ನ್ನು ಇಷ್ಟು ಹೇಳಿ ಊಟ ಪ್ರಾರಂಭಿಸುವುದಕ್ಕೆ ಎರಡು ನಿಮಿಷವಾಗುತ್ತದೆ. ಅಷ್ಟು ಹೊತ್ತಿಗೆ ಹುಳಿ ಬಂದು ಹೊರಟುಹೋಗುತ್ತದೆ. ಪುನಃ ಬರುವುದಿಲ್ಲ. ಅದಕ್ಕೆ ಅನ್ನ ಪಾತಿ ಮಾಡಿ ಹುಳಿಗೆ ಜಾಗ ಮಾಡಿಬಿಡಿ. ಅದರಲ್ಲಿ ಹುಳಿ ಹಾಕಿ ಹೋಗುತ್ತಾರೆ. ಇಬ್ಬರಿಗೂ ತೊಂದರೆ ಇಲ್ಲ. ಊಟ ಮಾಡಿ ಕೈತೊಳೆದು ಆಚಮನ ಮಾಡಿ ತೀರ್ಥ ತೆಗೆದುಕೊಂಡು ಬಂದ ಮೇಲೆ ಒಂದು ನಿಮಿಷ ಸ್ವಸ್ಥವಾಗಿ ಕುಳಿತು - ಶಯಾತಿರಾಜರು, ಸುಕನ್ಯಾದೇವಿಯವರು, ಚ್ಯವನಋಷಿಗಳು, ಇಂದ್ರದೇವರು, ಅಶ್ವಿನೀ ದೇವತೆಗಳು, ಅಗಸ್ತ್ಯರು ಇವರುಗಳ ಸ್ಮರಣೆಯನ್ನು ಮಾಡಬೇಕು. ಇವರು ಭೋಜನಕಾರ್ಯದ ಸಂಬಂಧವಾದ ಚರಿತ್ರೆ ಉಳ್ಳವರು. ಇವರ ಸ್ಮರಣೆಯಿಂದ ಅನೇಕ ಪಾಪಗಳು ನಾಶವಾಗುತ್ತದೆ. ನಮ್ಮ ಹೊಟ್ಟೆ ತುಂಬಿಸಿಕೊಳ್ಳುವುದಕ್ಕೆ ಊಟ ಮಾಡಿದೆವು ಎಂದು ತಿಳಿಯದೆ ಪೂರ್ವೋಕ್ತ ದೇವತೆಗಳ ಮೂಲಕ ವೈಶ್ವಾನರ ಯಜ್ಞವು ನಮ್ಮಲ್ಲಿ ದೇವರು ಮಾಡಿಸಿದರು ಎಂದು ತಿಳಿದು ಹರಿಗೆ ಅರ್ಪಣೆ ಮಾಡಿದರೆ ನಿಷ್ಕಾಮ ಕರ್ಮಕ್ಕೆ ದಾರಿಯಾಗಿ, ಸಂಸಾರ ಬಿಡುಗಡೆಗೆ ದಾರಿಯಾಗುತ್ತದೆ.

ಊಟದ ಎಲೆಯಲ್ಲಿ ನಾವು ಊಟ ಮಾಡುವಾಗ ತುಪ್ಪ, ಪಾಯಸ ಎರಡನ್ನು ಬಿಟ್ಟು ಉಳಿದ ಎಲ್ಲಾ ಪದಾರ್ಥಗಳಲ್ಲೂ ಒಂದು ಸ್ವಲ್ಪ ಭಾಗ ಎಲೆಯಲ್ಲಿ ಉಳಿಸಬೇಕು. ಎಲ್ಲಾ ಖಾಲಿ ಮಾಡಿ ಎಲೆ ನೆಕ್ಕಬಾರದು. ಉಳಿದ ಪದಾರ್ಥ ಹೊರಗಡೆ ಎಲೆ ಬಿಸಾಕುವಾಗ ಅಲ್ಲಿ ನಾಯಿ, ಕಾಗೆ, ಮುಂತಾದ ಪ್ರಾಣಿಗಳು ಆ ಎಂಜಲನ್ನು ತಿನ್ನಬೇಕು. ಇದರಿಂದ ಆ ಪ್ರಾಣಿಗಳು ಉದ್ಧಾರವಾಗುತ್ತವೆ. ನಮಗೆ ಪುಣ್ಯ ಬರುತ್ತದೆ. ಉತ್ತರಾಪೋಷಣ ತೆಗೆದುಕೊಂಡು ಅದೇ ಕೈಯಿಂದ ಎಂಜಲೆಲೆಯನ್ನು ಮುಟ್ಟಬಾರದು. ಕೈ ತೊಳೆಯದೇ ಬಾಯಿ ಮುಕ್ಕಳಿಸಬಾರದು. ಇಲ್ಲದಿದ್ದರೆ ಎಂಜಲು ತಿಂದಂತಾಗುತ್ತದೆ. ಊಟವಾದ ಕೂಡಲೇ ಎಲೆ ತಟ್ಟೆ ಎತ್ತಿ ಎಂಜಲು ಗೋಮ ಮಾಡಬೇಕು. ಇಲ್ಲದಿದ್ದರೆ ಊಟ ಮಾಡಿದವರಿಗೆ ತಿಂದ ಅನ್ನ ಮೈಗೆ ಪುಷ್ಟಿ ಕೊಡುವುದಿಲ್ಲ.

## ಅಡಿಗೆ ಮಾಡುವವರು ಯಾರು?

ಅಕ್ಕಿ, ಬೇಳೆ, ತರಕಾರಿ ಇತ್ಯಾದಿ ಪದಾರ್ಥಗಳು ಪಾತ್ರೆ, ಒಲೆ, ಬೆಂಕಿ, ನೀರು, ಅಡಿಗೆಮನೆ, ಅಡಿಗೆ ಮಾಡುವವರು ಇಷ್ಟೆಲ್ಲಾ ಇದ್ದರೂ, ಅಡಿಗೆ ಪದಾರ್ಥಗಳು ಹೇಗೆ ಭೋಜ್ಯ ಪದಾರ್ಥಗಳಾಯಿತು.

ಅಕ್ಕಿಯೇ ಅನ್ನ ಮಾಡಿಕೊಂಡಿತು, ಬೇಳೆ ತರಕಾರಿಗಳೇ ಹುಳಿ ಮಾಡಿಕೊಂಡಿತು, ಪಾತ್ರೆ ಮಾಡಿತು, ಬೆಂಕಿ ಮಾಡಿತು, ನೀರು ಮಾಡಿತು ಎಂದರೆ ಇವೆಲ್ಲಾ ಜಡ ಪದಾರ್ಥಗಳು. ತಾವೇ ಸ್ವತಃ ಭೋಜನ ಪದಾರ್ಥಗಳಾಗಿ ಪರಿಣಮಿಸಿದವು ಎಂದರೆ ಜಡಪ್ರಕೃತಿಯೇ ಜಗತ್ತಾಯಿತು ಎಂಬ ಪರಿಣಾಮವಾದದ ಅಭಿಪ್ರಾಯ ಬರುತ್ತದೆ. ಹಾಲು ತಾನೇ ಮೊಸರು ಆಯಿತು ಅಂದಂತೆ ಹಾಲಿಗೆ ಹೆಪ್ಪು ಹಾಕುವ ತನಕ ಅದು ಮೊಸರು ಆಗಲಾರದು. ಅಂದರೆ ಜಡಕ್ಕೆ ಸ್ವತಃ ಪ್ರವೃತ್ತಿ ಇಲ್ಲವಾದ್ದರಿಂದ ಚೇತನದ ಸಂಬಂಧವಾಗದ ಹೊರತು ಅದು ಪರಿಣಾಮವಾಗಲಾರದು. ಅಲ್ಲಿಗೆ ಹೆಪ್ಪು ಹಾಕುವವನು ಒಬ್ಬ ಬೇಕು. ಹಾಗೆಯೇ ಅಡಿಗೆ ಮಾಡುವವನು ಒಬ್ಬ ಬೇಕು ಅಂತ ಆಯಿತು. ಅಡಿಗೆ ಮಾಡುವವನು ಅಂದರೆ ಅಡಿಗೆ ಮಾಡುವವನ ದೇಹವೋ ಅಥವಾ ಚೇತನವೋ (ಜೀವ) ಅಂದರೆ ದೇಹವು ಜಡ, ಅದಕ್ಕೆ ಸ್ವತಃ ಪ್ರವೃತ್ತಿ ಇಲ್ಲ. ಒಳಗೆ ಜೀವ ಇರುವುದರಿಂದ ಚಲನಾದಿ ಕ್ರಿಯೆಗಳು ನಡೆದು ಅಡಿಗೆ ಆಯಿತು ಅಂತ ತೋರುತ್ತೆ. ಆದರೆ ಆ ಜೀವ ಸ್ವತಂತ್ರನೋ ಎಂದರೆ ಅಲ್ಲ, ಅವನು ಪರಾಧೀನಕರ್ತನಾದ್ದರಿಂದ ಇನ್ನೊಬ್ಬ ಪ್ರೇರಕ ಬೇಕೇ ಬೇಕು. ಅವನೇ ಸ್ವತಂತ್ರ ಕರ್ತನಾದ ಶ್ರೀಹರಿ.

**ಮಹಾತಾತ್ಪರ್ಯ**

ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತಿ ಪ್ರಬೋಧಯನ್ ಏಕಏವ ಮಹಾಶಕ್ತಿಃ ಕುರುತೇ ಸರ್ವಮಂಜಸ" ಎಂಬಂತೆ ಅಸಂಸ್ಪೃಷ್ಟಗಳಾದ ಉಗ್ರಾಣದ ಅಕ್ಕಿ, ಬೇಳೆ, ತರಕಾರಿಗಳು, "ಸಂಸೃಷ್ಟಂ ಅಂಡತದ್ಗಂಚ" ಎಂಬಂತೆ ಅಡಿಗೆ ಮನೆಯೂ ಅಡಿಗೆ ಮಾಡುವವನೂ, ಅಡಿಗೆ ಪದಾರ್ಥಗಳೂ, ಪಾತ್ರೆ, ಬೆಂಕಿ, ನೀರು ಅಡಿಗೆ ಪದಾರ್ಥಗಳ ಸಮ್ಮೇಳನ ಮತ್ತು ಅಡಿಗೆ ಮಾಡುವ ಪಚನ ಕ್ರಮ - ಇತ್ಯಾದಿಗಳಲ್ಲೆಲ್ಲಾ ಅದರ ಸ್ವಭಾವದಂತೆ ಪ್ರಚೋದನೆ ಮತ್ತು ಪರಿಣಾಮ ಮಾಡಿಸಿ ಭೋಜನ ಪದಾರ್ಥಗಳಾಗಿ ಪರಿಣಾಮ ಹೊಂದುತ್ತವೆ. "ಸ್ವತಂತ್ರಕರ್ತ ಹರಿರೇವ ಜೀವೋಽಪಿ ಕರ್ತ" ಎಂಬಂತೆ ಶ್ರೀಹರಿಯು ವಾಯುದೇವರು ಮತ್ತು ತತ್ತೇಶ ದೇವತೆಗಳ ಮೂಲಕ ನಿಮಿತ್ತಕ್ಕೆ ಅಡಿಗೆ ಮಾಡುವವನ ಮೂಲಕ ಅಡಿಗೆ ಮಾಡಿಸಿದರು ಅಂತ ತಿಳಿಯುವುದೇ ಯಥಾರ್ಥ ಜ್ಞಾನ ಮತ್ತು ಸಾಧನಮಾರ್ಗ.

**ಅದರಲ್ಲಿ ರುಚಿ ಹೇಗೆ ಉಂಟಾಯಿತು ಎಂದರೆ,**

ಭೋಜನ ಮಾಡಿಸುವ ಯಜಮಾನ, ಅಡಿಗೆ ಮಾಡುವನ ಮನಸ್ಸು, ಭೋಜನ ಮಾಡುವವನು ಇವರೆಲ್ಲರ ಮನಸ್ಸು ಮತ್ತು ಕರ್ಮದಂತೆ ಅಲ್ಲಿ ರುಚಿ ಉತ್ಪತ್ತಿಯಾಗುತ್ತದೆ. ಆ ರುಚಿಯಿಂದ ಆದ ಸುಖವನ್ನು ರತಿದೇವಿ ಅಂತರ್ಯಾಮಿ ವಿಶ್ವನಾಮಕ ಹರಿಗೆ ಅರ್ಪಿಸಬೇಕು. ಹೀಗೆ ನಿಷಿದ್ಧವಲ್ಲದ ಪದಾರ್ಥಗಳ ಸೇವನೆಯಿಂದ ಉಂಟಾಗುವ ರುಚಿಯನ್ನು ದೇವರಿಗೆ ಅರ್ಪಿಸುವ ಸ್ವಭಾವ ಬೆಳೆಸಿದರೆ ಅದು ಹರಿ ಪೂಜೆಯೇ ಆಗುತ್ತದೆ.

ಅಡಿಗೆ ಪಾತ್ರೆಗೆ ನೀರು ತುಂಬುವಾಗ ಮತ್ತು ಒಲೆಗೆ ಬೆಂಕಿ ಹೊತ್ತಿಸುವಾಗ ನಳಮಹಾರಾಜರ ಮತ್ತು ಭೀಮಸೇನದೇವರ ಸ್ಮರಣೆ ಮಾಡಿ ಅಡಿಗೆ ಕೆಲಸ ಪ್ರಾರಂಭಿಸಬೇಕು. ಹಾಗೆ ಮಾಡಿದರೆ ಅಡಿಗೆಯು ಮತ್ತಷ್ಟು ರುಚಿಯಾಗಿಯೇ ಆಗುತ್ತದೆ.

ಇದರಂತೆ ಎಲ್ಲಾ ಲೌಕಿಕ, ವೈದಿಕ ಕಾರ್ಯಗಳನ್ನು ದೇವರು ತದ್ರೂಪ ತನ್ನಾಮ ತತ್ತೇಜ ತದ್ಭಿನ್ನ ಶ್ರೀನಿವಾಸನು ಮಾಡಿ ಮಾಡಿಸಿದನು ಎಂದು ಚಿಂತಿಸಿದರೆ ಸರಿಯಾಗಿ ತಿಳಿದುಕೊಂಡಂತೆ ಆಯಿತು.

## ಚುಟುಕೇಶ್ವರ

ಚುಟುಕೇಶ್ವರ ಎಂದರೆ ಚುರುಕು ಮುಟ್ಟಿಸುವುದು ಎಂದು ಅರ್ಥ. ಗೊತ್ತಾಯಿತೇ?

ವಿಶೇಷವಾಗಿ ಮಡಿ, ನೇಮ, ನಿಷ್ಠೆ, ಜಪ, ತಪ, ಪಾರಾಯಣ, ಪಾಠ ಪ್ರವಚನ ಎಲ್ಲಾ ಮಾಡಿದರೂ ಸಹ ನಾನೇ ಮಾಡಿದೆ ಎಂಬ 'ಅಹಂ' ಬಾವ ಇದ್ದರೆ ಅಷ್ಟು ಮಾಡಿದ ಸಾಧನೆಗಳೆಲ್ಲಾ ವ್ಯರ್ಥ. ದೇವರು ನನ್ನಲ್ಲಿ ಮಾಡಿಸಿದ ಎಂದುತಿಳಿದುಕೊಳ್ಳುವುದು ಸರಿಯಾದ ಕ್ರಮ. ಇದರ ಜೊತೆಗೆ ದಯಾಗುಣ, ಉದಾರ ಬುದ್ಧಿ, ಉಪಕಾರ ಮಾಡುವ ಬುದ್ಧಿ, ಇಲ್ಲದೇ, ಕೇವಲ ಹೆಸರು ಸಂಪಾದಿಸುವುದು, ಹಣ ಸಂಪಾದಿಸುವುದು ಮುಂತಾದ ಗುಣಗಳಿಂದಲೇ ಇವು ನಮ್ಮ ಎಲ್ಲಾ ಗುಣಗಳಿಗೂ ಮಸಿ ಬಳಿದಂತಾಗಿ, ಗೌರವ ಕಳೆದುಕೊಳ್ಳಬೇಕಾಗುತ್ತದೆ.

ಆದುದರಿಂದ ಒಳ್ಳೆಯ ಗುಣಗಳನ್ನು ಒಳಗೆ ಬೆಳೆಸಿಕೊಂಡು ಶ್ರೀಹರಿವಾಯುಗುರುಗಳ ಕೃಪೆಗೆ ಪಾತ್ರರಾಗಿರಿ.

# ದೇವರ ಪೂಜಾ ಪ್ರಕರಣ

ದೇವರ ಪೂಜೆ ರೀತಿ ತಿಳಿಸಿಕೊಡುವ ಪುಸ್ತಕಗಳು ಬಹಳ ಇವೆ. ಆದ್ದರಿಂದ ಇಲ್ಲಿ ಅದನ್ನು ತಿಳಿಸುವುದಿಲ್ಲ. ದೇವರ ಪೂಜೆ ಮಾಡುವಾಗ ಅಲ್ಲಿ ಭಗವದ್ರೂಪಗಳ ಚಿಂತನೆಗಳನ್ನು, ಅನುಸಂಧಾನಗಳನ್ನು ಸಂಕ್ಷಿಪ್ತವಾಗಿ ತಿಳಿಸುವುದೇ ಅಭಿಪ್ರಾಯವಾಗಿದೆ.

**ತುಳಸೀ ಸಂಗ್ರಹ**

**ತುಳಸಿಯನ್ನು ಯಾವ ರೀತಿಯಲ್ಲಿ ಸಂಗ್ರಹ ಮಾಡಬಾರದು.**

"ತುಳಸಿ ಕಿತ್ತುಕೊಂಡು ಬರುವುದು" ಎಂಬ ಶಬ್ದ ಪ್ರಯೋಗ ಮಾಡಬಾರದು - "ಬಿಡಿಸಿಕೊಂಡು ಬರುವುದು" ಎಂದು ಹೇಳಬೇಕು. ಚಡ್ಡಿ, ಕಾಚಾ, ಶರಟು ಧರಿಸಿ, ಚಪ್ಪಲಿ(ಪಾದರಕ್ಷೆ) ಧರಿಸಿಕೊಂಡು, ಮುಖ ತೊಳೆಯದೆ, ಸ್ನಾನ ಮಾಡದೆ, ತುಳಸಿ ಬಿಡಿಸಬಾರದು. ತುಳಸಿಯನ್ನು ಬಿಡಿಸಿ, ಪ್ಲಾಸ್ಟಿಕ್ ಚೀಲದಲ್ಲಿ- ಜೇಬಿನಲ್ಲಿ- ಸ್ಟೀಲ್ ಪಾತ್ರೆಯಲ್ಲಿ- ಹರಳೀ ಎಲೆಯಲ್ಲಿ - ಕಾಗದದಲ್ಲಿ - ಅಂಗೈಯ್ಯಲ್ಲಿ - ಹೂವಿನ ಜೊತೆಯಲ್ಲಿ ತುಂಬಿಕೊಂಡು ಬರಬಾರದು. ತುಳಸಿಗಿಡಕ್ಕೆ ಬುಡದಲ್ಲಿ ನೀರು ಹಾಕದೆ ಬಿಡಿಸಬಾರದು- ತುಳಸಿಗೆ ನೀರು ಹಾಕಿ ತೊಳೆಯಬಾರದು. ಮುಂಜಿ ಆಗದ ಹುಡುಗರು - ಸ್ತ್ರೀಯರು - ಹೆಣ್ಣುಮಕ್ಕಳು - ಶೂದ್ರರಿಂದ ತುಳಸಿ ಬಿಡಿಸಿ ತರಿಸಬಾರದು. ಮಾರ್ಕೆಟ್‌ನಿಂದ ತುಳಸಿ ಕೊಂಡುಕೊಂಡು ಬರಬಾರದು. ಇನ್ನೊಬ್ಬರ ಮನೆಗೆ ಹೋಗಿ ತುಳಸಿ ಬಿಡಿಸಬೇಕಾದರೆ, ಅವರನ್ನು ಕೇಳಿ ಬಿಡಿಸಬೇಕು. ಕೇಳದೇ ಹಾಗೆ ಬಿಡಿಸಿದರೆ ಅದು ಕಳ್ಳತನವಾಗುತ್ತದೆ.- ಅವರ ಮನೆಯವರಿಗೆ ಮತ್ತು ಇನ್ಯಾರಾದರೂ ಬಿಡಿಸಿಕೊಳ್ಳುವವರಿಗೆ ಸ್ವಲ್ಪ ಉಳಿಸಿ, ಸ್ವಲ್ಪ ಸಂಗ್ರಹ ಮಾಡಬೇಕು. ತುಳಸಿ ತರಿಯಬಾರದು - ಎಳೆದು ಕೀಳಬಾರದು - ಉಗುರಿನಿಂದ ಚಿವುಟಬಾರದು. ಮಧ್ಯಾಹ್ನ ೧೨ ಘಂಟೆ ಮೇಲೆ ಬಿಡಿಸಬಾರದು. ಭಾನುವಾರ, ಮಂಗಳವಾರ, ಶುಕ್ರವಾರ, ದ್ವಾದಶಿ, ಅಮಾವಾಸ್ಯೆ, ಪೂರ್ಣಿಮೆ, ವೈಧೃತಿ, ವ್ಯತೀಪಾತ, ಸಂಕ್ರಮಣಗಳಂದು ತುಳಸಿ ಬಿಡಿಸಬಾರದು. ಶ್ರಾದ್ಧ ಮಾಡುವ ಕರ್ತೃಗಳು ಶ್ರಾದ್ಧದ ದಿವಸ ತುಳಸಿ ಬಿಡಿಸಬಾರದು, ಬೇರೆಯವರಿಂದ ಬಿಡಿಸಿ ತರಿಸಬೇಕು. ಇಲ್ಲದಿದ್ದರೆ ಹಿಂದಿನ ದಿವಸ ಸಂಗ್ರಹಿಸಬೇಕು.

**ತುಳಸಿ ಸಂಗ್ರಹ ಮಾಡುವ ಕ್ರಮ**

ಸ್ನಾನ ಮಾಡಿ ತುಳಸಿ ಬಿಡಿಸುವುದು ಬಹಳ ಉತ್ತಮ. ಮತ್ತು ಸಂದರ್ಭಗಳ ನಿಮಿತ್ತದಿಂದ ಸ್ನಾನಕ್ಕೆ ಮುಂಚೆ ಬಿಡಿಸಬೇಕಾದರೆ - ಮೃತ್ತಿಕಾಶೌಚ-ಮುಖಪ್ರಕ್ಷಾಳನದ ನಂತರ ತುಳಸಿ ವಂದನ - ತುಳಸಿ ಮೃತ್ತಿಕಾಧಾರಣ ಮಾಡಿ, ಒಗೆದ ಶುದ್ಧ ವಸ್ತ್ರವನ್ನು ಧರಿಸಿ, ಬ್ರಹ್ಮಚಾರಿಯಾದರೆ ಕೌಪೀನ ಧರಿಸಿ, ಗೃಹಸ್ಥನಾದರೆ ಕಚ್ಚೆಯನ್ನು ಹಾಕಿಕೊಂಡು ಬಿಡಿಸಬೇಕು. ಇದು ಅತ್ಯಾವಶ್ಯಕ. ಯಾವುದನ್ನು ಮಾಡಬಾರದು ಅಂತ ತಿಳಿಸಿದೆಯೋ, ಅದನ್ನು ಮಾಡದೆ, ಮಾಡಬೇಕಾದ ನಿಯಮಗಳು ಯಾವುದು ಎಂದು ಹೇಳಿದೆಯೋ ಅದನ್ನು ಅನುಸರಿಸುವುದು ಯಾವತ್ತೂ ಕ್ಷೇಮ. ಏಕಾದಶಿ ದಿವಸ ವಾರ, ಯೋಗ, ಅಪರಾಹ್ನ (೧೨ಗಂಟೆಮೇಲೆ) ಯಾವುದನ್ನೂ ನೋಡಬೇಕಾಗಿಲ್ಲ. ಸಾಯಂಕಾಲದೊಳಗೆ ತುಳಸಿ ಬಿಡಿಸಬಹುದು. "ತುಳಸಿ ನಾಲ್ಕು ದಳ ಅದರ ಮಧ್ಯೆ ಒಂದು ಅಂಕುರ ಇದ್ದರೆ ಅದಕ್ಕೆ 'ತುಳಸಿ ಮಂಜರಿ' ಎಂದು ಹೆಸರು". ಇದು ಬಹಳ ಶ್ರೇಷ್ಠವಾದುದು. "ತುಳಸಿ ಇಲ್ಲದಿದ್ದರೆ ಕಾಷ್ಠ, ಎಲೆ, ಮೃತ್ತಿಕೆಗಳಿಂದಲೂ ಪೂಜೆ ಮಾಡಬಹುದು". ಹಿಂದಿನದಿನ ಪೂಜೆ ಮಾಡಿದ ತುಳಸಿ ನಿರ್ಮಾಲ್ಯವನ್ನು ತೊಳೆದು, ತ್ರಿವಾರದಲ್ಲಿ (೩ ದಿವಸ) ಪೂಜೆ ಮಾಡಲಿಬಹುದು. ಇಲ್ಲದಿದ್ದರೆ "ತುಳಸಿ ತುಳಸಿ ಎಂದು ಕೂಗಿರಯ್ಯ ; ತುಳಸಿ ಇಲ್ಲದ ಪೂಜೆಯದು ಸಲ್ಲದು" - (ಶ್ರೀ ವಿಜಯದಾಸರ ವಾಣಿ).

ದೇವರಿಗೆ ಹಿಂದಿನ ದಿವಸ ಪೂಜೆ ಮಾಡಿದ ತುಳಸಿಯನ್ನು ನೀರಿನಿಂದ ತೊಳೆದು ಮೂರು ದಿವಸ ಪೂಜೆ ಮಾಡಲಿಬಹುದು. ಇದು ಅಭಾವಕ್ಕೆ ಮಾತ್ರ. ಯಾವಾಗಲೂ ಅಲ್ಲ. ಪೂಜೆ ಮಾಡುವುದಕ್ಕೆ ಮುಂಚೆ ತಂದ ತುಳಸಿಗೆ ಮಾತ್ರ ನೀರು ಹಾಕಬಾರದು. ಪೂರ್ವ ಅಥವಾ ಉತ್ತರ ದಿಕ್ಕುಗಳ ಕಡೆಗೆ ನಿಂತುಕೊಂಡು ಬಿಡಿಸಬೇಕು.

ಬೆಳ್ಳಿ ಬಂಗಾರಗಳಿಂದ ತುಳಸಿ ದಳವನ್ನು ಮಾಡಿಸಿ ಪೂಜೆ ಮಾಡಬಹುದು. ತುಳಸಿಯ ಅಭಾವವಿದ್ದಲ್ಲಿ ದೇವರ ನೈವೇದ್ಯಕ್ಕೆ ಇಟ್ಟಿದ್ದ ಪದಾರ್ಥಗಳಲ್ಲಿ ಅನ್ನದ ಮೇಲೆ ಮಾತ್ರ ತುಳಸಿ ಹಾಕಿ, ಉಳಿದದ್ದನ್ನು ಮನಸಾ ಚಿಂತಿಸುವುದು.

ತುಳಸಿ ಬಿಡಿಸುವಾಗ ಈ ಮಂತ್ರವನ್ನು ಹೇಳಿ ಬಿಡಿಸಬೇಕು - "ತುಳಸೀಯಮೃತ ಜನ್ಮಾಸೀ ಸದಾತ್ವಂ ಕೇಶವಪ್ರಿಯೆ । ಕೇಶವಾರ್ಥಂ ಲುನಾಮಿತ್ವಾಂ ವರದಾ ಭವಶೋಭನೇ ॥

## ದೇವರ ಪೂಜಾಕ್ರಮ

### ಘಂಟಾನಾದ

ಅಸುರರನ್ನು ಓಡಿಸಿ, ದೇವತೆಗಳನ್ನು ಆಹ್ವಾನಿಸುವುದಕ್ಕೆ ಕಂಚಿನ ಘಂಟೆಯನ್ನು ಬಾರಿಸಬೇಕು. ಇಲ್ಲದಿದ್ದರೆ ಅಲ್ಲಿ ದೇವತೆಗಳು ಬರದೆ, ರಾಕ್ಷಸರು, ಪಿಶಾಚಿಗಳು ಸೇರುತ್ತಾರೆ. ಘಂಟೆಯ ಮೇಲೆ ಪ್ರಾಣದೇವರ ಪ್ರತೀಕದಲ್ಲಿ ಬ್ರಹ್ಮದೇವರನ್ನು, ಅವರ ಪಾದದ ಬುಡದಲ್ಲಿ ರುದ್ರದೇವರನ್ನು - ನಾದದಲ್ಲಿ ಸರಸ್ವತೀ ದೇವಿಯವರನ್ನು - ನಾಳದಲ್ಲಿ ಶೇಷದೇವರನ್ನು ಚಿಂತಿಸಬೇಕು.

### ನಂದಾದೀಪ

ನಂದಾದೀಪ ಎಂದರೆ "ನಂದದ ದೀಪ" ಅಂದರೆ ಆರದೆ ಇರುವ ದೀಪ ಎಂದು ಹೆಸರು. ಮದುವೆಯ ಕಾಲದಲ್ಲಿ ಒಂದು ಅಗ್ನಿ ಪ್ರತಿಷ್ಠಾಪನೆ ಮಾಡಿರುತ್ತಾರೆ. ಅದನ್ನು ಆಜೀವ ಪರ್ಯಂತ ಆರದಂತೆ ರಕ್ಷಿಸಿಕೊಂಡು ಬರಬೇಕು. ಇದು ಅವರ ಅಂತ್ಯದಲ್ಲಿ ಉಪಯೋಗಿಸಬೇಕಾಗುತ್ತದೆ. ಇದಕ್ಕೆ ಧಾರ್ಯಾಗ್ನಿ ಎಂದು ಹೆಸರು. ಅದು ಈಗ ಮಾಯವಾಗಿ ಹೋಗಿದೆ. ಅದರ ಬದಲು ಅದರ ಸ್ಥಾನದಲ್ಲಿ ನಂದಾದೀಪ ಉಳಿದುಕೊಂಡಿದೆ. ಅಂದರೆ ಒಂದು ದೀಪ - ಹತ್ತು ತಲೆಗಳನ್ನು ರಕ್ಷಣೆ ಮಾಡುತ್ತದೆ ಎಂದು ಅದರ ಅಭಿಪ್ರಾಯ. ಆದ್ದರಿಂದ ಯಾವಾಗಲೂ ದೇವರ ಮನೆಯಲ್ಲಿ ನಂದಾದೀಪ ಉರಿಯುತ್ತಿರಬೇಕು. ಅದನ್ನು ಆರದ ಹಾಗೆ ಸಾಧ್ಯವಾದಷ್ಟು ನೋಡಿಕೊಳ್ಳಬೇಕು. ಅಕಸ್ಮಾತ್ ಆರಿಹೋದರೆ ತಕ್ಷಣ ಹಚ್ಚಬೇಕು. ತಿರುಪತಿಯಲ್ಲಿ ಬ್ರಹ್ಮದೇವರು ಹಚ್ಚಿದ ದೀಪ ಇಂದಿಗೂ ಉರಿಯುತ್ತಿದೆ. ಆ ದೀಪ ಶಾಂತವಾಯಿತೆಂದರೆ ದೇವರ ಮಹಿಮೆ ಆಚ್ಛಾದಿತವಾಗುತ್ತದೆ. (ಶ್ರೀನಿವಾಸ ಕಲ್ಯಾಣದ ಪುರಾಣದ ಆಧಾರ).

### ದೀಪ ಇಲ್ಲದೆ ದೇವರ ಮನೆಗೆ ಪ್ರವೇಶ ಮಾಡಬಾರದು

ರಾತ್ರಿ ಹಚ್ಚಿದ ದೀಪ ಬೆಳಿಗ್ಗೆ ಉರಿಯುತ್ತಿದ್ದರೆ (ಬದರಿ ಕ್ಷೇತ್ರದಲ್ಲಿ ಅಕ್ಷಯತೃತೀಯ ದಿವಸ ದೇವರ ದರ್ಶನ ಮಾಡುವುದಕ್ಕೆ ಹೋಗುತ್ತಾರೆ. ಇದು ಆರು ತಿಂಗಳ ಹಿಂದೆ ಹಚ್ಚಿದ್ದ ದೀಪ. ಅವತ್ತು ದರುಶನವಾಗುತ್ತದೆ - ಇದನ್ನು ಚಿಂತನೆ ಮಾಡುವುದು). ದೀಪ ಆರಿಹೋಗಿದ್ದರೆ ಬೇರೆ ದೀಪ ಹಿಡಿದುಕೊಂಡು ದೇವರಮನೆಗೆ ಪ್ರವೇಶ ಮಾಡಬೇಕು. ದೀಪ ಹಚ್ಚುವಾಗ ಈ ರೀತಿ ಚಿಂತನೆ ಮಾಡಬೇಕು - "ಮಧ್ಯತಾಳಮಠ ಎಂಬ ಒಂದು ಕ್ಷೇತ್ರವಿದೆ. ಅಲ್ಲಿ ವ್ಯಾಸಮುಷ್ಠಿಗಳೆಂಬ ದೇವರ ಸನ್ನಿಧಾನವಾದ ಶಿಲಾಗಳು ಇವೆ. ಇದನ್ನು ಶ್ರೀವಾದಿರಾಜಸ್ವಾಮಿಗಳವರು ತೀರ್ಥಪ್ರಬಂಧದಲ್ಲಿ ಹೀಗೆ ವರ್ಣಿಸುತ್ತಾರೆ - ಮಧ್ಯತಾಳಮಠವೆಂಬುವುದೇ ಬಂಗಾರದ ದೀಪಸ್ತಂಭ. ಎಣ್ಣೆಬತ್ತಿಯೇ

ಶ್ರೀಮನ್ಮಧ್ವಾಚಾರ್ಯರ ಹೃದಯ. ದೀಪ ಎಂಬುವುದೇ ಶ್ರೀವೇದವ್ಯಾಸ ದೇವರು. ಇದರಿಂದ ಒಳಗಿನ ಮತ್ತು ಹೊರಗಿನ ಎರಡು ಕತ್ತಲೆಗಳು ಹೋಗುತ್ತವೆ.

## ಬ್ರಹ್ಮಪಾರಸ್ತೋತ್ರ

ಇದನ್ನು ಪಠಿಸುವುದರಿಂದ ಮನಸ್ಸಿನಲ್ಲಿ ಬಂದ ರಾಗಾದಿದೋಷಗಳನ್ನು ಪರಿಹಾರ ಮಾಡುತ್ತದೆ. ಪರಸ್ತ್ರೀಯರನ್ನು ನೋಡಿದಾಗ ಏನಾದರೂ ಕೆಟ್ಟ ಮನಸ್ಸಿನಿಂದ ನೋಡಿದ್ದರೆ ಆ ಪಾಪವೂ ಹೋಗುತ್ತದೆ. ಹಾಗೆಂದಮಾತ್ರಕ್ಕೆ ಅದನ್ನೇ ಹವ್ಯಾಸ ಮಾಡಿಕೊಳ್ಳಬಾರದು. ಆದಷ್ಟು ಒಳ್ಳೇ ಮನಸ್ಸಿನಿಂದ ನೋಡುವ ಭಾವ ಬೆಳೆಸಿಕೊಳ್ಳಬೇಕು. ಆ ಸ್ತ್ರೀಯರಲ್ಲಿರುವ ಸೌಂದರ್ಯವನ್ನು ದೇವರು ಇಟ್ಟಿರುವ ಮಹಿಮೆ ಎಂದು ತಿಳಿದು ಆ ಭಗವಂತನ ಮಹಿಮೆಯನ್ನು ಚಿಂತಿಸುವುದು. ಇದರಿಂದ ಕೆಟ್ಟದೃಷ್ಟಿ ದೋಷದ ಪರಿಹಾರ. ಪರಸ್ತ್ರೀಯರ ಸೌಂದರ್ಯವನ್ನು ನೋಡಿದಾಗ ಭಗವಂತನ ಮೋಹಿನಿ ರೂಪ ಚಿಂತನೆ ಮಾಡುವುದು ಮತ್ತು ಮನಸಾ ವಂದಿಸುವುದು.

## ಮಂಟಪ ಧ್ಯಾನ

ಬಂಗಾರದಿಂದ ನಿರ್ಮಿತವಾದ- ಶ್ರೇಷ್ಠವಾದ ನವರತ್ನಗಳಿಂದ ಖಚಿತವಾದ - ಸ್ವಸ್ತಿಕಾದಿ ಚಿಹ್ನಿತವಾದ - ಕಲಶಗಳಿಂದ ಶೋಭಿತವಾದ - ರತ್ನಖಚಿತವಾದ ಸ್ತಂಭಗಳಿಂದ ಅಲಂಕೃತವಾದ - ಶಂಖ,ಚಕ್ರ,ಗದಾ,ತೋರಣಾದಿಗಳಿಂದ ಅಲಂಕೃತವಾದ - ಇಕ್ಷುದಂಡ (ಕಬ್ಬಿನಜಲ್ಲೆ), ಪೂರ್ಣಕುಂಭ, ಕದಳೀವೃಕ್ಷಗಳಿಂದ (ಬಾಳೆಕಂಬ), ಚ್ಯೂತ, ಪನಸಾ(ಮಾವಿನ ಮತ್ತ ಹಲಸುಗಳು) ಫಲಗಳಿಂದ ಅಲಂಕೃತವಾದ - ದ್ವಾರಗಳಲ್ಲಿ ಮುತ್ತಿನ ಗೊಂಚಲುಗಳಿಂದ ಅಲಂಕೃತವಾದ - ಗೀತ, ವಾದ್ಯ, ನೃತ್ಯ, ಪುರಾಣ ಪಠಣಾದಿಗಳಿಂದ ಶೋಭಿತವಾದ - ಲಕ್ಷ್ಮೀಸ್ವರೂಪವಾದ - ಮಹಾಪುಣ್ಯಕರವಾದ, ಮನೋಹರವಾದ ಮಂಟಪವನ್ನು ಧ್ಯಾನಿಸುವುದು. ಈ ಮಂಟಪದ ಮುಂಭಾಗದ ದ್ವಾರದಲ್ಲಿ ಜಯವಿಜಯರನ್ನು, ದಕ್ಷಿಣಭಾಗದ ದ್ವಾರದಲ್ಲಿ ನಂದ-ಸುನಂದರನ್ನು, ಪಶ್ಚಿಮ ದ್ವಾರದ ಭಾಗದಲ್ಲಿ ಕುಮುದ-ಕುಮುದಾಕ್ಷರನ್ನು, ಉತ್ತರದ ಬಾಗಿಲಿನಲ್ಲಿ ಬಲ-ಪ್ರಬಲರೆಂಬ ದ್ವಾರಪಾಲಕರನ್ನು ಚಿಂತಿಸುವುದು. ತಿರುಪತಿ, ಶ್ರೀರಂಗ ಮುಂತಾದ ದೇವಸ್ಥಾನಗಳಲ್ಲಿ ಅಥವಾ ಕೆಲವು ಮಠಗಳಲ್ಲಿ ದೇವರಿಗಾಗಿ ನಿರ್ಮಿಸಿರುವ ನವರತ್ನಮಂಟಪಗಳನ್ನು ಚಿಂತಿಸುವುದು.

## ಕಲಶ ಪೂಜಾ

ಕಲಶಕ್ಕೆ ಗಂಧ ಅಕ್ಷತೆಗಳನ್ನು ಹಚ್ಚಿ ಕಲಶದ ನೀರಿನಲ್ಲಿ ತುಳಸಿದಳ ಮತ್ತು ಹೂವನ್ನು ಹಾಕುವುದು. ಏಕಾದಶೀ ದಿವಸ ಮಾತ್ರ ಗಂಧ ಹೂವು ಯಾವುದೂ ಹಾಕುವಂತಿಲ್ಲ. ಬರೇ ನೀರಿನಲ್ಲಿ ಚಿಂತಿಸುವುದು; ಕಲಶದ ಮುಖದಲ್ಲಿ (ಮೇಲ್ಭಾಗ) ವಿಷ್ಣುವನ್ನು, ಕಂಠದಲ್ಲಿ ರುದ್ರದೇವರನ್ನು - ಮೂಲ(ಬುಡ)ದಲ್ಲಿ ಬ್ರಹ್ಮದೇವರನ್ನು - ಮಧ್ಯದಲ್ಲಿ ಮಾತೃಕಾದೇವತಾಗಣವನ್ನು ಚಿಂತಿಸುವುದು. ನೀರಿನಲ್ಲಿ ಸಪ್ತಸಮುದ್ರಗಳನ್ನು, ಸಾಂಗಸಹಿತವಾದ ಋಗ್‌ಯಜುಸಾಮವೇದಅಥರ್ವಣ ವೇದಗಳು, ಗಂಗಾ,ಯಮುನಾ, ಸಿಂಧು, ಸರಸ್ವತೀ, ಗೋದಾವರೀ, ನರ್ಮದಾ, ಕಾವೇರಿಗಳನ್ನು ಚಿಂತಿಸುವುದು. ಅಜಾದಿ ೫೧ ರೂಪಗಳನ್ನು - ಕೇಶವಾದಿ ೨೪ ರೂಪಗಳನ್ನು - ಆತ್ಮಾದಿ ೪ ರೂಪಗಳನ್ನು ವಾಸುದೇವಾದಿ ೫ ರೂಪಗಳನ್ನು - ವಿಶ್ವಾದಿ ೪ ರೂಪಗಳನ್ನು - ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಭಾರ್ಗವ, ಶ್ರೀರಾಮಚಂದ್ರ, ವೇದವ್ಯಾಸ, ಶ್ರೀಕೃಷ್ಣ, ದತ್ತಾತ್ರೇಯ, ಬುದ್ಧ, ಕಲ್ಕಿ, ಶಿಂಶುಮಾರ, ಒಟ್ಟು ೧೦೧ ರೂಪಗಳನ್ನು ಚಿಂತಿಸುವುದು. ಮನಸಾ ಷೋಡಶೋಪಚಾರ ಪೂಜೆಗಳನ್ನು ಮಾಡುವುದು. ಶ್ರೀ ಬ್ರಹ್ಮಣ್ಯತೀರ್ಥರು ಮತ್ತು ಶ್ರೀ ರಘೋತ್ತಮ ಸ್ವಾಮಿಗಳವರು ಕಲಶ ಪೂಜೆಯಲ್ಲಿ ವಿಶೇಷವಾಗಿ ದೇವರ ಸನ್ನಿಧಾನವನ್ನು ಚಿಂತಿಸಿ, ಪೂಜಿಸುತ್ತಿದ್ದರು. ಅದರ

ಮಹಿಮೆಯನ್ನು ಜನರಿಗೆ ತೋರಿಸಿದ್ದರು. ಆದ್ದರಿಂದ ಈ ಸಮಯದಲ್ಲಿ ಇವರಿಬ್ಬರನ್ನು ಸ್ಮರಿಸಿಕೊಳ್ಳುವುದು ಉಚಿತ.

### ಪೂಜಾ ಪದಾರ್ಥಗಳಲ್ಲಿ ಭಗವದ್ರೂಪಗಳ ಚಿಂತನಾ

| ಪೂಜಾ ಪದಾರ್ಥಗಳು | | ಸಂಖ್ಯಾ ಚಿಂತನ |
|---|---|---|
| ಸಾಲಿಗ್ರಾಮದಲ್ಲಿ | - | ೫೫೩೫ ಭಗವದ್ರೂಪಗಳು |
| ಪ್ರತಿಮಾದಲ್ಲಿ | - | ೫೧೩ ರೂಪಗಳು |
| ಗಂಧದಲ್ಲಿ | - | ೪೦೩ ರೂಪಗಳು |
| ತುಳಸಿಯಲ್ಲಿ | - | ೫೩೧೭ ರೂಪಗಳು |
| ಪುಷ್ಪದಲ್ಲಿ | - | ೧೬೧ ರೂಪಗಳು |
| ದೀಪದಲ್ಲಿ | - | ೧೩ ರೂಪಗಳು |
| ನೀರಿನಲ್ಲಿ | - | ೨೪ರೂಪಗಳು |
| ಉಪಕರಣಗಳಲ್ಲಿ | - | ೫೨,೧೧೪ ರೂಪಗಳು |

### ಪಂಚಾಮೃತ ಪೂಜಾ

ಪಂಚಾಮೃತದಲ್ಲಿ ಹಾಲು ಮೊದಲನೆಯದು - ಹಾಲಿನಿಂದ ಬಂದದ್ದು ಮೊಸರು ತುಪ್ಪಗಳು- ಹಾಲು ಬಂದಿರುವುದು ಹಸುವಿನಿಂದ - ಹಾಲು ಶುದ್ಧವಾಗಿರಬೇಕಾದರೆ ಹಸು ಶುಧ್ಧವಾಗಿರಬೇಕು. ಕೊಂಬಿಲ್ಲದ ಹಸು, ಸತ್ತ ಕರುವಿನ ತಾಯಿಹಸು, ಬೆನ್ನಿನ ಮೇಲೆ ಡುಬ್ಬಿಲ್ಲದ ಹಸು - ಇಂತಹ ಹಸುಗಳ ಹಾಲು ಸ್ವೀಕಾರಕ್ಕೆ ಬರುವುದಿಲ್ಲ. ಆದ್ದರಿಂದ ಕಲಿಯುಗದಲ್ಲಿ ಹಸುಗಳು "ಬಸ್ತಸದೃಶಾಃ" ಅಂದರೆ ಮೇಕೆಯಂತಿರುತ್ತದೆ ಎಂದು ಪುರಾಣ ವಚನ.

ಶುದ್ಧವಾದ ನಾಟಿಹಸುಗಳ ಸಂತತಿ ನಾಶವಾಗಿ, ಯುರೋಪಿಯನ್ ಹಸುಗಳ ಸಂಪರ್ಕದ ಸಾಂಕರ್ಯ ಸಂತತಿ ಬೆಳೆಯುತ್ತಿವೆ ಎಂದರೆ ಹಸುವೇ ಮೊದಲು ಶುದ್ಧಿಯಿಲ್ಲ ಎಂದಮೇಲೆ ಅದರ ಹಾಲು ಹೇಗೆ ಶುದ್ಧಿಗೆ ಬಂದೀತು?

"ಮಾನಸೇ ಚಿಂತಯಾಮಿ" ಎಂಬ ಒಂದು ಪದ ಇಟ್ಟಿದ್ದರಿಂದ ನಾವು ಪಾರಾಗಿದ್ದೇವೆ - "ಮನದೊಳಗೆ ತಾನಿಪ್ಪ ಮನವೆಂದೆನಿಸಿಕೊಂಬನು, ಮನದ ವೃತ್ತಿಗಳ ಅನುಸರಿಸಿ, ಫಲವನೀವನು ತ್ರಿವಿಧಚೇತನಕೆ. ಮನವನಿತ್ತರೆ ತನ್ನನೀವನು - ತನುವ ದಂಡಿಸಿ ದಿನದಿನದಿ ಸಾಧನ ಮಾಳ್ಪರಿಗೀತ್ತಪನು ಸ್ವರ್ಗಾದಿಭೋಗಗಳಮನದೊಳಗೆ ಸುಂದರ ಪದಾರ್ಥ ನಿರ್ಮಿಸಿಕೊಡೆ ತಾ ಸ್ವೀಕರಿಪ"- (ಶ್ರೀಹರಿಕಥಾಮೃತಸಾರ).

ಹಿಂದಿನ ಪ್ರಕಾರ ನೋಡಿದರೆ ಹಾಲನ್ನೇ ಮುಟ್ಟುವಂತಿಲ್ಲ. ಆದರೆ ಅದನ್ನು ಬಿಡುವಂತಿಲ್ಲ. ಅದರಲ್ಲೇ ಪಂಚಾಂಮೃತ, ಕರಿಶಾಮಿಗೆ ಪಾಯಸ, ದೇವರ ನೈವೇದ್ಯ, ಬ್ರಾಹ್ಮಣರ ಭೋಜನ ಎಲ್ಲಾ ನಡೆಯುತ್ತಿದೆ. ಇದಕ್ಕೆ ಏನು ಹೇಳಬೇಕೋ ಗೊತ್ತಾಗುವುದಿಲ್ಲ.

ಅದಕ್ಕೋಸ್ಕರ ಏನು ಮಾಡುವುದು ಎಂದರೆ ಶ್ರೀಹರಿಕಥಾಮೃತಸಾರದಲ್ಲಿ ಹೇಳಿದಂತೆ ಮನಸ್ಸಿನಲ್ಲಿ ಒಂದು ಕರುಸಹಿತವಾದ ಕರೀ ಆಕಳನ್ನು ಸೃಷ್ಟಿ ಮಾಡಿಕೊಂಡು ಆ ಕರು ಕುಡಿದ ಎಂಜಲ ಮೊಲೆಯಿಂದ ಕರೆದಿರುವ ಹಾಲನ್ನು ತಂದು, ಅದರಲ್ಲಿ ಸರಸ್ವತಿ ಅಭಿಮಾನಿದೇವತೆಯನ್ನು ಚಿಂತಿಸಿ, ಅದರಲ್ಲಿ ವಿಷದ ಎಂಬ ೩೫೪ ಭಗವದ್ರೂಪಗಳನ್ನು ಚಿಂತಿಸಿ, ವಿಷ್ಣುವನ್ನು ಚಿಂತಿಸಿ, ಆ ಹಾಲನ್ನು

ಶುದ್ಧಮಾಡಿಕೊಳ್ಳಬೇಕು. ಅದರಿಂದ ಜನ್ಯವಾದ ಮೊಸರು, ತುಪ್ಪ ಇತ್ಯಾದಿಗಳನ್ನು ಮಾನಸಿಕವಾಗಿ ಚಿಂತಿಸಿ, ಅದರಿಂದ ದೇವರಿಗೆ ಅಭಿಷೇಕ ಮಾಡುತ್ತಿದ್ದೇನೆ ಎಂದು ಚಿಂತಿಸುವುದೇ ಉಪಾಯ. ಪಂಚಾಂಮೃತಾಭಿಷೇಕ ಮಾಡುವುದಕ್ಕೆ ಮುಂಚೆ ಆ ಪಂಚಾಂಮೃತದ ಪದಾರ್ಥಗಳಲ್ಲಿರತಕ್ಕಂತಹ ಭಗವದ್ರೂಪಗಳ ಚಿಂತನೆಯನ್ನು ಮಾಡಿ, ನಂತರ ಷೋಡಶೋಪಚಾರಗಳನ್ನು ಮನಸಾ ಚಿಂತನೆ ಮಾಡಿ, ಅಭಿಷೇಕ ಮಾಡುವುದು.

ಈ ಪಂಚಾಮೃತ ಅಭಿಷೇಕ ಮಾಡುವ ವೈಭವವನ್ನು ತಿರುಕೊಯ್ಲೂರಿನಲ್ಲಿ ಶ್ರೀರಘೋತ್ತಮಸ್ವಾಮಿಗಳವರ ಆರಾಧನೆ ಸಮಯದಲ್ಲಿ ಪಂಚಾಮೃತ ಪದಾರ್ಥಗಳನ್ನು ಪೂಜಿಸಿ, ವೈಭವದಿಂದ ತಾಳಮೇಳಗಳ ಸಹಿತವಾಗಿ ಪದಾರ್ಥಗಳನ್ನು ಮೆರವಣಿಗೆ ಮಾಡಿ ತೆಗೆದುಕೊಂಡು ಬಂದು ಪಂಚಾಮೃತಾಭಿಷೇಕ ಮಾಡುತ್ತಾರೆ. ಇದನ್ನು ಸ್ಮರಿಸಿಕೊಳ್ಳುವುದು ಉಚಿತವಾಗಿದೆ.

ಹಾಲಿನಲ್ಲಿ ವಿಷ್ಣುರೂಪವನ್ನು ಚಿಂತನೆ ಮಾಡಬೇಕೆಂದು ಹೇಳಿದ್ದರೂ ಸಹ ಅಭಿಷೇಕ ಮಾಡುವ ಹಾಲಿನಲ್ಲಿ ಗೋವಿಂದನನ್ನು ಚಿಂತನೆ ಮಾಡಬೇಕೆಂದು ಹೇಳುತ್ತಾರೆ.

| ಪದಾರ್ಥ | ಭಗವದ್ರೂಪ | ಪಾಪನಾಶವಾಗುವ ಸಂಖ್ಯಾ |
|---|---|---|
| ನೀರು | ವಾಸುದೇವ | ಹತ್ತು ಪಾಪನಾಶ |
| ಹಾಲು | ಗೋವಿಂದ | ಶತ ಪಾಪನಾಶ |
| ಮೊಸರು | ವಾಮನ | ಸಹಸ್ರ ಪಾಪನಾಶ |
| ತುಪ್ಪ | ವಿಷ್ಣು | ಆಯುತ(೧೦ಸಾವಿರ) ಪಾಪನಾಶ |
| ಜೇನುತುಪ್ಪ | ವಾಮನ | ೧ ಲಕ್ಷ ಪಾಪನಾಶ |
| ಸಕ್ಕರೆ | ಅಚ್ಯುತ | ೩ ಲಕ್ಷ ಪಾಪನಾಶ |
| ಬಾಳೆಹಣ್ಣು, ಎಳನೀರು | ಬಾಲಕೃಷ್ಣ | ೧ ಕೋಟಿ ಪಾಪನಾಶ |
| ಗಂಧೋದಕ | ಹರಿ | ಅನಂತ ಪಾಪನಾಶ |

ಈ ರೂಪಗಳ ಚಿಂತನೆ ಮಾಡಲು ಸಾಧ್ಯವಾಗದಿದ್ದರೆ "ತದ್ರೂಪ ತನ್ನಾಮ ತತ್ತೇಜ ತದ್ಭಿನ್ನ ತ್ವಂ ಶ್ರೀನಿವಾಸಂ ನಮಾಮಿ" ಇದನ್ನು ಚಿಂತನೆ ಮಾಡಿ. ಶ್ರೀಮನ್ಮಧ್ವಮಾರ್ಗದರ್ಶಿ ಸತ್ಸಂಪ್ರದಾಯದ ಬಾಲಬೋಧೆ ಪ್ರಥಮ ಭಾಗದಲ್ಲಿ ಕೇಶವಾದಿ ರೂಪಗಳ ಚಿತ್ರ ಕೊಟ್ಟಿರುತ್ತದೆ. ಅದನ್ನು ಸ್ವಾಧೀನ ಮಾಡಿಕೊಳ್ಳಿ. ಚಾತುರ್ಮಾಸ್ಯ ವ್ರತದ ಶಾಖವ್ರತದ ಸಮಯದಲ್ಲಿ ಸ್ವಾದೋದಕಕ್ಕೆ ಅಂದರೆ ಗಂಧೋದಕಕ್ಕೆ ಉಪಯೋಗಿಸುವ ನೀರಿಗೆ ಶ್ರೀಗಂಧ, ಕೇಸರಿ, ಪಚ್ಚಕರ್ಪೂರ ಯಾವುದೂ ಹಾಕುವಂತಿಲ್ಲ. ಕೇವಲ ತುಳಸೀ ಕಾಷ್ಠದ ಗಂಧ ಮಾತ್ರ ಹಾಕಬೇಕು.

ದ್ವಿದಳ ವ್ರತದಲ್ಲಿ ಸ್ವಾದೋದಕಕ್ಕೆ ಕೇಸರಿ ಹಾಕಬಹುದು, ಪಚ್ಚಕರ್ಪೂರ ಹಾಕುವಂತಿಲ್ಲ. ತುಳಸೀಕಾಷ್ಠದ ಗಂಧವನ್ನು ಮಾತ್ರ ಹಾಕಬೇಕು. ಏಕಾದಶೀ ದಿವಸ ಯಾವುದನ್ನೂ ಬೆರೆಸುವಂತಿಲ್ಲ. ತುಳಸೀದಳವನ್ನು ಹಾಕುವಂತಿಲ್ಲ. ಕೇವಲ ಶುದ್ಧವಾದ ನೀರಿನಿಂದ ಅಭಿಷೇಕ ಮಾಡಬೇಕು.

ಪಂಚಾಮೃತಾಭಿಷೇಕ ಮಾಡುವಾಗ ನಮ್ಮ ಮನೆಯ ಸಾಲಿಗ್ರಾಮ - ಉಡುಪಿ ಶ್ರೀಕೃಷ್ಣ - ಪಂಡರಾಪುರದ ಪಾಂಡುರಂಗ - ತಿರುಪತಿ ಶ್ರೀನಿವಾಸ - ಶ್ರೀರಂಗಕ್ಷೇತ್ರದ ಶ್ರೀರಂಗನಾಥ - ಶ್ರೀಮುಷ್ಣವರಾಹ - ಅನಂತಶಯನದ ಪದ್ಮನಾಭ - ಮಣ್ಣೂರು ಶ್ರೀಕೇಶವ - ಯಂತ್ರೋದ್ಧಾರಕ ಪ್ರಾಣದೇವರು - ಶ್ರೀಬ್ರಹ್ಮಣ್ಯತೀರ್ಥರು - ಶ್ರೀಶ್ರೀಪಾದರಾಜರು - ನವಬೃಂದಾವನದ ಗಡ್ಡೆಯಲ್ಲಿರುವ ಒಂಭತ್ತು ಯತಿಗಳು - ಮಳಖೇಡದ ಶ್ರೀ ಅಕ್ಷೋಭ್ಯತೀರ್ಥರು, ಶ್ರೀಜಯತೀರ್ಥರು

- ಸ್ವಾದಿ ಶ್ರೀವಾದಿರಾಜಗುರುಸಾರ್ವಭೌಮರು - ಕುಂಭಕೋಣದಲ್ಲಿರುವ ಶ್ರೀವಿಜಯೇಂದ್ರ ಸ್ವಾಮಿಗಳು ಮತ್ತು ಜಗನ್ನಾಥತೀರ್ಥರು (ಭಾಷ್ಯದೀಪಿಕಾಚಾರ್ಯರು) - ಮಂತ್ರಾಲಯದ ಶ್ರೀರಾಘವೇಂದ್ರಸ್ವಾಮಿಗಳು - ಶ್ರೀರಘೋತ್ತಮಸ್ವಾಮಿಗಳವರು - ಶ್ರೀಅರಣ್ಯಕಾಚಾರ್ಯರು - ಶ್ರೀಸತ್ಯಭೋದರಾಯರು - ಇಷ್ಟು ಅಧಿಷ್ಠಾನಗಳಲ್ಲಿ ಪಂಚಾಂಮೃತಾಭಿಷೇಕವಾಯಿತೆಂದು ಮನಸಾ ಚಿಂತಿಸಿದರೆ ಅಲ್ಲೇ ಪಂಚಾಂಮೃತಾಭಿಷೇಕ ಮಾಡಿದ ಪುಣ್ಯ ಬರುತ್ತದೆ.

ಹೀಗೆ ಈ ಮಧ್ವಪರಂಪರೆಯಲ್ಲಿ ಬಂದಂತಹ ಸಕಲ ವೃಂದಾವನಂತಸ್ಥ ಯತಿಗಳಿಗೂ ಪಂಚಾಮೃತಾಭಿಷೇಕ- ವಾಯಿತೆಂದು ಚಿಂತನೆ ಮಾಡುವುದು.

ಮತಭೇದದಿಂದ ಹರಿವಾಸರಗಳು ಏಕಾದಶೀಗಳು ವ್ಯತ್ಯಾಸವಾದಾಗ ಆ ಮಠದ ವೃಂದಾವನಗಳನ್ನು ಮಾತ್ರ ಆದಿನ ಚಿಂತಿಸಬಾರದು. ಶುದ್ಧೋದಕ ಸ್ನಾನ ಮಾಡಿಸಿ, ನಂತರ ಗಂಧೋದಕ ಅಭಿಷೇಕ ಸಾಲಿಗ್ರಾಮಕ್ಕೆ ಮಾಡುವುದು.

ಪ್ರತಿಮೆಯೇ ದೇವರು ಎಂದು ಹೇಳುವವರು ವಿಶಿಷ್ಟಾದ್ವೈತಿಗಳು. ಇದು ಶಾಸ್ತ್ರಕ್ಕೆ ಸಮ್ಮತವಾದುದಲ್ಲ. ಇದರಿಂದ ಜಡಈಶಭೇದ ಹೋಗುತ್ತದೆ. ಪ್ರತಿಮೆಯೇ ದೇವರಲ್ಲ, ಪ್ರತಿಮೆಯಲ್ಲಿ ದೇವರು. ಸಾಲಿಗ್ರಾಮವೇ ದೇವರಲ್ಲ, ಸಾಲಿಗ್ರಮದಲ್ಲಿ ದೇವರು ಎಂದು ಚಿಂತನೆ ಮಾಡಬೇಕು. ಮಣ್ಣಿನಿಂದ, ಕಲ್ಲಿನಿಂದ, ಮರದಿಂದ, ಉಳಿ ಪ್ರಯೋಗ ಮಾಡಿ ಕೆತ್ತಿದ ವಿಗ್ರಹಗಳಲ್ಲಿ "ಟಂಕಿ" ಎಂಬ ಭಗವದ್ರೂಪವನ್ನು (ಮಾತೃಕಾನ್ಯಾಸ) ಚಿಂತನೆ ಮಾಡಬೇಕು. ಲೋಹಗಳನ್ನು ಕರಗಿಸಿ, ಎರಕ ಹೊಯ್ದ ಪ್ರತಿಮೆಗಳಲ್ಲಿ ಶ್ರೀಪರಶುರಾಮದೇವರನ್ನು ಚಿಂತನೆ ಮಾಡಬೇಕು. ಹೀಗೆ ಮಾಡದೇ ಇದ್ದರೆ ನಾವು ಕಲ್ಲಿಗೆ, ಮಣ್ಣಿಗೆ, ಮರಕ್ಕೆ, ಪೂಜೆ ಮಾಡಿದಂತಾಗುತ್ತದೆ.

ಯಾವ ಮೂರ್ತಿಯೇ ಆಗಲಿ, ಅದರಲ್ಲಿ ಅದೇ ಆಕಾರದ ಅಭಿಮಾನಿದೇವತೆ - ಅದೇ ಆಕಾರದ ಮುಖ್ಯಪ್ರಾಣದೇವರು - ಅದೇ ಆಕಾರದ ಭಗವದ್ರೂಪ ಚಿಂತನೆ ಮಾಡಬೇಕು. ಅದಕ್ಕೆ "ಗೋಲಕಚಿಂತನ" ಎಂದು ಹೆಸರು. ಹೀಗೆ ಮಾಡದಿದ್ದರೆ ಹಿಂದೆ ಹೇಳಿದಂತೆ ಆಗುತ್ತದೆ.

ಸ್ವಯಂವ್ಯಕ್ತ ಸ್ಥಳಗಳಲ್ಲಿ (ತಿರುಪತಿ, ಕಂಚಿ) ಮುಂತಾದ ಕ್ಷೇತ್ರಗಳಲ್ಲಿ ದೇವರೇ ಸಾಕ್ಷಾತ್ತಾಗಿ ಬಂದು ನಿಂತಿರುವ ಕಾರಣ ಅಲ್ಲಿ ಗೋಲಕ ಚಿಂತನೆ ಬೇಕಿಲ್ಲ. ನಮಗೆ ಶಿಲೆಯಂತೆ ಕಾಣುತ್ತಾನೆ ಎಂದು ತಿಳಿಯಬೇಕೇ ಹೊರತು ಅದನ್ನು ಶಿಲೆ ಎಂದು ತಿಳಿಯಬಾರದು - (ಶ್ರೀಭವಿಷ್ಯೋತ್ತಮಪುರಾಣ, ವೆಂಕಟೇಶ್ವರನ ಮಹಿಮೆ ಆಧಾರ).

ಒಂದು ಮುಷ್ಟಿಗೆ ಮೇಲೆ ಎತ್ತರ ಇರುವ ಪ್ರತಿಮೆಗಳಿಗೆ ತತ್ತ್ವನ್ಯಾಸ, ಮಾತೃಕಾನ್ಯಾಸ ಮಾಡಿ ಪೂಜೆ ಮಾಡಬೇಕು. ಒಂದು ಮುಷ್ಟಿ ಒಳಗೆ ಇರುವ ಪ್ರತಿಮೆಗಳಿಗೆ ಇದು ಮಾಡಬೇಕಾಗಿಲ್ಲ. ನಮ್ಮ ಬಿಂಬಮೂರ್ತಿಯನ್ನು ಪ್ರತಿಮೆಯಲ್ಲಿ ಆವಾಹನೆ ಮಾಡಿ ಅದನ್ನು ಸಾಲಿಗ್ರಾಮದಲ್ಲಿ ಆವಾಹನೆ ಮಾಡಿ, ಚಿಂತನೆ ಮಾಡಬೇಕು. ದೇವರ ರೂಪರೂಪಗಳಿಗೆ ಐಕ್ಯಚಿಂತನೆ ಮಾಡಬೇಕು. ಜೀವಬ್ರಹ್ಮರಿಗೂ, ಜೀವಜೀವರಿಗೂ ಭೇದ ಚಿಂತನೆ ಮಾಡಬೇಕು.

### ಪರಮಾತ್ಮನ ರೂಪಚಿಂತನೆ

ಪರಮಾತ್ಮನು ೧೬ ವರುಷದ ಸುಂದರ ತರುಣನಂತೆ ಚಿಂತೆ ಮಾಡಬೇಕು. ಅದು ಹೀಗೆ -

ಪರಮಾತ್ಮನ ಅಂಗಾಲುಗಳು ಧ್ವಜವಜ್ರಾಂಕುಶಗಳ ಚಿಹ್ನೆಗಳಿಂದ ಶೋಭಿತವಾಗಿ ಅರುಣವರ್ಣದಂತೆ ಕೆಂಪಾಗಿ ಇವೆ - ತೊಡೆ ಮತ್ತು ಕಾಲುಗಳು ಬಾಳೆಯಗಿಡದಂತೆ ಇದೆ - ಉಗುರುಗಳು ಹವಳದಂತೆ ಇವೆ - ಬೆರಳುಗಳು ಗುಂಡಗೆ ಇವೆ - ಮೊಣಕಾಲು ಗುಲ್ಫಗಳು ಗೂಢವಾಗಿದೆ, ಈಚೆಗೆ ಕಾಣಿಸುವುದಿಲ್ಲ - ಉದರವು ತೆಳ್ಳಗೆ ತ್ರಿವಳಿಯಿಂದ (ಮೂರು ಸುಕ್ಕುಗಳು)

ಕೂಡಿದೆ - ನಾಭಿ ಸುಳಿಯಂತೆ ಆಳವಾಗಿದೆ - ಎದೆ ವಿಸ್ತಾರವಾಗಿದೆ - ಹೆಗಲು ಎತ್ತರವಾಗಿದೆ(ಉನ್ನತಾಂಶ ಭಿತ್ತಿಂ) - ಕಂಠವು ಶಂಖದಂತೆ ಮೂರು ಸುಕ್ಕಿನಿಂದ ಕೂಡಿದೆ - ತೋಳುಗಳು ಆನೆ ಸೊಂಡಿಲಿನಂತೆ ಇವೆ - ಬೆರಳುಗಳು ಗುಂಡಗೆ ಇವೆ - ಕಪೋಲಗಳು ಕೂರ್ಮದಂತೆ(ಆಮೆ)ಇವೆ - ತುಟಿಗಳು ಪುಷ್ಯರಾಗಮಣಿಯಂತೆ ಇವೆ.- ಹಲ್ಲುಗಳು ಮುತ್ತು ಪೋಣಿಸಿದಂತೆ ಇದೆ - ಮೂಗು ಸಂಪಿಗೆ ಮಗ್ಗಿನಂತೆ ಇದೆ - ಕಣ್ಣುಗಳು ವಿಸ್ತಾರವಾದ ಕಮಲದ ದಳದಂತೆ ಇದೆ - ಹುಬ್ಬುಗಳು ಕಾಮನಬಿಲ್ಲಿನಂತೆ ಇದೆ - ಫಾಲಭಾಗ (ಹಣೆ) ಅಷ್ಟಮಿಯ ಚಂದ್ರನಂತೆ ವಿಶಾಲವಾಗಿ ಇವೆ, ತ್ರಿವಳಿಗಳಿಂದ ಕೂಡಿದೆ - ಕೂದಲುಗಳು ಕುಟಿಲ ಕುಂತಳದಂತೆ (ಗುಂಗುರು ಕೂದಲು) ಇವೆ. - ಕಿವಿಗಳು ಶ್ರೀಕಾರದಂತೆ ಇವೆ. - ಹೀಗೆ ಪರಮಾತ್ಮನು ಉತ್ತಮ ಅನಂತಲಕ್ಷಣಗಳಿಂದ ಕೂಡಿ ಅತಿ ಸುಂದರವಾಗಿದ್ದಾನೆ. ಇವನ ಜಗನ್ಮೋಹನ ಸೌಂದರ್ಯಕ್ಕೆ ಯಾವುದೂ ಸಾಟಿಯಿಲ್ಲ. ಇಂತಹ ಸ್ವಾಮಿಯು ಪ್ರಸನ್ನವದನನಾಗಿ ನಮ್ಮನ್ನು ನೋಡುತ್ತಿದ್ದಾನೆ ಎಂದು ಚಿಂತಿಸಬೇಕು.

## ದೇವರಿಗೆ ಅಲಂಕಾರ ಚಿಂತನೆ

ಪೂರ್ವೋಕ್ತವಾದ ಇಂತಹ ದೇವರಿಗೆ ಪೀತಾಂಬರ ಉತ್ತರೀಯ - 564 ಬ್ರಹ್ಮಸೂತ್ರಗಳೇ ದೇವರಿಗೆ ಯಜ್ಞೋಪವೀತ.- ದಿವ್ಯಗಂಧಾನುಲೇಪನದ ದ್ವಾದಶನಾಮ - ಊರ್ಧ್ವಪುಂಡ್ರ - ಕಸ್ತೂರಿ ತಿಲಕ - ಅಕ್ಷತೆ - ಪಾದದಲ್ಲಿ ನವರತ್ನಖಚಿತ ಪಾದುಕೆಗಳು ಕಣಕಾಲಿನಲ್ಲಿ ಪಾದಾಭರಣ ಸೊಂಟದಲ್ಲಿ ಒಡ್ಯಾಣ - ಕಂಠದಲ್ಲಿ ನವರತ್ನಖಚಿತವಾದ ಪದಕಗಳಿಂದ ಕೂಡಿದ ಬಂಗಾರದ ಸರಗಳು - ಮುತ್ತಿನ ಹಾರ - ಕೌಸ್ತುಭ ರತ್ನ - ಶ್ರೀವತ್ಸಚಿಹ್ನೆ, ಅಲ್ಲಿ ಲಕ್ಷ್ಮೀದೇವರ ಸನ್ನಿಧಾನ - ತೋಳ್ಬಂದಿಗಳು - ಕಡಗ - ಕಂಕಣ - ವಂಕಿ - ಬೆರಳುಗಳಿಗೆ ಉಂಗುರಗಳು - ಕಿವಿಗಳಿಗೆ ಮಕರ(ಮೊಸಳೆಯಾಕಾರದ) ಕುಂಡಲಗಳು - ಶಿರಸ್ಸಿಗೆ ಕೋಟಿಸೂರ್ಯ ಪ್ರಕಾಶವಾದ ನವರತ್ನ ಖಚಿತ ಕಿರೀಟ -ಮೇಲೆ ಹೇಳಿದ ಎಲ್ಲಾ ಅಲಂಕಾರಗಳು ಲಕ್ಷ್ಮ್ಯಾತ್ಮಕವೆಂದು ಅಪ್ರಾಕೃತವೆಂದು ಚಿಂತಿಸಬೇಕು. ಎಂದರೆ ಲಕ್ಷ್ಮಿಯೇ ಆ ರೂಪದಲ್ಲಿ ದೇವರಿಗೆ ಸೇವೆ ಮಾಡುತ್ತಿದ್ದಾರೆ ಎಂದು ತಿಳಿದುಕೊಳ್ಳಬೇಕು.

ಮೇಲುಗಡೆ ಬಲಗೈಯ್ಯಲ್ಲಿ ಚಕ್ರವು- ಮೇಲುಗಡೆ ಎಡಗೈಯ್ಯಲ್ಲಿ ಶಂಖವು- ಕೆಳಗಡೆ ಎಡಗೈಯ್ಯಲ್ಲಿ ಪದ್ಮವು - ಕೆಳಗಡೆ ಬಲಗೈಯ್ಯಲ್ಲಿ ಗದೆಯು - ಹೀಗೆ ಭಗವಂತ ಆಯುಧ ಧರಿಸಿದ್ದಾನೆಂದು ಚಿಂತನೆ ಮಾಡಬೇಕು.

## ಪುಷ್ಪಪೂಜಾ

ಮಲ್ಲಿಗೆ-ಜಾಜಿ - ಬಕುಳೆ- ಸೇವಂತಿಗೆ - ಮಂದಾರ (ಕೋಲುಮಲ್ಲಿಗೆ) - ಕಲ್ಹಾರ ಪುಷ್ಪ (ಬೆಟ್ಟದಾವರೆ) - ನಂದ್ಯಾವರ್ತ ಪದ್ಮಪುಷ್ಪ - ಕೇತಕಿ - ಚಂಪಕ(ಸಂಪಿಗೆ) - ಪಾರಿಜಾತ - ಕಸ್ತೂರಿಜಾಜಿ - ದವನ - ಮರುಗ - ಪಚ್ಚೆತೆನೆ (ಬಿಡಿಹೂಗಳು ಮತ್ತು ಮಾಲೆಗಳು) - ಎರಡನ್ನೂ ಚಿಂತಿಸಬೇಕು. ಇವೆಲ್ಲವೂ ಸುಗಂಧ ಪುಷ್ಪಗಳು. ಶ್ರೀಮದಾಚಾರ್ಯರು ದೇವರಪೂಜಾ ಮಾಡಿದುದನ್ನು ಶ್ರೀಸುಮಧ್ವವಿಜಯದಲ್ಲಿ ವರ್ಣಿಸಿದ್ದಾರೆ. ಅದನ್ನು ಚಿಂತಿಸುವುದು.

## ಪೂಜೆಗೆ ಬಾರದ ಹೂವುಗಳು

ಕಾಕಡ - ಡೇರಾ - ಕನಕಾಂಬರ - ನೀಲಾಂಬರ - ದಾಸವಾಳ - ವಿಪರೀತ ಕೆಂಪಗಿರುವ ಪುಷ್ಪಗಳು - ವಾಸನೆಯಿಲ್ಲದ ಪುಷ್ಪಗಳು-ಕೇಸರ ಇಲ್ಲದ ಪುಷ್ಪಗಳು ಇಂತಹವುಗಳು ಪೂಜೆಗೆ ಬರುವುದಿಲ್ಲ. ಇದನ್ನು ಪೂಜೆ ಮಾಡಬಾರದು. ಮಾಡಿದರೆ, ಇದರಂತೆ ಇರುವ ಮಕ್ಕಳು ಸಿಗುತ್ತಾರೆ. ಎಂದರೆ ನೋಡಕ್ಕೆ ಚೆಂದಾಗಿದ್ದರೂ ಒಳಗಡೆ ಯಾವ ಒಳ್ಳೆಯ ಗುಣವೂ ಇರುವುದಿಲ್ಲ. ಆದ್ದರಿಂದ ಪೂಜೆ ಮಾಡಬಾರದು.

## ಆವರಣ ಪೂಜಾ

ನವರತ್ನಖಚಿತವಾದ ಮಂಟಪದಲ್ಲಿ ನವರತ್ನಖಚಿತವಾಗಿರುವ ದಿವ್ಯ ಸಿಂಹಾಸನದಲ್ಲಿ ಲಕ್ಷ್ಮೀಸಹಿತನಾದ ಶ್ರೀಹರಿಯನ್ನು ಕುಳಿತಿರುವಂತೆ ಚಿಂತನೆ ಮಾಡಿ, ಪ್ರಥಮಾವರಣದಲ್ಲಿ ಭಗವಂತನ ದಶಾವತಾರ ರೂಪಗಳನ್ನು ಚಿಂತನೆ ಮಾಡಿ, ಅನಂತರ ಅವರ ಸುತ್ತಲೂ ಪೂರ್ವದಲ್ಲಿ ಇಂದ್ರದೇವರು, ಆಗ್ನೇಯದಲ್ಲಿ ಅಗ್ನಿದೇವರು, ದಕ್ಷಿಣದಲ್ಲಿ ಯಮದೇವರು, ನೈಋತ್ಯದಲ್ಲಿ ನಿಋತಿ ದೇವರು - ಪಶ್ಚಿಮದಲ್ಲಿ ವರುಣ ದೇವರು - ನಿಋತಿವರುಣರ ಮಧ್ಯೆ ಶೇಷದೇವರು - ವಾಯುವ್ಯದಲ್ಲಿ ಪ್ರವಾಹ ವಾಯುದೇವರು(ಮುಖ್ಯಪ್ರಾಣದೇವರಲ್ಲ)- ಉತ್ತರದಲ್ಲಿ ಕುಬೇರರು - ಈಶಾನ್ಯದಲ್ಲಿ ರುದ್ರದೇವರು - ಪೂರ್ವ ಮತ್ತು ಈಶಾನ್ಯದ ಮಧ್ಯೆ ಬ್ರಹ್ಮದೇವರು - ಈ ದೇವತೆಗಳು ಅವರ ಪತ್ನೀಸಹಿತರಾಗಿ ಪರಿವಾರಸಹಿತರಾಗಿ, ಅವರ ವಾಹನಸಹಿತವಾಗಿ, ಅಂತರ್ಯಾಮಿಯಾದ, ಅವರ ಬಿಂಬಮೂರುತಿಯೊಂದಿಗೆ ಚಿಂತನೆ ಮಾಡಬೇಕು. ಈ ಸಭೆಯ ಮಧ್ಯದಲ್ಲಿ ಶ್ರೀಮುಖ್ಯಪ್ರಾಣದೇವರು ದೇವರಿಗೆ ಶ್ವೇತಛತ್ರಿಯನ್ನು ಹಿಡಿದಿರುತ್ತಾರೆ ಎಂದು ಚಿಂತನೆ ಮಾಡಬೇಕು. ಶ್ರೀಭಗವಂತನಿಗೆ ಯಾವತ್ತೂ ಸಕಲ ಪರಿವಾರಸಹಿತವಾಗಿ ಇರುವ ಸನ್ನಿವೇಶವನ್ನು ಚಿಂತನೆ ಮಾಡಬೇಕು. ಸಕಲ ಪರಿವಾರಸಹಿತ ಶ್ರೀಪರಮಾತ್ಮನೇ ನಮಃ ಎಂದು ಚಿಂತನೆ ಮಾಡಬೇಕು.

## ನೈವೇದ್ಯ ಪ್ರಕರಣ

ದೇವರ ಮುಂಭಾಗದಲ್ಲಿ ಗೋಮಯದಿಂದ ಸಾರಿಸಿ, ಅಷ್ಟದಳಪದ್ಮ ರಂಗವಲ್ಲಿ ಹಾಕಿ, ಅದರ ಮೇಲೆ ಓಂಕಾರವನ್ನು, ಎರಡು ಪಕ್ಕದಲ್ಲಿ ಶ್ರೀಕಾರವನ್ನು ರಂಗವಲ್ಲಿಯಿಂದ ಹಾಕಿ, ಆ ಮಂಡಲದ ಪಕ್ಕದಲ್ಲಿ ಇನ್ನೊಂದು ಪ್ರತ್ಯೇಕ ಮಂಡಲವನ್ನು ಇದರಂತೆ ಮಾಡಬೇಕು. ಮೊದಲು ಹಾಕಿದ ಮಂಡಲದ ಮೇಲೆ ಬೆಳ್ಳಿಯ ತಟ್ಟೆ ಇಟ್ಟು ಅದರಲ್ಲಿ ಅನ್ನವನ್ನು ಬಡಿಸಬೇಕು. ಪ್ರತಿಯೊಂದು ಪದಾರ್ಥಕ್ಕೂ ಬೇರೆಬೇರೆ ಸಣ್ಣಉಪಪಾತ್ರೆಗಳನ್ನು ಇಟ್ಟು ಅದರಲ್ಲಿ ಆ ನೈವೇದ್ಯ ಪದಾರ್ಥಗಳನ್ನು ಇಡಬೇಕು. ಒಂದು ಪದಾರ್ಥ ಇನ್ನೊಂದು ಪದಾರ್ಥಕ್ಕೆ ಬೆರೆಯದಂತೆ ನೋಡಬೇಕು. ಇದರ ಜೊತೆಗೆ ಒಂದು ತಪ್ಪಲೆ ಅನ್ನವನ್ನು ಇಡಬೇಕು. ಪಕ್ಕದ ಮಂಡಲದಲ್ಲಿ ನೀರು, ಮೊಸರು, ತುಪ್ಪ, ಹಣ್ಣುಗಳು, ವೀಳ್ಯದೆಲೆ ಅಡಿಕೆ, ದಕ್ಷಿಣೆ ಮುಂತಾದ ಮುಸುರೆಯಲ್ಲದ ಪದಾರ್ಥಗಳನ್ನು ಇಡಬೇಕು. ಮೊದಲು ಪಾತ್ರಾಭಿಗಾರ ಮಾಡಿ ಪದಾರ್ಥಗಳನ್ನು ಇಡಬೇಕು. ಉಪ್ಪಿನಿಂದ ಹಿಡಿದು, ತುಪ್ಪದ ಪರ್ಯಂತ ಸಕಲ ಪದಾರ್ಥಗಳನ್ನು ಇದರಲ್ಲಿ ನೈವೇದ್ಯಕ್ಕೆ ಇಡಬೇಕು. ಇಲ್ಲಿ ನಾವು ಯಾವುದೋ ಕೆಲವು ಪದಾರ್ಥಗಳನ್ನು ಮಾತ್ರ ನಮ್ಮ ಮನೆಯಲ್ಲಿ ಆಗಿರುವ ನೈವೇದ್ಯ ವಸ್ತುಗಳನ್ನು ಇಡುತ್ತೇವೆ. ಆದರೆ ಮನಸ್ಸಿನಿಂದ ಪಂಚಭಕ್ಷ್ಯಪರಮಾನ್ನ ಸಹಿತವಾದ ಅನೇಕ ಭಕ್ಷ್ಯಭೋಜ್ಯಗಳನ್ನು ಇಟ್ಟಿದ್ದೇನೆ ಎಂದು ಚಿಂತನೆ ಮಾಡಬೇಕು. ಇದರಿಂದ ದೇವರ ಮುಂದೆ ಸುಳ್ಳು ಹೇಳುತ್ತೇನೆ ಎಂದು ತಿಳಿದುಕೊಳ್ಳಬಾರದು. ಇದೆಲ್ಲವನ್ನೂ "ಮಾನಸೇ ಚಿಂತಯಾಮಿ" ಎಂದರೆ ಮನಸ್ಸಿನಿಂದ ಚಿಂತನೆ ಮಾಡಬೇಕು ಎಂದು ವಿಧಿ ಮಾಡಿರುತ್ತಾರೆ.

ದೇವರ ಜೊತೆಯಲ್ಲಿ ಲಕ್ಷ್ಮೀದೇವಿಯವರು ಶ್ರೀರೂಪದಿಂದ ಹರಿಭೂಮದಂತೆ ಭೋಜನ ಮಾಡುತ್ತಾರೆ. ಭೂರೂಪದಿಂದ ಭೋಜನ ಪದಾರ್ಥವಾಗುತ್ತಾರೆ. ದುರ್ಗಾರೂಪದಿಂದ ಭೋಜನ ಬಡಿಸುತ್ತಾರೆ. ದೇವರ ಸುತ್ತಲೂ ಪರಿವಾರ ದೇವತೆಗಳು ರಕ್ಷಣ ಮಾಡುತ್ತಾರೆ. ಇದು ಕೇವಲ ಉಪಚಾರವೇ ಹೊರತು ದೇವರಿಗೆ ಯಾರಿಂದಲೂ ರಕ್ಷಣೆ ಏನೂ ಬೇಕಾಗಿಲ್ಲ. ಇದು ಒಂದು ಮಾಡಬೇಕಾದ ಕ್ರಮ ವೈಭವದ ಲಕ್ಷಣ.

ದೇವರಿಗೆ ನವರತ್ನಖಚಿತವಾದ ಪಾತ್ರೆಗಳಲ್ಲಿ ನೈವೇದ್ಯಕ್ಕೆ ಇಡುತ್ತೇವೆ ಎಂದು ಚಿಂತನೆ ಮಾಡಬೇಕು. ದೇವರ ನೈವೇದ್ಯಕ್ಕೆ ಮುಂಚೆ ದೀಪಗಳನ್ನು ಹಚ್ಚಿ, ಧೂಪಾರತಿ ಮಾಡಿ, ನಂತರ ದೇವರನ್ನು ಭೋಜನದ ಸ್ಥಳಕ್ಕೆ ಬರುವಂತೆ ಪ್ರಾರ್ಥನೆ ಮಾಡಬೇಕು. ಅಲ್ಲಿ ನವರತ್ನಖಚಿತವಾದ ಮಣೆಯ ಮೇಲೆ ದೇವರು ಕುಳಿತುಕೊಳ್ಳುತ್ತಾರೆ ಎಂದು ಚಿಂತನೆ ಮಾಡಬೇಕು. ಈ ಕಾಲದಲ್ಲಿ ದ್ವಾದಶಸ್ತೋತ್ರ ಮತ್ತು ದೇವರ ನೈವೇದ್ಯ ಚಿಂತನ ಮಾಡಬೇಕು. ( ಬಾಲಬೋಧೆ ಪ್ರಥಮಭಾಗದಲ್ಲಿ ನೈವೇದ್ಯದ ಪಟ್ಟಿ ಕೊಟ್ಟಿರುತ್ತದೆ. ಅದನ್ನು ಇಲ್ಲಿ ಚಿಂತನೆ ಮಾಡಬೇಕು.) ನಮ್ಮ ಬಿಂಬಮೂರುತಿ, ಪ್ರತಿಮೆಯಲ್ಲಿನ ಮೂರುತಿ, ಭೋಜನಪದಾರ್ಥದಲ್ಲಿನ ಮೂರುತಿ ಒಬ್ಬನೇ ಎಂದು ಐಕ್ಯಚಿಂತನ ಮಾಡಬೇಕು. ಇದೇ ನೈವೇದ್ಯದ ಗುಟ್ಟು. ದೇವರು ಈ ಪದಾರ್ಥಗಳನ್ನು ಭೋಜನ ಮಾಡುವುದಿಲ್ಲ. ಅದರಲ್ಲಿರತಕ್ಕ ತನ್ನ ಸ್ವಾಖ್ಯರಸವನ್ನು (ತನ್ನ ರೂಪವನ್ನು) ತಾನು ಸ್ವೀಕಾರ ಮಾಡುತ್ತಾನೆ ಅಂತ ತಿಳಿಯಬೇಕು. ತನ್ನ ಕೃಪಾದೃಷ್ಟಿಯಿಂದ ಪದಾರ್ಥಗಳನ್ನು ನೋಡಿ ಅದನ್ನು ಪ್ರಸಾದವನ್ನಾಗಿ ಮಾಡುತ್ತಾನೆ ಎಂದು ಚಿಂತನೆ ಮಾಡಬೇಕು. ಸ್ಟೀಲ್ ಪಾತ್ರೆಗಳಲ್ಲಿ, ಅಲ್ಯುಮಿನಿಯಂ, ಹಿಂಡಾಲಿಯಂ ಪಾತ್ರೆಗಳಲ್ಲಿ ದೇವರ ನೈವೇದ್ಯಕ್ಕಿಡಬಾರದು. ಬೆಳ್ಳಿ, ಬಂಗಾರ, ಕಂಚು, ಕಲಾಯಿ ಮಾಡಿದ ಹಿತ್ತಾಳೆ ಇಂತಹ ಪಾತ್ರೆಗಳಲ್ಲಿ ಮಾತ್ರ ದೇವರ ನೈವೇದ್ಯಕ್ಕಿಡಬೇಕು. ನಂತರ ದೇವರಿಗೆ ಭೋಜನವಾದ ಮೇಲೆ ಬಾಯಿಮುಕ್ಕಳಿಸುವುದು, ಕೈ ಕಾಲು ತೊಳೆದುಕೊಳ್ಳುವುದು, ಕೈ ಕಾಲು ಒರೆಸಿಕೊಳ್ಳುವುದು, ಮುಂತಾದವುಗಳನ್ನು ಚಿಂತನೆ ಮಾಡಬೇಕು. ನಂತರ ಆ ದೇವರನ್ನು ಪಲ್ಲಕ್ಕಿಯಲ್ಲೇ ಕರೆದುಕೊಂಡು ಬಂದು ತಿರುಪತಿಯ ಡೋಲೋತ್ಸವದಲ್ಲಿ ಕೂಡಿಸಿದಂತೆ ಚಿಂತನೆ ಮಾಡುವುದು. ಅಲ್ಲಿ ದೇವರಿಗೆ ಪುನಃ ಧೂಪ, ಉತ್ತರ ನೀರಾಂಜನ, ಮಂಗಳಾರತಿ, ಎಷ್ಟು ಬೇಕಾದರೂ ಮಾಡಬಹುದು. ಲಕ್ಷ್ಮೀದೇವಿಯವರು ದೇವರಿಗೆ ತಾಂಬೂಲ ಕೊಡುತ್ತಾರೆ ಎಂದು ಚಿಂತನೆ ಮಾಡಬೇಕು.

## ಮಂಗಳಾರತಿ ಮಾಡುವ ಕ್ರಮ

ಮಂಗಳಾರತಿ ಬತ್ತಿಯನ್ನು ಬೇರೆ ಒಂದು ದೀಪದಲ್ಲಿ ಹಚ್ಚಿಸಿಕೊಂಡು, ಶಂಖಕ್ಕೆ ಸ್ಪರ್ಶ ಮಾಡಿ, ಪಾದದಿಂದ ಶಿರಸ್ಸಿನ ಪರ್ಯಂತ ಮೂರು ಸಾರಿ, ನಾಭಿಯಿಂದ ಶಿರಸಿನ ಪರ್ಯಂತ ಮೂರು ಬಾರಿ, ಮುಖಕ್ಕೆ ಮೂರು ಬಾರಿ, ಪುನಃ ಪಾದದಿಂದ ಶಿರಸ್ಸಿನ ಪರ್ಯಂತ ಮೂರು ಬಾರಿ ಮಾಡಬೇಕು. ಹೀಗೆ ಮಾಡುವಾಗ ಉಡುಪಿ ಕೃಷ್ಣ, ಪಂಡರಾಪುರದ ಪಾಂಡುರಂಗ, ತಿರುಪತಿ ಶ್ರೀನಿವಾಸ, ಶ್ರೀರಂಗದ ರಂಗನಾಥ, ಶ್ರೀಮುಷ್ಣವರಾಹ, ಅನಂತಶಯನದ ಪದ್ಮನಾಭ, ಅನಂತರ ಕುಂದಾಪುರದ ವ್ಯಾಸರಾಜಮಠದಲ್ಲಿರುವ ಶ್ರೀಭೈಷ್ಮೀಸತ್ಯಾಸಮೇತ ಶ್ರೀಗೋಪಾಲಕೃಷ್ಣದೇವರು, ಸೋಸಲೆವ್ಯಾಸರಾಜ ಮಠದಲ್ಲಿರುವ ಶ್ರೀಪಟ್ಟಾಭಿರಾಮದೇವರು, ಶ್ರೀಶ್ರೀಪಾದರಾಜಮಠದಲ್ಲಿರುವ ಶ್ರೀರಂಗವಿಠಲದೇವರು, ಮಂತ್ರಾಲಯದ ರಾಯರಮಠದಲ್ಲಿರುವ ಜಯರಾಮದೇವರು ಮತ್ತು ಭೂವೈಕುಂಠವಾಸದೇವರು, ಉತ್ತರಾದಿಮಠದಲ್ಲಿರುವ ಶ್ರೀದಿಗ್ವಿಜಯರಾಮದೇವರು, ಸೋದೆವಾದಿರಾಜಮಠದಲ್ಲಿರುವ ಶ್ರೀಭೂವರಾಹ ಮತ್ತು ಹಯಗ್ರೀವದೇವರು ಇವರಿಗೆ ಮಂಗಳಾರತಿ ಆಯಿತು ಎಂದು ಚಿಂತನೆ ಮಾಡಬೇಕು. (ಮಠದ ದೇವರಿಗೆ ಮಂಗಳಾರತಿ ಮಾಡುವುದು ಮಾತ್ರ, ಆ ಮಠದ ಸ್ವಾಮಿಗಳವರೇ ಮಾಡುತ್ತಿದ್ದಾರೆ ಎಂದು ಚಿಂತನೆ ಮಾಡಬೇಕೇ ಹೊರತು ನಾವೇ ಮಂಗಳಾರತಿ ಮಾಡಿದೆವು ಎಂದು ಚಿಂತಿಸಬಾರದು). ಕೊನೆಗೆ ದೇವರಾಯನದುರ್ಗದ ಲಕ್ಷ್ಮೀನರಸಿಂಹದೇವರು, ತಿರುಪತಿ ಶ್ರೀನಿವಾಸದೇವರಲ್ಲಿ ಈ ಮಂಗಳಾರತಿ ಪ್ರಸಂಗವನ್ನು ಕೊನೆಮುಟ್ಟಿಸುವುದು. ತಿರುಪತಿಯಲ್ಲಿ ನವರಾತ್ರಿಯಲ್ಲಿ ನಡೆಯುವ ೧೦ ದಿವಸದ ಉತ್ಸವಗಳನ್ನು ಇಲ್ಲಿ ಚಿಂತಿಸುವುದು ವಾಹನೋತ್ಸವಗಳು ಛತ್ರಿ ಛಾಮರ, ವ್ಯಜನಪರ್ಯಂಕ, ನೃತ್ಯ ಗೀತ ವಾದ್ಯ, ಅಶ್ವ, ಗಜ, ಸಿಂಹ, ಹಂಸ, ಪಲ್ಲಕ್ಕಿ, ಸೂರ್ಯಪ್ರಭ, ಚಂದ್ರಪ್ರಭ, ಗರುಡ, ಶೇಷ, ಹನುಮಂತ, ಬ್ರಹ್ಮರಥೋತ್ಸವ ತೆಪ್ಪೋತ್ಸವ, ಅವಭೃತ ಸ್ನಾನ ಚಿಂತಿಸಿದರೆ ಪ್ರತಿದಿವಸ ನವರಾತ್ರಿ ಉತ್ಸವಗಳನ್ನು ಮಾಡಿಸಿದಂತಾಗುತ್ತದೆ.

## ದೇವರಿಗೆ ಪ್ರದಕ್ಷಿಣೆ

ದೇವರಿಗೆ ಐದು ಪ್ರದಕ್ಷಿಣೆ ಮತ್ತು ಐದು ನಮಸ್ಕಾರಗಳನ್ನು ಹಾಕುವ ವಿಚಾರ ಶ್ರೀಮನ್ಮಧ್ವಮಾರ್ಗದರ್ಶಿ, ಬಾಲಭೋದೆ, ಪ್ರಥಮಭಾಗದಲ್ಲಿ ಸಚಿತ್ರವಾಗಿ ತಿಳಿಸಿರುತ್ತೆ. ಅದರಂತೆ ಮಾಡುವುದು.

## ದೇವರಲ್ಲಿ ಪ್ರಾರ್ಥನೆ

ನೀನು ಈಶ, ನಾನು ದಾಸ; ಸರ್ವಸ್ವವೂ ನಿನ್ನದು - ಈ ಮನೆ, ಮಠ, ಹೆಂಡತಿ, ಮಕ್ಕಳು, ಪರಿವಾರ, ಆಸ್ತಿಪಾಸ್ತಿ, ಸುಖ-ದುಃಖ, ಲಾಭ-ನಷ್ಟ, ಮಾನ-ಅವಮಾನ, ಎಲ್ಲವೂ ನಿನ್ನ ಅಧೀನ. ಭಾರತಿರಮಣಮುಖ್ಯಪ್ರಾಣಾಂತರ್ಗತನಾದ ನೀನು, ಪರಿವಾರಸಹಿತನಾದ ನನಗೆ ಪೂರ್ಣಾಯಸ್ಸು, ಆರೋಗ್ಯ, ಐಶ್ವರ್ಯ, ಜ್ಞಾನ, ಭಕ್ತಿ, ವೈರಾಗ್ಯ ಕೊಟ್ಟು - ದುಷ್ಟರ ಸಹವಾಸ ತಪ್ಪಿಸಿ, ಸಜ್ಜನರ ಸಹವಾಸ ಕೊಟ್ಟು, ವಿಷ್ಣುವೈಷ್ಣವರ ಸೇವಾ ಮಾಡಿಸಿ, ಅಂತ್ಯಕ್ಕೆ ಅನ್ಯವಾರ್ತೆಗೆ ಮನಸ್ಸು ಹೋಗದೆ, ನಿನ್ನಲ್ಲೇ ಮನಸ್ಸು ಕೊಟ್ಟು, ಉದ್ಧಾರ ಮಾಡು ಸ್ವಾಮಿ, ಗುರುಗಳಂತರ್ಯಾಮಿ - ನನಗೆ ಏನೂ ಗೊತ್ತಿಲ್ಲ, ನಿನ್ನ ಪಾದಕ್ಕೆ ಬೀಳುವೆ - ಉದ್ಧಾರ ಮಾಡು ಸ್ವಾಮಿ, ಗುರುಗಳಂತರ್ಯಾಮಿ - ಈ ರೀತಿ ಬೆಳಿಗ್ಗೆ ಮತ್ತು ರಾತ್ರಿ ಎರಡು ಬಾರಿ ನಮಸ್ಕಾರ ಮಾಡುವುದು ಅಭ್ಯಾಸ ಮಾಡಿಕೊಳ್ಳಬೇಕು. ಸಾಷ್ಟಾಂಗ ನಮಸ್ಕಾರ ಮಾಡುವ ಕ್ರಮವನ್ನು ಬಾಲಬೋಧೆಯ ಪ್ರಥಮ ಭಾಗದಲ್ಲಿ ಸಚಿತ್ರವಾಗಿ ವರ್ಣಿಸಲಾಗಿದೆ. ಅದನ್ನು ನೋಡಿ.

ಪ್ರತಿಮೆಗೆ ತತ್ವನ್ಯಾಸ, ಮಾತೃಕಾನ್ಯಾಸ ಪುನಃ ಮಾಡಿ ಶಂಖದಲ್ಲಿ ನೀರು ಹಾಕಿಕೊಂಡು ಮೂರು ಸಾರಿ ಆರತಿ ಎತ್ತುವಂತೆ ನೀವಾಳಿಸಿ (ಬಳಿತ್ಥಾಸೂಕ್ತ ಪಠಣ ಮಾಡುತ್ತಾ) ಶಂಖಭ್ರಮಣ ಮಾಡಿ, ಆ ನೀರನ್ನು ತೀರ್ಥದ ತಟ್ಟೆಯಲ್ಲಿ ಹಾಕಿಕೊಳ್ಳುವುದು. ಇದಕ್ಕೆ ಶಂಖತೀರ್ಥವೆಂದು ಹೆಸರು.

## ರಮಾದಿಗಳ ಪೂಜೆ

ವಿವಕ್ಷಾಭೇದದಿಂದ ಹಲವಾರು ಸಂಪ್ರದಾಯ ಭೇದವಿದೆ ತಾರತಮ್ಯಕ್ಕೆ ಚ್ಯುತಿ ಬರದಂತೆ, ಒಂದು ಸಂಪ್ರದಾಯ ಹಿಡಿದುಕೊಂಡು ಮಾಡುವುದು, ಸುಮ್ಮನೆ ತಲೆಕೆಡಿಸಿಕೊಂಡು ಕಸಿವಿಸಿ ಮಾಡಿಕೊಳ್ಳಬೇಡಿ.

ದೇವರಿಗೆ ಏರಿಸಿದ ನಿರ್ಮಾಲ್ಯ ತುಳಸಿ, ಹೂವು, ಗಂಧಾಕ್ಷತೆಗಳನ್ನು, ಶಂಖ, ಪ್ರಾಣದೇವರು, ಗರುಡಶೇಷರು, ವೃಂದಾವನಗಳಿಗೆ ಕ್ರಮವಾಗಿ ಸಮರ್ಪಣೆ ಮಾಡುವುದು. ದೇವರ ನೈವೇದ್ಯದಲ್ಲಿ ಸ್ವಲ್ಪ ಬರೀ ಅನ್ನವನ್ನು ಮಾತ್ರ ವೈಶ್ವದೇವಕ್ಕೆ ತೆಗೆದುಕೊಂಡು, ಇನ್ನೊಂದು ಸಣ್ಣ ತಟ್ಟೆಯಲ್ಲಿ ಎಲ್ಲಾ ಪದಾರ್ಥಗಳನ್ನು ಸ್ವಲ್ಪ ತೆಗೆದಿಡುವುದು. ನಂತರ ದೇವರ ತೀರ್ಥವನ್ನು ಶಂಖಕ್ಕೆ ಕೊಟ್ಟು, ದೇವರ ನೈವೇದ್ಯದ ಮೇಲೆ ಹಾಕಿ, ಪರಿಷೇಚನ ಮಾಡಿ, ದುರ್ಗಾರೂಪವಾದ ಲಕ್ಷ್ಮೀದೇವಿಯರಿಗೆ ನೈವೇದ್ಯ ಮಾಡುವುದು. ನಂತರ ಮುಖ್ಯಪ್ರಾಣದೇವರಿಗೆ ನೈವೇದ್ಯ ಮಾಡುವುದು. ನಂತರ ಭಾರತೀದೇವಿಯವರಿಗೆ ನೈವೇದ್ಯ ಮಾಡುವುದು. ಅನಂತರ ಪಕ್ಕದಲ್ಲಿಟ್ಟಿದ್ದ ಸಣ್ಣತಟ್ಟೆಯಲ್ಲಿರುವ ನೈವೇದ್ಯವನ್ನು ಗರುಡಶೇಷರುದ್ರಾದಿಗಳಿಂದ ಹಿಡಿದು ಪುಷ್ಕರನ ಪರ್ಯಂತವಾಗಿ ನೈವೇದ್ಯವೆಂದು ಚಿಂತಿಸುವುದು. ನೈವೇದ್ಯಕ್ಕೆ ಮುಂಚೆ ತೀರ್ಥವನ್ನು ಕೊಟ್ಟು ಅನಂತರ ನೈವೇದ್ಯದ ಮೇಲೆ ತೀರ್ಥ ಹಾಕುವುದು. ನೈವೇದ್ಯ ಆದ ಮೇಲೆ ಪುನಃ ಆಚಮನಕ್ಕೆ ಅಂತ ನೀರು ಕೊಟ್ಟು, ತೀರ್ಥವನ್ನು ಕೊಡಬೇಕು. ಇದು ಶಂಖದಿಂದ ಕ್ರಮಕ್ರಮವಾಗಿ ಪ್ರತ್ಯೇಕ ಪ್ರತ್ಯೇಕವಾಗಬೇಕು. ಮನಸ್ಸಿನಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಇಟ್ಟಿರುತ್ತೇವೆ ಎಂದು ಚಿಂತನೆ ಮಾಡಬೇಕು.

## ವೈಶ್ವದೇವ

"ಜೀವೋ ಜೀವಸ್ಯ ಜೀವನಂ" ಭಗವಂತ ಬ್ರಹ್ಮಾಂಡ ಸೃಷ್ಟಿ ಮಾಡಿ, ಪ್ರಳಯದಲ್ಲಿ ಎಲ್ಲಾ ನುಂಗಿಬಿಡುತ್ತಾನೆ. ನಿರ್ಜೀವವಾದ ಪದಾರ್ಥಗಳನ್ನು ತಿಂದು, ಬದುಕುವಂತೆ ಮಾಡಲಿಲ್ಲ. ಸಣ್ಣಪ್ರಾಣಿಯ ಶರೀರ ದೊಡ್ಡ ಪ್ರಾಣಿಗೆ ಆಹಾರ. ಧಾನ್ಯ ಆಹಾರವಾಗಿರುವ ಇಲಿಯು ಬೆಕ್ಕಿಗೆ ಆಹಾರವಾಗುತ್ತದೆ. ಜಲಚರಗಳಲ್ಲಿ ಸಣ್ಣ ಮೀನು- ದೊಡ್ಡಮೀನು, ಮೊಸಳೆಗಳಿಗೆ ಆಹಾರ. ಇದು ಮಾಂಸಾಹಾರದ ಕ್ರಮವಾಯಿತು. ಸಸ್ಯಾಹಾರದಲ್ಲಿ ಅಕ್ಕಿ,ಬೇಳೆ,ತರಕಾರಿ, ಇವುಗಳಲ್ಲಿ ಜೀವರು ಇರುತ್ತಾರೆ. ಕತ್ತರಿಸುವುದು, ಹೆಚ್ಚುವುದು, ಕುಟ್ಟುವುದು, ಎಣ್ಣೆಯಲ್ಲಿ ಕರಿಯುವುದು, ನೀರಿನಲ್ಲಿ ಬೇಯಿಸುವುದು, ಬಾಂಡಲೆಯಲ್ಲಿ ಹುರಿಯುವುದು - ಎಲ್ಲವೂ ಸಹ ಪ್ರಾಣಿಹಿಂಸೆಯೇ. ಹಾಲು ಮತ್ತು ನೀರುಗಳಲ್ಲಿ ಸಹ ಜೀವರಾಶಿಗಳಿವೆ. ಆದ್ದರಿಂದ ಪ್ರಾಣಿಹಿಂಸೆ ಮಾಡಿದಂತೆಯೇ ಆಯಿತು. ಈ ಪಾಪದ ಪರಿಹಾರಕ್ಕಾಗಿಯೇ ವೈಶ್ವದೇವ ಎಂಬ ವೇದೋಕ್ತ ಸಂಸ್ಕಾರ ಮಾಡಿದ್ದಾರೆ. ಇದರಿಂದ ಈ ಪಾಪಗಳು ನಾಶವಾಗುತ್ತವೆ. ವೈದಿಕ ಹಿಂಸೆಯು ಪಾಪಸಾಧನವಲ್ಲ ಎಂದು ಶಾಸ್ತ್ರದಲ್ಲಿ ವಿಹಿತವಾಗಿದೆ. ವೈಶ್ವದೇವ ಮಾಡದೆ ಭೋಜನ ಮಾಡಿದರೆ, ಪಾಪಸಂಪಾದನೆಯಾಗುತ್ತದೆ. ವೈಶ್ವದೇವ ಮಾಡಲು ಲಗ್ನವಾಗಿರಬೇಕು. ಇದೇ ಅದಕ್ಕೆ ಅಧಿಕಾರ. ಅಧಿಕಾರ ಇರುವವರು ವೈಶ್ವದೇವ ಮಾಡಬೇಕಾದರೆ, ಅವಕಾಶ ಇಲ್ಲದಿದ್ದ ಪಕ್ಷದಲ್ಲಿ, ವೈಶ್ವದೇವ ಮಂತ್ರವನ್ನಾದರೂ ಪಠಣ ಮಾಡಬಹುದು. ಇತ್ತೀಚಿನ ಕೆಲವು ಪ್ರಧಾನಪುರುಷರು ಗ್ಯಾಸ್‌ನಲ್ಲಿ ವೈಶ್ವದೇವ ಮಾಡಬಹುದೆಂದು ಹೇಳಿದರಂತೆ. ಇದು ಕೀರ್ತಿಸಂಪಾದನೆಗಾಗಿಯೇ ಹೇಳಿದ್ದಾರೆಯೇ ಹೊರತು ಶಾಸ್ತ್ರಕ್ಕೆ ಸಮ್ಮತವಾದುದಲ್ಲ. ಅದರ ಬದಲು ಮೇಲೆ ಹೇಳಿದಂತೆ ಮಂತ್ರಪಾರಾಯಣ ಮಾಡಬಹುದು.

ಕೊನೆಗೆ ಯಾವುದೂ ಮಾಡುವುದಕ್ಕಾಗದಿದ್ದಾಗ ತಿನ್ನುವ ಅನ್ನವನ್ನೇ "ಯಜ್ಞಪುರುಷಾಂತರ್ಯಾಮಿ ಭಾರತಿರಮಣಮುಖ್ಯಪ್ರಾಣಾಂತರ್ಗತ ಶ್ರೀಹರಿಣೀಪತಿ ಪರಶುರಾಮ ನಿನಗೆ ಅರ್ಪಣೆ" ಎಂದು ಹೇಳಿಯಾದರೂ ಊಟ ಮಾಡುವುದು ಬಹಳ ಕಡಿಮೆಯ ಒಂದು ಬಿನ್ನಹ. ಆದರೆ ಇಷ್ಟೇ ಸರಿ, ಪರವಾಗಿಲ್ಲ ಎಂದು ಅದನ್ನೇ ಮುಂದುವರಿಸಿಕೊಂಡು ಹೋಗಬಾರದು. ಇದು ತಪ್ಪೇ. ಆದರೆ ಇದನ್ನು ಸರಿಪಡಿಸಿಕೊಂಡು ವೈಶ್ವದೇವ ಮಾಡಿ ಊಟ ಮಾಡುವಂತೆ ನಮಗೆ ಅವಕಾಶ ಕೊಡು ಎಂದು ದೇವರಲ್ಲಿ ಪ್ರಾರ್ಥನೆ ಮಾಡುತ್ತಾ ಪ್ರಯತ್ನವನ್ನೂ ಸಹ ಮಾಡಬೇಕು.

## ಹಸ್ತೋದಕ - ತೀರ್ಥ - ಪ್ರಸಾದ - ಔಷಧಿ

ಹಿಂದೆ ಮೈಸೂರು ರಾಜ್ಯದ ರಾಜಮನೆತನದಲ್ಲಿ ರಾಜಒಡೆಯರು ಎಂಬ ಒಬ್ಬ ದೊರೆಗಳು ಧರ್ಮದಿಂದ ರಾಜ್ಯವಾಳುತ್ತಿದ್ದರು. ಅವರ ಮನೆದೇವರು ಶ್ರೀಚಾಮುಂಡಿದೇವಿಯವರು. ಕೆಲವರು ರಾಜದ್ರೋಹಿಗಳ ಪಿತೂರಿಯಿಂದ, ಅರ್ಚಕನು ತೀರ್ಥಕ್ಕೆ ವಿಷಮಿಶ್ರ ಮಾಡಿದ್ದ. ರಾಜರು ಬಂದು ಭಕ್ತಿಯಿಂದ ದೇವಿಯವರಿಗೆ ನಮಸ್ಕರಿಸಿ, ತೀರ್ಥಕ್ಕೆ ಕೈಹಿಡಿದರು. ರಾಜರ ಸನ್ನಿಧಾನದಿಂದ ಅರ್ಚಕನಿಗೆ ಹೆದರಿಕೆ ಉಂಟಾಗಿ ಗಡಗಡ ನಡುಗಲು ಪ್ರಾರಂಭಿಸಿದ. ಕಾರಣ ಏನು ಎಂದು ದೊರೆಗಳು ಪ್ರಶ್ನೆ ಮಾಡಿದಾಗ, ತೀರ್ಥಕ್ಕೆ ವಿಷ ಬೆರೆಸಿದ್ದೇನೆ ಎಂದು ತಪ್ಪೊಪ್ಪಿಕೊಂಡ. ಆಗ ಅವರು ಅರ್ಚಕನಿಗೆ ಈ ರೀತಿ ಹೇಳಿದರು - ನನ್ನ ಕೈಗೆ ತೀರ್ಥ ಅಂತ ಹಾಕುತ್ತೀಯಾ ಅಥವಾ ವಿಷ ಎಂದು ಹಾಕುತ್ತೀಯಾ ಎಂದು ಕೇಳಿದರು. ಅದಕ್ಕೆ ಅವನು ತೀರ್ಥ ಎಂದು ಹಾಕುತ್ತೇನೆ ಎಂದು ಹೇಳಿ, ಅವರಿಗೆ ತೀರ್ಥ ಕೊಟ್ಟ. ರಾಜರು ಭಕ್ತಿಯಿಂದ ತೀರ್ಥಪ್ರಾಶನ ಮಾಡಿದರು. ಆದರೆ ಅವರಿಗೆ ಯಾವ ತೊಂದರೆಯೂ ಆಗಲಿಲ್ಲ. ಇದಕ್ಕೆ ಅವರಲ್ಲಿದ್ದ ಭಕ್ತಿಯೇ ಕಾರಣ.

ಮೈಸೂರು ದಸರಾ ಹಬ್ಬದಲ್ಲಿ ವಿಜಯದಶಮಿಯ ದಿವಸ ಮಹಾರಾಜರು ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು, ಬನ್ನಿಮಂಟಪಕ್ಕೆ ಹೋಗುತ್ತಿದ್ದರು. ಇದು ಒಂದು ಕಾಲದಲ್ಲಿ ನಡೆಯುತ್ತಿತ್ತು. ಆಗ ಮಧ್ಯೆ ಮಧ್ಯೆ ಪ್ರಜೆಗಳು ತಮ್ಮ ಭಕ್ತಿಸೂಚಕವಾಗಿ ಒಂದು ತಡಿಕೆಯಲ್ಲಿ ಹಣ್ಣು, ಹೂವು, ಮುಂತಾದ ಪದಾರ್ಥಗಳನ್ನು ಇಟ್ಟು ಅದಕ್ಕೆ ಒಂದು ಕೋಲನ್ನು ಕಟ್ಟಿ, ಆನೆಯ ಮೇಲಕ್ಕೆ ಏರಿಸುತ್ತಿದ್ದರು. ಆಗ ಮಹಾರಾಜರು ಹಸನ್ಮುಖದಿಂದ ಅದನ್ನು ಮುಟ್ಟಿ, ಕೊಟ್ಟವರನ್ನು ನೋಡಿ ಕೈಯಿಂದ ಅಭಿನಂದಿಸುತ್ತಿದ್ದರು. ಇಷ್ಟಕ್ಕೆ ಅದು ಪ್ರಸಾದದಂತೆ ಪ್ರಜೆಗಳು ಸಂತೋಷವಾಗಿ ತೆಗೆದುಕೊಂಡು ಹೋಗುತ್ತಿದ್ದರು.

ಆಯುರ್ವೇದ ವೈದ್ಯದಲ್ಲಿ ಔಷಧಿ ಮಾಡುವುದಕ್ಕಾಗಿ ಕೆಲವು ಮಂತ್ರಗಳಿಂದ ಹೋಮಗಳನ್ನು ಮಾಡಿ, ಬ್ರಾಹ್ಮಣರ ಭೋಜನ ಮಾಡಿಸಿ, ನಂತರ ಬ್ರಾಹ್ಮಣರ ಊಟ ಮಾಡಿ ಉಳಿಸಿದ ಎಂಜಲು ಅನ್ನವನ್ನು ತೆಗೆದುಕೊಂಡು ಅದನ್ನು ಭಸ್ಮ ಮಾಡುತ್ತಿದ್ದರು. ಇದು ಔಷಧಿಯಾಗುತ್ತಿತ್ತು. ಅಂದರೆ ತೀರ್ಥ, ಪ್ರಸಾದ, ಔಷಧಿಗಳ ಮಹಿಮೆ ಏನು ಎಂಬುದು ಇಲ್ಲಿ ತಿಳಿಸಿದೆ. ಇದರ ಹಿನ್ನೆಲೆಯಿಂದ ಮುಂದಿನ ವಿಚಾರ ಹೇಳುತ್ತೇವೆ.

ಯೋಗ್ಯರಾದ ಹರಿಭಕ್ತರಾದ ಒಬ್ಬ ಯತಿಗಳಿಗೆ ಭೋಜನ ಮಾಡಿಸಿದರೆ, ಸಾಕ್ಷಾತ್ ಹರಿಯೇ ಭೋಜನ ಮಾಡಿದಂತಾಗುತ್ತದೆ. ಈ ಕಾರಣದಿಂದ ಹಸ್ತೋದಕವೆಂದರೆ ಯತಿಗಳಿಗೆ ಭೋಜನ ಮಾಡಿಸುವುದು ಎಂದರ್ಥ. ಯತಿಗಳು ಜೀವಂತರಾಗಿದ್ದಾಗ ಪ್ರತ್ಯಕ್ಷ ಭೋಜನ ಮಾಡುತ್ತಾರೆ. ಅವರು ದೇಹ ಬಿಟ್ಟು, ವೃಂದಾವನಾಂತರ್ಗತರಾದ ಮೇಲೆ ನಂತರ ಹೇಳಿದ ಭೋಜನ ಮುಂತಾದ ಯಾವ ಕಾರ್ಯಗಳು ನಡೆಯುವುದಿಲ್ಲ ದೇವಸ್ವಭಾವ ಎಂದರೆ "ದೇವರು ಯಾವ ರೀತಿ ಭೋಜನ ಮಾಡುತ್ತಾನೋ ಎಂದರೆ ನೋಡುವುದರಿಂದ ಮಾತ್ರ. ಅದರಂತೆ ಗುರುಗಳೂ ಸಹ ಕೇವಲ ಕೃಪೆಯಿಂದ ನೋಡುವುದರ ಮೂಲಕ ಭೋಜನ ಮಾಡುತ್ತಾರೆ". ಆದ್ದರಿಂದ ಹಿಂದೆ ಹೇಳಿದ ರಾಜರು ಮುಟ್ಟಿದ ಪದಾರ್ಥವೇ ಪ್ರಸಾದವಾದಾಗ, ಇನ್ನು ತಪಸ್ವಿಗಳಾದ, ತೇಜೋಮಯವಾದ ರೂಪದಲ್ಲಿ ಇರುವ ಗುರುಗಳು ದರುಶನ ಮಾತ್ರದಿಂದ ಸ್ವೀಕರಿಸುವುದರಲ್ಲಿ ಸಂದೇಹವೇನೂ ಇಲ್ಲ. ಆದ್ದರಿಂದ ಇದು ಎಂಜಲೇ ಅಲ್ಲ. ಆದ್ದರಿಂದ ತೀರ್ಥ, ಪ್ರಸಾದ, ಔಷಧಿಗಳು ಹೇಗೆ ಕೆಲಸ ಮಾಡುತ್ತವೋ, ಅದರಂತೆ ಹಸ್ತೋದಕ, ಪಾದೋದಕಗಳೂ ಸಹ ರೋಗನಾಶಕವಾದ ಔಷಧಿಗಳಂತೆ ಕೆಲಸ ಮಾಡುತ್ತವೆ. ಆದುದರಿಂದ ಹಸ್ತೋದಕ ಸ್ವೀಕಾರ ಮಾಡಬೇಕು ಅಂದರೆ ಭೋಜನ ಮಾಡಲೇಬೇಕು. (ನಮ್ಮ ಗುರುಗಳಾದ ಶ್ರೀ ಕಡ್ಡಿಶ್ರೀನಿವಾಸಾಚಾರ್ಯರು ಹೇಳಿದ ಆಪ್ತವಾಕ್ಯ ಪ್ರಮಾಣ.)

ಇಟ್ಟು - ಸುಟ್ಟು - ಕೊಟ್ಟು - ಪ್ರಿಯತಾಂ. ಅಂದರೆ ದೇವರ ನೈವೇದ್ಯಕ್ಕೆ ಇಟ್ಟು ಅಂದರೆ ದೇವರು ಕಣ್ಣಿನಿಂದ ನೋಡಿ ಪ್ರಸಾದ ಮಾಡಿರುತ್ತಾನೆ. ಅನಂತರ ಸುಟ್ಟು - ವೈಶ್ವದೇವ ಮಾಡಿ, ಆಗ ದೇವರು ಕೈಯ್ಯಲ್ಲಿ ಹಾಕಿಕೊಳ್ಳುತ್ತಾನೆ. ಅನಂತರ ಕೊಟ್ಟು - ಬ್ರಾಹ್ಮಣರ ಮುಖದಲ್ಲಿ ಕೊಡುವುದರಿಂದ ಪ್ರತ್ಯಕ್ಷವಾಗಿ ದೇವರು ಭೋಜನ ಮಾಡುತ್ತಾನೆ.

ಆದುದರಿಂದ ಗುರುಗಳೂ ಸಹ ಕರುಣಾಮಯವಾದ ಅನುಗ್ರಹ ನೋಟದಿಂದ ನೋಡಿ, ಅದನ್ನು ಪ್ರಸಾದವಾಗಿ ಮಾಡಿರುತ್ತಾರೆ.

ಕೆಲವರು ವಾಯುದೇವರ ತೀರ್ಥ ಮತ್ತು ಪ್ರಸಾದಗಳನ್ನೂ ಸಹ ತೆಗೆದುಕೊಳ್ಳುವುದಿಲ್ಲ. ದೇವರಿಗೆ ಅತ್ಯಾಪ್ತರಾದ ವಾಯುದೇವರ ನೈವೇದ್ಯವನ್ನು ತೆಗೆದುಕೊಳ್ಳದೆ ಇದ್ದರೆ ದೇವರ ಅನುಗ್ರಹಕ್ಕೆ ಹೇಗೆ ನಾವು ಪಾತ್ರರಾಗುತ್ತೇವೆ? ಅದರಂತೆಯೇ ಅವರ ಭಕ್ತರಾದ ಗುರುಗಳ ನೈವೇದ್ಯವೂ ಸಹ

ಸ್ವೀಕಾರ ಮಾಡತಕ್ಕದ್ದೇ. ವಾಯುದೇವರಿಗೆ ಮತ್ತು ರಾಯರಿಗೆ ಮಾಡಿದ ತೀರ್ಥಗಳನ್ನು ತೆಗೆದುಕೊಳ್ಳದೆ ಇರುವವರು ಅವರಿಗೆ ಮಾಡಿದ ಪಂಚಾಮೃತವನ್ನು ಮಾತ್ರ ಸ್ವೀಕಾರ ಮಾಡುತ್ತಾರೆ. ಇದಕ್ಕೆ ಏನು ಕಾರಣವೋ ಗೊತ್ತಿಲ್ಲ.

## ಹಸ್ತೋದಕ ತೆಗೆದುಕೊಳ್ಳುವುದಕ್ಕೆ ಪ್ರಮಾಣ

"ಯತ್ಕೀರ್ತಿಶ್ರವಣಂ ಮಹಾರ್ಥಿಹರಣಂ ಪ್ರಜ್ಞಾನದಸ್ಫೂರ್ತಿದಂ ಯತ್ಪಾದೋದಕ ಸೇವನಂ ನವನವ ಸ್ವಶ್ರೇಯೋದ್ಭಾವನಂ । ಯದ್ಧಸ್ತೋದಕಪಾವನೌದನಮಹೋ ಸಚ್ಛಾಂತಿಸಂತಾನದಂ ಶ್ರೀಸತ್ಯವ್ರತಯೋಗಿನಂ ನತ ಜನ ಶ್ರೇಯೋವ್ರತಂ ತಂ ಶ್ರಯೇ" - (ಶ್ರೀಸತ್ಯಪರಾಕ್ರಮತೀರ್ಥ ವಿರಚಿತ ಶ್ರೀಸತ್ಯವ್ರತ ಸ್ತೋತ್ರಂ, ಸಾಂಗಲಿ)

ಶ್ರೀಮಂತ್ರಾಲಯ ಪ್ರಭುಗಳ ಮೃತಿಕಾ ಶೌಚದ ಮಣ್ಣು ಶಿಷ್ಯನಿಗೆ ಮದುವೆ ಮಾಡಿಸಿತು. ಶ್ರೀಯಾದವಾರ್ಯರ ಮೃತಿಕಾಶೌಚದ ಮಣ್ಣು ಶಿಷ್ಯನಿಗೆ ತೊನ್ನು ರೋಗ ಪರಿಹಾರ ಮಾಡಿತು. ಶ್ರೀಯಾದವಾರ್ಯರು ದೇಹಬಿಟ್ಟ ಮೇಲೆ ಅವರ ದೇಹಕ್ಕೆ ದಹನ ಮಾಡಿದಾಗ ಅವರ ಮೂಳೆಗಳು ಭಾಗವತ ಶ್ಲೋಕಗಳನ್ನು ಹೇಳುತ್ತಿತ್ತು. ಇದರಿಂದ ಶ್ರೀಹರಿವಾಯುಗಳ ಕೃಪೆಗೆ ಪಾತ್ರರಾದ ಭಕ್ತರ ಸಂಬಂಧವಾದ ಯಾವುದೇ ಪದಾರ್ಥಗಳಾಗಲೀ ನಮಗೆ ಅನಿಷ್ಠ ಪರಿಹಾರ ಮಾಡಿ ಅನುಗ್ರಹ ಮಾಡುವುದರಲ್ಲಿ ಸಂದೇಹವಿಲ್ಲ. ಶ್ರೀವಾದಿರಾಜರು ಕೊಟ್ಟ ಮಂತ್ರಾಕ್ಷತೆ ರಾಜನಿಗೆ ಬಂದಿದ್ದ ಶತ್ರುಗಳ ಕಾಟ ತಪ್ಪಿಸಿತು.

ದೇವರ ಪೂಜೆ ಮಾಡಿದ ಮೇಲೆ ಪೂಜೆ ಮಾಡಿದವರು ಮೊದಲು ತೀರ್ಥವನ್ನು ತೆಗೆದುಕೊಳ್ಳಬಾರದು. ಬೇರೆಯವರಿಗೆ ಕೊಟ್ಟು ತೆಗೆದುಕೊಳ್ಳಬೇಕು. ಸುಧಾಪಂಡಿತರಾದಂತಹ ನಮ್ಮ ಗುರುಗಳು ತಾವು ಮೊದಲು ತೀರ್ಥವನ್ನು ತೆಗೆದುಕೊಳ್ಳದೆ, ಶ್ರೀಮಣಿಮಂಜರಿ ಓದಿದ ಒಬ್ಬ ಬಾಲಕನಿಗೆ ತೀರ್ಥ ಕೊಟ್ಟು ನಂತರ, ತಾವು ತೆಗೆದುಕೊಳ್ಳುತ್ತಿದ್ದರು. ತಮ್ಮ ಶಿಷ್ಯರಿಗೆ ಬ್ರಾಹ್ಮಣಾರ್ಥವಾಗಿ ಊಟಕ್ಕೆ ಹೇಳಿದರೆ ಅವರ ಕಾಲುಮುಟ್ಟಿ ನಮಸ್ಕಾರ ಮಾಡುತ್ತಿದ್ದರು. ಇದು ಇವರಲ್ಲಿದ್ದಂತಹ ಅನುಷ್ಠಾನ, ಅನುಸಂಧಾನ ಮತ್ತು ನಮ್ರತೆ ಇವರಲ್ಲಿದ್ದ ಗುಣವನ್ನು ಸೂಚಿಸುತ್ತದೆ. ಅವರ ಅಂತರ್ಯಾಮಿಯಾಗಿರತಕ್ಕಂತಹ ಭಗವಂತನಿಗೆ ಅಂತ ಹೀಗೆ ಚಿಂತನೆ ಮಾಡುತ್ತಿದ್ದರು.

## ಬಲಿಹರಣ

ಬಲಿಹರಣವೆಂದರೆ - ಇದು ಒಂದು ಕರ್ಮಭಾಗ. ದೇವತೆಗಳಿಗೆ ಒಂದು ಕ್ರಮದಿಂದ ಹವಿಸ್ಸುಗಳನ್ನು ಕೊಟ್ಟು ತೃಪ್ತಿಪಡಿಸುವುದು ಎಂದಭಿಪ್ರಾಯ. ಇದು ಈಗ ಹೆಚ್ಚಿಗೆ ರೂಢಿಯಲ್ಲಿಲ್ಲ. ಒಟ್ಟಿನಲ್ಲಿ ನಮಗೆ ದೇವರು ಕೊಟ್ಟಿರುವ ಆಹಾರವನ್ನು ಇನ್ನೊಬ್ಬರಿಗೆ ಕೊಡದೆ ನಾವು ನಿತ್ಯಭೋಜನ ಮಾಡಬಾರದು. ಇದಕ್ಕಾಗಿ ಒಂದು ಹಿಡಿ ಅನ್ನವನ್ನು ಊಟಕ್ಕೆ ಮುಂಚೆ ಬೀದಿಯಲ್ಲಿ ಒಂದು ಜಾಗದಲ್ಲಿ ಹಾಕಿ, ಕೈ ಕಾಲು, ತೊಳೆದುಕೊಂಡು, ಎರಡುಸಾರಿ ಆಚಮನ ಮಾಡಬೇಕು. ಆ ಅನ್ನವನ್ನು ಕಾಗೆ, ನಾಯಿ, ಮುಂತಾದ ಯಾವುದಾದರೂ ಪ್ರಾಣಿಗಳು ಊಟ ಮಾಡಬೇಕು. ಇದು ಬಲಿಹರಣ ಎಂದೆನಿಸಿಕೊಳ್ಳುವುದಿಲ್ಲ. ಆದರೆ ಒಬ್ಬರಿಗೆ ಅನ್ನ ಕೊಟ್ಟು ಊಟ ಮಾಡಿದಂತೆ ಸೂಕ್ಷ್ಮಧರ್ಮ.

## ಸರ್ವ ಸಮರ್ಪಣೆ ಮಾಡುವ ಕ್ರಮ

ವೈದಿಕವಾಗಲಿ (ವೇದೋಕ್ತ ಕರ್ಮಗಳು) ಲೌಖಿಕವಾಗಲಿ (ದಿನಚರಿ ಅಫೀಸಿನ ಕೆಲಸ ಶಾಲೆ, ವ್ಯಾಪಾರ, ಕಾರ್ಖಾನೆ ಇತ್ಯಾದಿಗಳು) ಕೆಲಸ ಮಾಡಿ ಕೊನೆಯಲ್ಲಿ ಸಮರ್ಪಣೆ ಮಾಡುವ ಕ್ರಮ.

| ಕಂಠಪಾಠ ಮಾಡುವುದು | | ಅರ್ಥ ಮಾಡಿಕೊಳ್ಳುವುದು |
|---|---|---|
| ೧. ದೇಶ | : | ಅದಕ್ಕಾಗಿ ಹೋಗುವ ಜಾಗ, ಊರುಗಳು ಇತ್ಯಾದಿ |
| ೨. ಕಾಲ | : | ಅದಕ್ಕಾಗಿ ವಿನಿಯೋಗಿಸುವ ಕಾಲ |
| ೩. ಜಡ | : | ನಮ್ಮ ಶರೀರ |
| ೪. ಚೇತನ | : | ನಮ್ಮ ಜೀವ |
| ೫. ಕರ್ಮ | : | ನಮ್ಮ ಮೂಲಕ ಆಗುವ ಕೆಲಸ ಪಾಠ ಹೇಳುವುದು, ಕೇಳುವುದು, ಆಫೀಸಿನ ಕೆಲಸ ಮಾಡುವುದು, ಮುಂತಾದ ಲೌಖಿಕ ಕೆಲಸಗಳು. |
| ೬. ವಿನಿಯೋಗ | : | ನಮಗೆ ಅಭಿಮುಖವಾಗಿ ಬರುವುದು ಎಂದರೆ ಶಬ್ದದ ಮೂಲಕ ನೋಡುವುದರ ಮೂಲಕ ಇತ್ಯಾದಿಗಳು. |
| ೭. ಫಲ | : | ಇದಕ್ಕಾಗಿ ಬರುವ ಲಾಭ, ಪುಣ್ಯ, ಸಂಬಳ, ಸಂಭಾವನೆ ಇತ್ಯಾದಿ ಲಾಭಗಳು. |
| ೮. ಸಮರ್ಪಣೆ | : | ಪೂರ್ವೋಕ್ತ ಎಲ್ಲಾ ಕರ್ಮಗಳು ಸ್ವತಂತ್ರನಾದ ಶ್ರೀಹರಿಯ ಪ್ರೇರಣೆಯಿಂದ ಎಂದು ತಿಳಿದು ಅಲ್ಲಲ್ಲಿ ತತ್ತತ್‌ದ್ರೂಪ, ತತ್ತತ್‌ನ್ನಾಮ, ತತ್ತತ್‌ತೇಜ, ತತ್ತದ್‌ಭಿನ್ನ, ತಂತಂ ಶ್ರೀನಿವಾಸಂ ನಮಾಮಿ. ಎಂದು ಚಿಂತನೆ ಮಾಡುವುದು. |

ಸ್ವತಂತ್ರ ಕರ್ತಹರಿರೇವ, ಜೀವೋಽಪಿಕರ್ತ ಎಂದರೆ ಎಲ್ಲಾ ಕೆಲಸಗಳು
ಮುಖ್ಯಪ್ರಾಣದೇವರ ಮೂಲಕ ಶ್ರೀಹರಿಯಿಂದ ಮಾಡಿಸಲ್ಪಟ್ಟಿತು.
'ಸರ್ವಯಜ್ಞ ಭುಜೇನಮಃ' ಎಂದು ಶ್ರೀಹರಿಗೆ ಸಮರ್ಪಿಸುವುದು.

ಶ್ರೀ ಮಧ್ವೇಶಾರ್ಪಣಮಸ್ತು

ಮಧ್ವೇಶ ನಿನ್ನ ದಯಯಿಂದ ಆಯಿತು, ಸ್ವತಂತ್ರನಾದ ಹರಿಯಿಂದ ಮಾಡಿಸಿ,
ಅಸ್ವತಂತ್ರವಾಗಿ ನಮ್ಮಿಂದಾಯಿತೆಂದು ಚಿಂತಿಸುವುದು.
ಶ್ರೀಹರಿ ಸುಪ್ರೀತನಾಗು.

### ಚುಟುಕೇಶ್ವರ

'ಯೋ ವೇದ, ನ ವೇದ' ಎಂದರೆ - ನಾನು ಎಲ್ಲವನ್ನೂ ತಿಳಿದುಕೊಂಡಿದ್ದೇನೆ ಎಂದು ಯಾರೂ ತಿಳಿದುಕೊಂಡಿದ್ದಾರೋ ಅವರು ಏನನ್ನೂ ತಿಳಿದುಕೊಳ್ಳದ ದಡ್ಡರು. ಎಲ್ಲವನ್ನು ತಿಳಿದವನು ಶ್ರೀಹರಿ ಒಬ್ಬನೇ - ಆದ್ದರಿಂದ ನಾವು ಎಲ್ಲವನ್ನು ತಿಳಿದುಕೊಂಡಿದ್ದೇವೆಂದರೆ ದೇವರಿಗೆ ಸಮಾನವೆಂದಂತಾಯಿತು. ಇದು ಅನರ್ಥಕರವಾದದ್ದು. ಆದ್ದರಿಂದ ನನಗೇನು ಗೊತ್ತಿಲ್ಲ ಏನೋ ಸ್ವಲ್ಪ ತಿಳಿದುಕೊಂಡಿದ್ದೇನೆ ಎಂದು ತಿಳಿದುಕೊಂಡಿರುವವರೇ ಸರಿಯಾಗಿ ಎಲ್ಲಾ ತಿಳಿದುಕೊಂಡವರು. ಹಾಗೆಂದ ಮಾತ್ರಕ್ಕೆ ದಡ್ಡರಾಗಬಾರದು.

# ಮರ್ಯಾದೆ ಮಾಡಿಸಿಕೊಂಡಾಗ

ನಮ್ಮನ್ನು ಉತ್ತಮವಾದ ಪೀಠದಲ್ಲಿ ಕೂಡಿಸಿ, ನಮಸ್ಕಾರ ಹಾಕಿ, ಹಾರ ಹಾಕಿ, ವಸ್ತ್ರ, ಶಾಲು ಹೊದಿಸಿ, ಬೇಕಾದ ಉಪಚಾರ ಮಾಡಿ ಹೊಗಳಿ, ಭೋಜನ ಮಾಡಿಸಿ, ಕೈಮುಗಿದು ನಿಂತುಕೊಂಡು ಆಶೀರ್ವಾದ ಮಾಡಿ ಅಂತ ಕೇಳಿದರೆ, ಮುಂಚೆ ನಾವು ಮಾಡಬೇಕಾದ್ದು ಏನು ಗೊತ್ತೇ? ಮರ್ಯಾದೆ ಯಾರಿಗೆ ಅಂತ ಪ್ರಶ್ನೆ ಮಾಡಿಕೊಳ್ಳಬೇಕು. ಜೀವ ಅತೀಂದ್ರಿಯ, ಕಾಣಿಸಲ್ಲ - ದೇಹ, ಜಡ, ಸುಖದುಃಖ ರಹಿತ. ಒಳಗೆ ತತ್ತ್ವೇಶ ದೇವತೆಗಳು, ಶ್ರೀಮುಖ್ಯಪ್ರಾಣದೇವರು, ಶ್ರೀಹರಿಯು ಇರುವುದರಿಂದ ಮೇಲಿನ ಮರ್ಯಾದೆ. ಅವರು ಇಲ್ಲದಿದ್ದರೆ ಆಗ ಬೇರೆ ತರಹ ಮರ್ಯಾದೆ. ದೇಹವೇ ನಾನು ಅಂತ ತಿಳಿದುಕೊಂಡರೆ ಜೀವಜಡಭೇದ ಹೋಗಿ ಚಾರ್ವಾಕನ ಮತವಾಗುತ್ತದೆ. ನನಗೇ ಮರ್ಯಾದೆ ಆಯಿತು ಅಂತ ತಿಳಿದರೆ "ಅಹಂ ಬ್ರಹ್ಮಾಸ್ಮಿ" ಜೀವ ಈಶ ಭೇದ ಹೋಗಿ ಅಂಧತಮಸ್ಸಿಗೆ ಹೋಗಬೇಕಾಗುತ್ತದೆ. ನೋಡಿ! ನಾನೇ ದೇವರು ಎಂದು ಆಗುತ್ತೆ. ಮರ್ಯಾದೆ ಮಾಡಿಕೊಂಡಿದ್ದರ ಮಹಿಮೆ ಗೊತ್ತಾಯಿತೆ? ಹಾಗಾದರೆ ಏನು ಮಾಡಬೇಕು ಅಂದರೆ, ಈ ಮರ್ಯಾದೆ ನಮ್ಮ ಅಂತರ್ಯಾಮಿಯಾದ ತತ್ತ್ವೇಶ ದೇವತೆಗಳೊಳಗೆ, ಶ್ರೀಮುಖ್ಯಪ್ರಾಣದೇವರು, ಅವರೊಳಗೆ ಇರುವ ಶ್ರೀಹರಿಗೆ ಅರ್ಪಿಸಬೇಕು. ಆಗ ಪ್ರಸಾದರೂಪವಾಗಿ ಶ್ರೀಹರಿ ಮಾಡಿಸಿರುವ ಮರ್ಯಾದೆ ನಮಗೆ ಎಂದು ಅನುಸಂಧಾನ ಮಾಡಿ, ನಿರ್ಲಿಪ್ತರಾಗಬೇಕು. ಹೀಗೆ ಮಾಡಿದರೆ ಅಹಂಕಾರ ತಪ್ಪಿ, ಭಗವಂತನ ಕರುಣೆ ಅಂತ ಬುದ್ಧಿ ಬರುತ್ತೆ. "ಸುಖಾತ್ ಸುಖತರಂ ಯಾಂತು ಸರ್ವೇ ಭೀಮಾರ್ಜುನಾದಯಃ"

## ಅವಮಾನ ಆದಾಗ

ನಾನೇ, ನನ್ನ ದೇಹ ಅಂತ ಅಭಿಮಾನ ಬಿಟ್ಟು ನಮ್ಮ ಅಂತರ್ಯಾಮಿಯಾದ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತನಾದ ಶ್ರೀಹರಿಯಿಂದ, ನಮ್ಮ ಪಾಪದ ಫಲವಾಗಿ ಒದಗಿಸಿದ್ದಾನೆ. ಇದು ಶಿಕ್ಷಾರೂಪವಾಗಿ ನಮ್ಮಲ್ಲಿರುವ ತತ್ತ್ವೇಶದೈತ್ಯರಿಗೆ ಹೋಗಲಿ ಅಂತ ತಿಳಿಯಬೇಕು. ಇದನ್ನು ಭಗವಂತನಿಗೆ ಪಾದುಕೆಯಂತೆ ಅರ್ಪಿಸಬೇಕು. ನಮ್ಮ ಪಾಪ ಹೋಯಿತು ಎಂದು ಚಿಂತಿಸಿ ನಿರ್ಲಿಪ್ತರಾಗಬೇಕು. ಅವಮಾನ ಮಾಡಿದವರ ಕೂಡ ಜಗಳಕ್ಕೆ ಹೋಗಬಾರದು, ಬೈಯ್ಯಬಾರದು. "ಅಪಮಾನವಾದರೆ ಒಳಿತು, ಅಪರೂಪ ಹರಿಯನಾಮ". ದುಷ್ಟಮನುಜರು ನುಡಿವ ನಿಷ್ಠುರದ ನುಡಿ ತಾಳು - ಪಾಪೋಸು (ಎಲ್ಲಾ ಪಾಪಗಳು) ಹೋಯಿತಲ್ಲ (ದಾಸವಾಣಿ) ಇದು ಒಂದು ತಪಸ್ಸು ಆಗುತ್ತದೆ. "ಕಷ್ಟಾತ್ ಕಷ್ಟತರಂಯಾಂತು ಸರ್ವೇ ದುರ್ಯೋಧನಾದಯಃ"

## ಆಶೀರ್ವಾದ ಮಾಡುವಾಗ

ನಮಸ್ಕಾರ ಹಾಕಿಸಿಕೊಂಡವರಿಗೆ, ಒಳಗೆ ತಾನು ಯಾರು ಅಂತ ಅವರಿಗೇ ಮೊದಲು ಗೊತ್ತಿಲ್ಲ. ನಮಸ್ಕಾರ ಹಾಕಿದವರಿಗೂ ಒಳಗೆ ಸಹ ತಾನು ಯಾರು ಅಂತ ಅವರಿಗೂ ಗೊತ್ತಿಲ್ಲ. ನಮಸ್ಕಾರ ಕಾರ್ಯ ಮೇಲ್ನೋಟಕ್ಕೆ 2 ದೇಹಗಳ ಕಾರ್ಯ. ನಮಸ್ಕಾರ ಹಾಕಿದವರು ಏನು ಬೇಕು ಅಂತ ನಮಸ್ಕಾರ ಮಾಡುತ್ತಾರೆ ಅಂತ ಹಾಕಿಸಿಕೊಂಡವರಿಗೆ ಗೊತ್ತಿಲ್ಲ. ದೇವರು ಒಬ್ಬರಲ್ಲಿ ನಮಸ್ಕಾರ ಹಾಕಿಸಿ, ಇನ್ನೊಬ್ಬರಲ್ಲಿ ಹಾಕಿಸಿಕೊಂಡ ಅಂತ ಅನುಸಂಧಾನ ಮಾಡಿ, "ನಿಮಗೆ ದೇವರು ಒಳ್ಳೇದು ಮಾಡಲಿ " ಅಂತ ಆಶೀರ್ವಾದ ಮಾಡಿದರೆ (ನಮ್ಮಲ್ಲಿರುವ ಶ್ರೀಹರಿವಾಯುಗಳು ನಿಮಗೆ ಒಳ್ಳೇದು ಮಾಡಲಿ, ನಿಮ್ಮ ಇಷ್ಟ ನೆರವೇರಿಸಲಿ ಎಂದು ಪ್ರಾರ್ಥಿಸುವುದು, ಐಹಿಕ ಆಮುಷ್ಮಿಕ ಎಲ್ಲಾ ಇದರಲ್ಲಿ ಸೇರಿಹೋಯಿತು) ನಾವು ಜವಾಬ್ದಾರಿಯಿಂದ ಬಿಡುಗಡೆ ಮಾಡಿಕೊಂಡು ಅದನ್ನು ಶ್ರೀಹರಿವಾಯುಗಳಿಗೆ ವಹಿಸಿದಂತಾಯಿತು. ನಮಗೇ ನಮಸ್ಕಾರ ಹಾಕಿದರು ಎಂದು ತಿಳಿದುಕೊಂಡರೆ, ನಮಸ್ಕಾರ ಹಾಕಿದವರ ಪಾಪ ನಾವು ಹೊತ್ತುಕೊಳ್ಳಬೇಕಾಗುತ್ತದೆ. ಶ್ರೀಹರಿವಾಯುಗಳು ಸರ್ವಜ್ಞರಾದ್ದರಿಂದ ಏನು ಮಾಡಬೇಕು ಎಂದು ಅವರಿಗೆ ಗೊತ್ತು.

## ದಾನ ಮಾಡುವಾಗ ಮತ್ತು ತೆಗೆದುಕೊಳ್ಳುವಾಗ

ದಾನ ಎಂದರೆ ತ್ಯಾಗ ಮಾಡುವುದು. ನಮ್ಮ ವಸ್ತುಗಳನ್ನು ಇನ್ನೊಬ್ಬರಿಗೆ ಕೊಡುವುದು. ಇದು ನಮಸ್ಕಾರ ಮಾಡುವುದರಿಂದ ಪ್ರಾರಂಭಿಸಿ ಭೋಜನ ಮಾಡಿಸುವುದು ಮತ್ತು ಉಪಕಾರ ಮಾಡುವುದರ ಪರ್ಯಂತ ಅವಾಂತರ ಭೇದಗಳಿಂದ ಕೂಡಿರುತ್ತದೆ. ಇದರ ಹಿನ್ನೆಲೆ ನಮ್ಮ ಪಾಪಗಳನ್ನು ಉಪಾಯವಾಗಿ ಇನ್ನೊಬ್ಬರಿಗೆ ಕೊಟ್ಟು ಅವರ ಪುಣ್ಯಗಳನ್ನು ತೆಗೆದುಕೊಳ್ಳುವುದು. ಅಗಸನ ಕತ್ತೆಯನ್ನು ಕುಂಬಾರ ತೆಗೆದುಕೊಂಡು ಹೋಗಿ ದೊಂಬರನಿಗೆ ಕೊಟ್ಟಂತೆ. ಅಗಸ ಕತ್ತೆಯನ್ನು ಸೃಷ್ಟಿ ಮಾಡಿಕೊಂಡಿಲ್ಲ. ದೇವರು ಕತ್ತೆಯನ್ನು ಸೃಷ್ಟಿಸಿ, ಅಗಸನಿಗೆ ಕೊಟ್ಟಿದ್ದಾನೆ ಅಷ್ಟೆ. ಆದ್ದರಿಂದ ಕತ್ತೆ ಅಗಸನ ಸ್ವಂತದ್ದಲ್ಲ. ದೇವರಿಂದ ದತ್ತವಾದದ್ದು. ಇನ್ನು ಕುಂಬಾರ ದೊಂಬರ ಇಬ್ಬರ ಬಗ್ಗೆ ಹೇಳಬೇಕಾದ್ದೆ ಇಲ್ಲ. ಅಂತು ಕತ್ತೆ ಕುಂಬಾರನಿಂದ ದೊಂಬರನಿಗೆ ಹೋಗಿ ಸೇರಿತು.

"ತನು ನಿನ್ನದು ಜೀವನ ನಿನ್ನದು ಅನುದಿನದಲಿ ಬಾಹೋ ಸುಖ ದುಃಖ ನಿನ್ನದಯ್ಯ" (ಶ್ರೀಕನಕದಾಸರ ವಾಣಿ) ಅಂದರೆ ನಮ್ಮ ದೇಹವನ್ನು ನಾವೇ ಮಾಡಿಕೊಂಡಿದ್ದಲ್ಲ.

ದೇವರು ಸೃಷ್ಟಿ ಮಾಡಿಕೊಟ್ಟದ್ದು. ಸ್ವಲ್ಪ ದಿವಸ ಇರುವುದಕ್ಕೆ ಕೊಟ್ಟ ಬಾಡಿಗೆ ಮನೆ. ಆದ್ದರಿಂದ ನಾವು ಬಾಡಿಗೆದಾರರು. ಮಾಲೀಕ ಶ್ರೀಹರಿ. "ನೀ ಕೊಟ್ಟ ಬಿಡಾರದಲಿ ಇನ್ನು ಎಷ್ಟುದಿನ ಇರಲಿ ಶ್ರೀಹರಿಯೆ" (ಶ್ರೀವಾದಿರಾಜರ ವಾಣಿ) ಒಂದು ದಿನ ಇದನ್ನು ಬಿಟ್ಟುಹೋಗಲೇಬೇಕು. ಅಂದರೆ ಇದು ಶಾಶ್ವತವಲ್ಲ. ಈ ದೇಹವೇ ನಮ್ಮ ಸ್ವಂತ ಅಲ್ಲವಾದ ಮೇಲೆ, ಇದಕ್ಕೆ ಸಂಬಂಧವಾದ ಮನೆ ಮಠ ಆಸ್ತಿ, ಪಾಸ್ತಿ, ಹೆಂಡತಿ ಮಕ್ಕಳು, ಯಾವುದೂ ನಮ್ಮದಲ್ಲ. ತಾತ್ಕಾಲಿಕವಾಗಿ ಸ್ವಲ್ಪ ದಿನ ಋಣಾನುಬಂಧರೂಪವಾಗಿ ಸಂಪರ್ಕವಿರುತ್ತೆ. ಅನಂತರ ಬದಲಾವಣೆಯಾಗುತ್ತೆ. ಸುಖದುಃಖಗಳೂ ಸಹ ನಮ್ಮ ಕರ್ಮಾನುಸಾರವಾಗಿ ದೇವರಿಂದ ಒದಗಿಸಿ, ನಾವು ಅನುಭವಿಸಬೇಕಾಗುತ್ತೆ. ದೇವರಿಂದ ಇವೆಲ್ಲಾ ಆಯಿತು ಅಂತ ತಿಳಿದರೆ ದೈಹಿಕ ದುಃಖವಿದ್ದರೂ ಮಾನಸಿಕ ದುಃಖ ಕಡಿಮೆಯಾಗುತ್ತದೆ. ನಾವೇ ಮಾಡಿಕೊಂಡೆವು ಎಂದು ತಿಳಿದರೆ, ದೈಹಿಕ ದುಃಖ ಜೊತೆಗೆ ಮಾನಸಿಕ ದುಃಖವೂ ಜಾಸ್ತಿಯಾಗುತ್ತೆ. "ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದವರಂತೆ ಕಾಣಿರೋ । ಹರಿಯ ಕರುಣದೊಳಾದ ಭಾಗ್ಯವ ಹರಿಸಮರ್ಪಣೆ ಮಾಡಿ ಬದುಕಿರೋ ।" - ನಮ್ಮ ಮನಸ್ಸಿನಲ್ಲಿ ಮನವೆಂದೆನಿಸಿಕೊಂಡು ದಾನ ಮಾಡಿಸುವ ಬುದ್ಧಿ ಕೊಡುತ್ತಾನೆ. ದಾನದ ಪದಾರ್ಥಗಳನ್ನು ನಾವು ಯಾವುದನ್ನೂ ಸೃಷ್ಟಿ ಮಾಡಿಕೊಂಡಿಲ್ಲ. ಎಲ್ಲಾ ದೇವರೇ ಸೃಷ್ಟಿ ಮಾಡಿದ್ದು. ಅದನ್ನೇ ನಮಗೆ ಒದಗಿಸಿಕೊಟ್ಟು, ದಾನ ತೆಗೆದುಕೊಳ್ಳಲು ಬೇರೆ ಇನ್ನೊಬ್ಬರನ್ನು ಒದಗಿಸಿದ. ಮೇಲಿನ ದಾಸವಾಣಿ ಇದನ್ನೇ ಹೇಳುತ್ತಿದೆ. ನಮ್ಮ ಗುರುಗಳು ಇದನ್ನು ಸುಲಭ ಮಾಡಿ ಹೇಳಿಕೊಟ್ಟಿದ್ದಾರೆ. "ಕೊಡುವವರಲ್ಲಿ ರಾಮದೇವರು ಇದ್ದುಕೊಂಡು, ತೆಗೆದುಕೊಳ್ಳುವುದರಲ್ಲಿ ವಾಮನದೇವರಿಗೆ ಕೊಟ್ಟಿರುತ್ತಾರೆ. ಕೊಟ್ಟೋರ್ಗೆ ಹೋಯ್ತು, ಕೊಂಡೋರಿಗೆ ಇಲ್ಲ ಡುಂಡುಂ"

ರಾಮದೇವರು ವಾಮನದೇವರಿಗೆ ಕೊಟ್ಟರು ಅಂತ ಅಭಿಪ್ರಾಯ. ಅಲ್ಲಿಗೆ ಪದಾರ್ಥ ನಮ್ಮದು ಅಂತ ಆಗಲಿಲ್ಲ, ಹಾಗೆಯೇ ತಿಳಿದುಕೊಳ್ಳಬೇಕಾದ್ದು. ಕೊಟ್ಟೋರಿಗೆ ಹೋಯ್ತು ಅಂದರೆ ಪದಾರ್ಥ ಹೋಯ್ತು ಅಂತ ಅಲ್ಲ. ಆ ರೂಪದಲ್ಲಿ ಪಾಪ ಹೋಯ್ತು ಎಂದು ಅಭಿಪ್ರಾಯ. ಕೊಂಡೋರಿಗೆ ಇಲ್ಲ ಅಂದರೆ ಪದಾರ್ಥ ಇಲ್ಲ ಅಂತ ಅಲ್ಲ, ಅಂದರೆ ಪಾಪ ಬರಲಿಲ್ಲ ಅಂತ ಅರ್ಥ. ಇಲ್ಲಿ ಬಹಳ ಎಚ್ಚರಿಕೆಯಿಂದಿರಬೇಕು. ಏನು ಗೊತ್ತೇ? ಪದಾರ್ಥದ ಮೇಲಿನ ನನ್ನದು ಎಂಬ ಅಭಿಮಾನ ಇಬ್ಬರಿಗೂ ಇರಕೂಡದು. ತಕ್ಷಣ ಯಾರಾದರೂ ಕೇಳಿದರೆ ಕೈಯೆತ್ತಿ ಶ್ರೀಕೃಷ್ಣಾರ್ಪಣಮಸ್ತು ಎಂದು ಕೊಡಲು ಸಿದ್ಧವಾಗಬೇಕು. ಇಲ್ಲೇ ಅವರ ಸತ್ವಪರೀಕ್ಷೆ. - ಡುಂಡುಂ ಯಾಕೆ ಅಂದರೆ ಡಂ ಡರಕಾಯನಮಃ ಅಂದರೆ ಶ್ರೀಹರಿಯ ಹೆಸರು. ಡುಂ ಡುಂ ಎಂದ ಮೇಲೆ ತಿರುಗಿ ನೋಡಿ

ನಗುತ್ತಾರೆ. ಅಂದರೆ ಆಗ ಅವರಿಗೆ ಈಕಡೆ ಗಮನ ಬಂತು ಎಂದರ್ಥ. ಅದುವರೆವಿಗೂ ಅವರು ಎಲ್ಲೋ ನೋಡುತ್ತಿರುತ್ತಾರೆ. ಇದೇ ಡುಂಡುಂ ಮಹಿಮೆ.

ಕೊಟ್ಟವರು, ಕೊಂಡವರೂ ಇಬ್ಬರೂ ಸಹ ಬ್ಯಾಂಕಿನ ಜವಾನರು. ಬ್ಯಾಂಕಿನ ದುಡ್ಡು ಖಜಾನೆಗೆ ಕಟ್ಟಬೇಕಾದ್ದು ಒಬ್ಬ ಜವಾನನ ಕೆಲಸ. ಅದನ್ನು ತೆಗೆದುಕೊಳ್ಳಬೇಕಾದ್ದು ಇನ್ನೊಬ್ಬನ ಕೆಲಸ. ದುಡ್ಡು ಮಾತ್ರ ಇಬ್ಬರದೂ ಅಲ್ಲ. ಇದರಂತೆ ದಾನ ಮಾಡುವವರು, ತೆಗೆದುಕೊಳ್ಳುವವರು ಗೊತ್ತಾಯಿತೇ? ನೋಡಿ ದಾನದ ಮಹಿಮೆ. ಹೀಗೆ ಎಲ್ಲಾ ವಿಚಾರಗಳಲ್ಲಿಯೂ ಸಹ ಅಭಿಮಾನ ಬಿಟ್ಟು ಕರ್ಮ ಮಾಡುವ ಸ್ವಭಾವ ಬೆಳೆಸಿಕೊಂಡರೆ ನಾನು ನನ್ನದು ಎಂಬ ಅಭಿಮಾನ ಕಡಿಮೆಯಾಗಲು ದಾರಿಯಾಗುತ್ತದೆ. ಇಷ್ಟಕ್ಕೆ ಸಿದ್ಧಿಯಾಯಿತು ಎಂದು ತಿಳಿದುಕೊಳ್ಳಬಾರದು. ಇನ್ನೂ ಪ್ರಾರಂಭ ಅಷ್ಟೆ. ನಿಷ್ಕಾಮ ಕರ್ಮ ಶ್ರೀಹರಿ ಪ್ರೀತಿಗಾಗಿಯೇ ಮಾಡುವುದು. ಇದೇ ಸಂಸಾರದ ಬಿಡುಗಡೆಗೆ ಕಾರಣ.

## ತಪ್ಪದೇ ಓದಿ! ಸಂಕ್ಷಿಪ್ತಾಮೃತ ೧೬ 'ಮ' ಕಾರ ಪರಿಚಯ

ಶ್ರೀಮಣಿಮಂಜರೀ ಮಧ್ವವಿಜಯಗಳು ಮಾಧ್ವರಿಗೆ ಮಾಂಗಲ್ಯವಿದ್ದಂತೆ
ಇವುಗಳನ್ನು ಪಾಠ ಮಾಡದೇ, ಉದ್ಗ್ರಂಥಗಳಿಗೆ ಕೈಹಕಿದರೆ ಎಟುಕದ ದ್ರಾಕ್ಷೀ ಗಿಡಕ್ಕೆ ಕೈಹಾಕಿದಂತೆ (ಆರ್ಯೋಕ್ತಿ)

ಮಾಧ್ವನಾದರೆ ಸಾಲದು ಮಾಧ್ವತ್ವ ಉಳಿಸಿಕೊಳ್ಳಬೇಕು

ಮಾಧ್ವತ್ವ ತಿಳಿಸುವುದೇ → ಶ್ರೀಮಣಿಮಂಜರೀ ಸಂಪೂರ್ಣ ಶ್ರವಣ ಮನನದಿಂದ

ಮಾಧ್ವತ್ವ ದೃಢಪಡಿಸುವುದೇ → ಶ್ರೀಸುಮಧ್ವವಿಜಯ ಸಂಪೂರ್ಣ ಶ್ರವಣ ಮನನದಿಂದ

ಮಹಾಸಂಶಯ ನಿವಾರಣ → ಶ್ರೀಮಹಾಭಾರತತಾತ್ಪರ್ಯನಿರ್ಣಯ ಸಂಪೂರ್ಣ ಶ್ರವಣಮನನದಿಂದ

ಮುಕುಂದ ಪ್ರಸಾದ ಮಹದಾನಂದ ಪ್ರಾಪ್ತಿ → ಶ್ರೀಮಹಾನಂದತೀರ್ಥಭಾಷ್ಯಭಾವದ ಮನೋವಾಗ್ಧಿರಾವರ್ತನದಿಂದ

ಮಣಿಮಂಜರೀ ಪುರಸ್ಕಾರ → ಮಹಾನಂದ ಪ್ರಾಪ್ತಿ

ಮಣಿಮಂಜರೀ ತಿರಸ್ಕಾರ → ಮಣಿಮಂತನ ಪುರಸ್ಕಾರ
ಮಣಿಮಂತನ ಪುರಸ್ಕಾರ → ಮಹಾದುಃಖ ಪ್ರಾಪ್ತಿ

ಸುಧಾಂತ ಅಧ್ಯಯನ ಮಾಡಿದ್ದರೂ ಕೊನೆಗೆ ಪುನಃ
ಮಣಿಮಂಜರೀ ಮಧ್ವವಿಜಯಕ್ಕೆ ಬರಲೇಬೇಕು (ಆರ್ಯೋಕ್ತಿ)

ಶ್ರೀಮಣಿಮಂಜರೀ ಪಾಠವು ೪ ಸರ್ಗಕ್ಕೆ ನಿಲ್ಲಿಸಿದರೆ - ಅರ್ಧಜರತೀ ನ್ಯಾಯದಂತೆ



# ವರ್ಣಾಶ್ರಮಧರ್ಮಗಳು, ಅದರ ಧರ್ಮಕ್ಲೃಪ್ತಿಗಳು

ವರ್ಣಾಶ್ರಮಧರ್ಮಗಳು ದೇವರಿಂದ ವ್ಯವಸ್ಥಿತವಾದದ್ದು. ವೇದಗಳು ಇದಕ್ಕೆ ಪ್ರಮಾಣ. ಇದರಂತೆ ನಡೆಯಬೇಕಾದದ್ದು ಪ್ರತಿಯೊಬ್ಬರ ಮುಖ್ಯ ಕರ್ತವ್ಯ. ಇದರಿಂದಲೇ ಸಮಾಜದಲ್ಲಿ ಸೌಹಾರ್ದ ಬರಲು ಕಾರಣವಾಗುತ್ತದೆ. ಕೆಲವರು ಈ ಭಾವನೆಯನ್ನೆಲ್ಲಾ ತಮ್ಮ ಕುಯುಕ್ತಿಗಳಿಂದ ಅಪಾರ್ಥ ಮಾಡಿ ಜನರಿಗೆ ವರ್ಣಾಶ್ರಮಧರ್ಮದ ವ್ಯವಸ್ಥೆ ದ್ವೇಷಕ್ಕೆ ಕಾರಣ ಎಂದು ಕುಬುದ್ಧಿ ಹುಟ್ಟಿಸಿ, ಈ ವ್ಯವಸ್ಥೆ ಇರಬಾರದು ಎಂದು ಹೇಳಿ ಅದನ್ನು ಕೆಡಿಸಿ, ಹಾಳುಮಾಡಿ, ರಂಪರಾದ್ಧಾಂತ ಮಾಡಿರುತ್ತಾರೆ. ಸರಿಯಾಗಿ ಅರ್ಥ ಮಾಡಿಕೊಂಡರೆ, ಅದರಂತೆ ನಡೆದರೆ, ಖಂಡಿತ ಸಮಾಜದಲ್ಲಿ ಏನೂ ಸಮಸ್ಯೆ ಬರುವುದಿಲ್ಲ. ಸೌಹಾರ್ದಗಳಿಂದ ಇರಲು ಸಾಧ್ಯವಿದೆ. ಅವರವರ ಧರ್ಮಗಳಲ್ಲಿ ನಡೆದುಕೊಂಡು ಹೋಗಿ ಇನ್ನೊಬ್ಬನ ಧರ್ಮಕ್ಕೆ ಕೈಹಾಕದಿದ್ದರೆ ಯಾವ ಸಮಸ್ಯೆಯೂ ಬರುವುದಿಲ್ಲ. "ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ" ಎಂದು ಭಗವದ್ಗೀತೆಯಲ್ಲಿ ಭಗವಂತನ ಅಪ್ಪಣೆ. ಸ್ವಧರ್ಮ ಲೋಪದಿಂದ ಕೂಡಿದ್ದರೂ ಸಹ ಶ್ರೇಯಸ್ಕರವೇ. ಪರಧರ್ಮಕ್ಕೆ ಎಂದೂ ಹೋಗಬಾರದು. ಅದು ಲೌಕಿಕ, ಪಾರತ್ರಿಕ, ಉಭಯ ಭಯಪ್ರದವಾದದ್ದು. ಎಲ್ಲಾ ಒಳ್ಳೆಯ ಧರ್ಮಗಳನ್ನು ಕೆಡಿಸುವುದೇ ಕಲಿಯುಗದ ಧರ್ಮ. ಸಾಧಕರು ಇದಕ್ಕೆ ಬೇಜಾರು ಮಾಡಿಕೊಳ್ಳಬೇಕಾಗಿಲ್ಲ. ಸಾಧ್ಯವಾದಷ್ಟು ಸ್ವಧರ್ಮದಲ್ಲಿ ನಡೆದುಕೊಂಡು ಹೋಗುವುದೇ ಕಲಿಯುಗದಲ್ಲಿ ಮಾಡಬೇಕಾದ ಧರ್ಮ. ಎಲ್ಲಕ್ಕೂ ಪರಿಹಾರ ಶ್ರೀಹರಿನಾಮಸ್ಮರಣೆ ಎಂಬ ಔಷಧಿ ಇದೆ. ಔಷಧಿ ಇದೆ ಎಂದು ಅಪಥ್ಯ ಮಾಡಿ ಫಜೀತಿಗೆ ಒಳಗಾಗಬಾರದು. ಆದಷ್ಟು ಕಷ್ಟಪಟ್ಟು ಅದನ್ನು ಉಳಿಸಿಕೊಳ್ಳುವುದಕ್ಕೆ ಪ್ರಯತ್ನ ಮಾಡಬೇಕು. "ಹುಚ್ಚುಮುಂಡೆ ಮದುವೆಯಲ್ಲಿ ಉಂಡವನೇ ಜಾಣ" ಎಂಬ ನಾಣ್ಣುಡಿ ಇದನ್ನೇ ಹೇಳುತ್ತಿದೆ.

| ವರ್ಣಗಳು | ಜನ್ಮ | ಧರ್ಮ |
|---|---|---|
| ಬ್ರಾಹ್ಮಣ | ದೇವರ ಮುಖದಿಂದ ಜನ್ಮ | ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ (ಷಡ್ಕರ್ಮಗಳು) |
| ಕ್ಷತ್ರಿಯ | ದೇವರ ಭುಜದಿಂದ ಜನ್ಮ | ರಾಜ್ಯವಾಳುವುದು, ಧರ್ಮಸ್ಥಾಪನೆ ಮಾಡುವುದು. |
| ವೈಶ್ಯ | ದೇವರ ತೊಡೆಯಿಂದ ಜನ್ಮ | ವ್ಯಾಪಾರ ವೃತ್ತಿ, ಗೋರಕ್ಷಣೆ |
| ಶೂದ್ರ | ದೇವರ ಪಾದದಿಂದ ಜನ್ಮ | ಮೇಲ್ಕಂಡ ೩ ವರ್ಣದವರ ಸೇವಾ ಮತ್ತು ವ್ಯವಸಾಯ |

ಗೋಪೀಚಂದನ ನಾಮಧಾರಣ ಎಲ್ಲರಿಗೂ ಸಾಮಾನ್ಯವಾದದ್ದು. ಇದರಲ್ಲಿ ಅವಾಂತರ ಭೇದಗಳಿವೆ.

## ಆಶ್ರಮಗಳು ಮತ್ತು ಅದರ ಧರ್ಮಗಳು

**ಆಶ್ರಮ** : ಬ್ರಹ್ಮಚಾರಿ (ಬ್ರಹ್ಮಚರ್ಯಾಶ್ರಮ)

**ಲಕ್ಷಣ** : ಜುಟ್ಟು, ಜನಿವಾರ, ಕೌಪೀನ, ದಟ್ಟಿಪಂಚೆ ಉಡುವುದು.

### ಮಾಡಬೇಕಾದ ಸ್ವಧರ್ಮಗಳು

ತ್ರಿಕಾಲ ಸಂಧ್ಯಾವಂದನ, ಅಗ್ನಿಕಾರ್ಯ, ವೇದಾಧ್ಯಯನ,
ಹಿರಿಯರಿಗೆ ವಿಧೇಯತೆಯಿಂದ ನಡೆದುಕೊಳ್ಳುವುದು.

**ಮಾಡಬಾರದ ಪರಧರ್ಮ**

ಕಚ್ಚೆ ಪಂಚೆ ಉಡುವುದು, ಕಾಚ ಹಾಕಿಕೊಳ್ಳುವುದು, ತಾಂಬೂಲಗಳು ಹಾಕಿಕೊಳ್ಳುವುದು, ಇತ್ಯಾದಿ.

**ಆಶ್ರಮ** : ಗೃಹಸ್ಥಾಶ್ರಮ
**ಲಕ್ಷಣ** : ಜುಟ್ಟು, ಜನಿವಾರ, ಕಚ್ಚೆಪಂಚೆ, ಉತ್ತರೀಯ ಧಾರಣೆ.

**ಮಾಡಬೇಕಾದ ಸ್ವಧರ್ಮಗಳು**

ತ್ರಿಕಾಲ ಸಂಧ್ಯಾವಂದನೆ, ಔಪಾಸನ, ದೇವರಪೂಜಾ, ವೈಶ್ವದೇವ, ಯಾಜನ , ಯಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ, ಅತಿಥಿ ಅಭ್ಯಾಗತರ ಪೂಜೆ, ಪಾಠ ಪ್ರವಚನಾದಿಗಳು.

**ಮಾಡಬಾರದ ಪರಧರ್ಮಗಳು**

**ದಟ್ಟಿಪಂಚೆ ಉಡುವುದು, ಕೌಪೀನ ಧರಿಸುವುದು, ಇತ್ಯಾದಿಗಳು.**

ಆಶ್ರಮ : ವಾನಪ್ರಸ್ಥಾಶ್ರಮ
ಲಕ್ಷಣ : ನಾರುಬಟ್ಟೆ ಧರಿಸುವುದು, ಉಳಿದೆಲ್ಲವೂ ಗೃಹಸ್ಥನಂತೆ.

**ಮಾಡಬೇಕಾದ ಸ್ವಧರ್ಮಗಳು**

ದಂಪತಿಗಳ ಸಹಿತವಾಗಿ ವನಪ್ರವೇಶ ಮಾಡಬೇಕು. ಅಲ್ಲಿ ಕೆಳಗೆಬಿದ್ದ ಹಣ್ಣುಗಳನ್ನು ಮಾತ್ರ ಆಹಾರವಾಗಿ ಸ್ವೀಕರಿಸಬೇಕು. ಯಾವ ಪ್ರಾಣಿಹಿಂಸೆಯನ್ನೂ ಮಾಡಬಾರದು. ತಪಸ್ಸು ಮಾಡಬೇಕು. ಹರಿತವಾದ ಕತ್ತಿಯನ್ನು ಇಟ್ಟುಕೊಂಡು ಯಾವ ಅಂಗದಿಂದ ಪಾಪವಾಗುತ್ತದೋ ಆ ಅಂಗವನ್ನು ಛೇದಿಸಿಕೊಳ್ಳಬೇಕು.

**ಮಾಡಬಾರದ ಪರಧರ್ಮ**

ಊರಿಗೆ ಎಂದೂ ವಾಪಸ್ಸು ಬರಬಾರದು.

ಆಶ್ರಮ : ಪರಮಹಂಸ ಸನ್ಯಾಸಾಶ್ರಮ
ಲಕ್ಷಣ :

ಶಾಸ್ತ್ರೋಕ್ತವಾದ ಕೆಲವು ಕರ್ಮಗಳ ನಂತರ ಶಿಖ, ಕಟಿಸೂತ್ರ, ಯಜ್ಞೋಪವೀತ ವಿಸರ್ಜನೆ. ಗುರುಗಳಿಂದ ಕೊಟ್ಟ ಬಟ್ಟೆಯಲ್ಲಿ ಮಾಡಿದ ಒಂದು ತುಂಡಿನಿಂದ ಕೌಪೀನಧಾರಣ, ಕಾಷಾಯವಸ್ತ್ರ ಉಡುವುದು, ಹೊದೆವುದು, ದಂಡಕಮಲ ಮರದ ಪಾದುಕೆ ಧರಿಸುವುದು.

**ಮಾಡಬೇಕಾದ ಸ್ವಧರ್ಮಗಳು**

ಅಡಿಗೆ ಮಾಡುವುದು, ಮುಂತಾದ ಸಕಲ ಕರ್ಮಗಳಿಂದ ಬಿಡುಗಡೆ ಮಾಡಿರುತ್ತಾರೆ. ಆ ಕಾಲವನ್ನೆಲ್ಲಾ ತ್ರಿಕಾಲ ಸ್ನಾನ, ಜಪ, ತಪ, ವ್ರತ, ಕಠಿಣವಾದ ನಿಯಮಗಳನ್ನು ಮಾಡುವುದು, ಚಳಿ, ಮಳೆ, ಬಿಸಿಲುಗಳನ್ನು ಸಹಿಸಿಕೊಳ್ಳುವುದು, ಮಾನ, ಅವಮಾನಗಳನ್ನು ಸಹಿಸಿಕೊಳ್ಳುವುದು, ಇದರ ಜೊತೆಗೆ ಪಾಠ, ಪ್ರವಚನ, ಜ್ಞಾನೋಪದೇಶ, ಗ್ರಂಥನಿರ್ಮಾಣ, ಪರಮತಖಂಡನ ಪೂರ್ವಕ ವಿಷ್ಣು ಸರ್ವೋತ್ತಮತ್ವವನ್ನು ಸರ್ವದಾ ಪ್ರತಿಪಾದನ ಮಾಡುವುದು.

**ಮಾಡಬಾರದ ಪರಧರ್ಮಗಳು**

ಸನ್ಯಾಸಾಶ್ರಮ ತ್ಯಾಗ ಮಾಡುವುದು, ಹಣ ಸಂಪಾದಿಸುವುದು, ಹೆಸರು ಸಂಪಾದಿಸುವುದು, ಶ್ರೀಹರಿವಾಯು ವಿರೋಧಿಗಳ ಸಹವಾಸ ಮಾಡುವುದು, ಧರ್ಮದ ಬಗ್ಗೆ ಖಚಿತವಾದ ನಿರ್ಣಯವನ್ನು ಕೊಡದೆ ಸಂದೇಹಾಸ್ಪದವಾಗಿ ಕೊಡುವುದು, ನಾನಾ ತರಹ ಸಾಂಕರ್ಯ ಮಾಡುವುದು. ಪೂರ್ವಾಶ್ರಮದ ನೆಂಟರನ್ನು, ವಿಶೇಷವಾಗಿ ಮಕ್ಕಳನ್ನು ತಮ್ಮ ಸೇವೆಗಾಗಿ ನೇಮಿಸಿಕೊಳ್ಳುವುದು - ಇದು ಹಿಂದಿನ ವ್ಯಾಮೋಹಕ್ಕೆ ಕಾರಣವಾಗಿ ಸನ್ಯಾಸ ಧರ್ಮಕ್ಕೆ ತೊಂದರೆ ಬರುತ್ತದೆ.

**ಆಶ್ರಮ** : ಮುತ್ತೈದೆ (ಸುಮಂಗಲೀ)
**ಲಕ್ಷಣ** :

ಕಚ್ಚೆ ಹಾಕಿದ ಸೀರೆ, ಕಂಚುಕಧಾರಣ (ಕುಪ್ಪಸ), ಗೋಪೀಚಂದನಧಾರಣದಿಂದ ತಿಲಕಧಾರಣ, ಗದಾನಾರಾಯಣ ಮುದ್ರಧಾರಣ, ಅರಿಶಿನಕುಂಕುಮ ಧಾರಣ ಮಾಡುವುದು. ಗಂಡಸರಿಗೆ ಯಜ್ಞೋಪವೀತವಿದ್ದಂತೆ, ಮುತ್ತೈದೆಯರಿಗೆ ಕಂಚುಕ ಎಂಬುವುದು.

**ಮಾಡಬೇಕಾದ ಸ್ವಧರ್ಮಗಳು**

ಗೃಹಕರ್ಮವ ಬೇಸರಿಸದೆ ಮೂರುಲೋಕ ಮಹಿಮನ ಸೇವೆ ಇದೆನ್ನುತ ಅಹರ್ ಅಹರ್ ಚಿಂತಿಸತಿಪ್ಪುದೇ ಫಲವಿದು ಬಾಳ್ದುದಕೆ. (ಶ್ರೀಜಗನ್ನಾಥದಾಸರ ವಾಣಿ)

ಮನೆಯನ್ನು ಗೋಮಯದಿಂದ ಸಾರಿಸಿ, ರಂಗೋಲಿ ಇಡುವುದು, ಪಾತ್ರೆಗಳನ್ನು ಶುದ್ಧವಾಗಿಟ್ಟುಕೊಳ್ಳುವುದು, ಪದಾರ್ಥಗಳನ್ನು ಮುಚ್ಚಿಡುವುದು, ಪದಾರ್ಥಗಳನ್ನು ಶುದ್ಧಿ ಮಾಡಿ ಅಡಿಗೆ ಮಾಡುವುದು, ದೇವರ ನೈವೇದ್ಯಕ್ಕೆ ಅಡಿಗೆ ಮಾಡುವುದು, ಅತಿಥಿಅಭ್ಯಾಗತರಿಗೆ ಭೋಜನ ಬಡಿಸುವುದು, ಮಾವ, ಅತ್ತೆ, ಗಂಡ ಮಕ್ಕಳುಗಳಿಗೆ ಸೇವಾ ಮಾಡುವುದು, ಇಷ್ಟೆಲ್ಲಾ ಮಾಡಿ ಇದನ್ನೆಲ್ಲಾ ಅವರವರಲ್ಲಿರುವ ಶ್ರೀಹರಿಯ ಸೇವೆ ಎಂದು ತಿಳಿಯುವುದು. ಸಂಸಾರದಲ್ಲಿ ಬರತಕ್ಕ ಕಷ್ಟಗಳನ್ನು ಸಹಿಸಿಕೊಂಡು, ಭಗವಂತನ ಸ್ಮರಣೆ ಮಾಡುವುದು. ಇದರ ಜೊತೆಗೆ ಗುರುಮಂತ್ರ ಮತ್ತು ಹೆಂಗಸರು ಹೇಳಬಹುದಾದ ಮಂತ್ರಗಳನ್ನು ಹೇಳಿಕೊಳ್ಳುವುದು.

**ಮಾಡಬಾರದ ಪರಧರ್ಮ**

"ನೇಮವಿಲ್ಲದ ಹೆಣ್ಣು, ಗಜುಗ ಬೆಳೆದಾ ಕಣ್ಣು" (ಶ್ರೀಕನಕದಾಸರ ವಾಣಿ) ಗಂಡಸರಂತೆ ಜುಬ್ಬಪೈಜಾಮ ಹಾಕುವುದು, ಗಂಡಸರು ಹೇಳಬಹುದಾದ ಮಂತ್ರಗಳನ್ನು ಹೇಳುವುದು, ತಾವು ಗಂಡಸಿಗೆ ಸಮಾನ ಎಂದು ತಿಳಿದುಕೊಳ್ಳುವುದು, ಇತ್ಯಾದಿ ಇತ್ಯಾದಿಯಾಗಿ ವಿಚಾರಗಳನ್ನು ಮಾಡುವುದು.

**ಆಶ್ರಮ** : ವಿಧವೆ (ಮಡಿಹೆಂಗಸರು)
**ಲಕ್ಷಣ** : ಮುಂಡನ ಮಾಡಿಸಿಕೊಂಡು, ಗೋಪಿಚಂದನ ಧಾರಣ, ಅಂಗಾರಧಾರಣ ಮಾಡಿಕೊಂಡು, ಬಿಳಿ ಅಥವಾ ಕೆಂಪು ಸೀರೆಯನ್ನು ಮಾತ್ರ ಧರಿಸಬೇಕು. ಕುಪ್ಪಸ ಧರಿಸಬಾರದು.

**ಮಾಡಬೇಕಾದ ಸ್ವಧರ್ಮಗಳು**

ತಮಗೆ ಬಂದ ಈ ಪರಿಸ್ಥಿತಿಗೆ ಬೇಸರಿಸದೆ ವೈರಾಗ್ಯದಿಂದ ದೇವರ ಕಡೆ ಮನಸ್ಸನ್ನು ತಿರುಗಿಸಿಕೊಂಡು, ಅಡಿಗೆ ಮಾಡುವುದು, ದೇವರು, ಬ್ರಾಹ್ಮಣರಿಗೆ ಬಡಿಸುವುದು, ಮನೆ ಸಾರಿಸಿ

ರಂಗೋಲಿ ಹಾಕುವುದು, ಮಕ್ಕಳುಮರಿಗಳಿಗೆಲ್ಲ ಸಂತೋಷಪಡಿಸುವುದು, ಸನ್ಯಾಸಿಗಳಂತೆ ವೈರಾಗ್ಯದಿಂದ ಜೀವನ ಮಾಡಿ, ಭಗವದನುಗ್ರಹಕ್ಕೆ ಪಾತ್ರರಾಗುವುದು ಮತ್ತು ರಾತ್ರಿ ಭೋಜನವಿಲ್ಲ.

## ಮಾಡಬಾರದ ಪರಧರ್ಮಗಳು

ಕುಪ್ಪಸ ಧರಿಸುವುದು, ಒಡವೆ ಧರಿಸುವುದು, ರಾತ್ರಿ ಊಟ ಮಾಡುವುದು, ತಾಂಬೂಲ ಹಾಕಿಕೊಳ್ಳುವುದು, ಮಂಚದ ಮೇಲೆ ಮಲಗುವುದು, ಮುತ್ತೈದೆಯರಂತೆ ಅರಿಶಿನ ಕುಂಕುಮ ಪೂಜೆ ಮಾಡುವುದು.

**ವಿಶೇಷ ವಿಚಾರ** : ಹಿಂದೆ ಒಬ್ಬ ಮುತ್ತೈದೆ ಆಸ್ಪತ್ರೆಯಲ್ಲಿ ನರ್ಸ್ ಕೆಲಸದಲ್ಲಿದ್ದರು. ಅವರಿಗೆ ಕರ್ಮವಶದಿಂದ ವೈಧವ್ಯ ಪ್ರಾಪ್ತಿಯಾಯಿತು. ಆಕೆ ತಕ್ಷಣ ಮಡಿಯಾಗಿಬಿಟ್ಟರು. ಆದರೆ ಕೆಲಸ ಬಿಡಲಿಲ್ಲ. ಕೆಲಸಕ್ಕೆ ಹೋಗುವಾಗ ಟೋಫನ್ ಹಾಕಿಕೊಂಡು ಹೋಗುತ್ತಿದ್ದರು. ಮನೆಗೆ ಬಂದ ಕೂಡಲೇ ಸ್ನಾನ ಮಾಡಿ ತಮ್ಮ ಮುಂದಿನ ಕೆಲಸ ಮಾಡಿಕೊಳ್ಳುತ್ತಿದ್ದರು. ಹೀಗೆ ಬುದ್ಧಿವಂತಿಕೆಯಿಂದ ತಮ್ಮ ಧರ್ಮ ಉಳಿಸಿಕೊಂಡಿದ್ದರು. ಇದೇ ಸ್ವಧರ್ಮ ಶ್ರದ್ಧೆ ಎನ್ನುವುದು. ಮನ್ಮಥನ ಹಿಂದಿನ ಜನ್ಮದಲ್ಲಿ ಸುಂದರ ಎಂಬ ಒಬ್ಬ ರಾಜ. ರತಿದೇವಿ ಆತನ ಹೆಂಡತಿಯಾಗಿದ್ದಳು. ಆಗ ಕಾರಣಾಂತರದಿಂದ ಮುಟ್ಟಾಗಿದ್ದಾಗ ಮನೆಯೆಲ್ಲಾ ಸಂಪರ್ಕ ಮಾಡಿದ ದೋಷದಿಂದ ಮಹಾದೇವರ ಹಣೆಗಣ್ಣಿನ ಬೆಂಕಿಯಿಂದ ಮನ್ಮಥನು ಸುಟ್ಟುಬೂದಿಯಾದನು. ರತಿದೇವಿಗೆ ವೈಧವ್ಯ ಬಂದಿತು. (ಸ್ಕಾಂದ ಪುರಾಣ, ವೈಶಾಖಮಾಸ ಮಹಾತ್ಮೆ, ಆಧಾರ). ಈಗ ಶಾಲೆಯಿಂದ ಹಿಡಿದು, ಬಸ್ಸಿನ ಮೂಲಕ ಆಸ್ಪತ್ರೆ, ಆಫೀಸ್ ವರೆಗೆ ಸಾಮೂಹಿಕ ಸಂಪರ್ಕ ಆಗುತ್ತಿದೆ. ಇದಕ್ಕೆ ಗಂಡಸರಿಗೆ ಮರಣ, ಹೆಂಗಸರ ವೈಧವ್ಯ ಪ್ರಾಪ್ತಿ. ಇದು ಹಿಂದಿನ ಜನ್ಮದ್ದಾದರೂ ಆಗಬಹುದು, ಈ ಜನ್ಮದ್ದಾದರೂ ಆಗಬಹುದು. ಇದಕ್ಕೆ ಮೂಲಕಾರಣ ಕಲಿಪುರುಷನ ಮಹಿಮೆ. ಅವನ ಸಾಧನಕ್ಕಾಗಿ ಜನರಲ್ಲಿ ಪ್ರವೇಶ ಮಾಡಿ ಅಧರ್ಮ ನಡೆಯುತ್ತಿದೆ. ಸಾಧ್ಯವಾದಷ್ಟು ಮಟ್ಟಿಗೆ ಮುಟ್ಟಿನ ಸಂಪರ್ಕ ಕಡಿಮೆ ಮಾಡುವುದು ಸಾಧಕರ ಕರ್ತವ್ಯ. ಅದರ ಕ್ರಮವನ್ನು ಅವರವರೇ ತಿಳಿದುಕೊಳ್ಳಬೇಕು.

## ಮೈಲಿಗೆ ವಿಧವೆಯರು (ಸಕೇಶಿಯರು)

ವೈದ್ಯರು ಚುಚ್ಚುಮದ್ದು ಕೊಟ್ಟಾಗ ನಮಗೆ ನೋವಾಗುತ್ತದೆ, ಆದರೆ ಅದರ ಹಿಂದೆ ಇರುವ ಔಷಧಿ ಒಳಗೆ ಹೋಗಿ ರೋಗ ಗುಣವಾಗುತ್ತದೆ. ಅದರಂತೆ ಈ ಲೇಖನ ತಕ್ಷಣ ಚುಚ್ಚುವಂತಿದ್ದರೂ ಸಹ ಅದರ ಹಿಂದೆ ನಿಮಗೆ ಒಳ್ಳೆಯದು ಆಗಲಿಎಂದು ಶಾಸ್ತ್ರದ ಔಷದಿ ತುಂಬಿರುತ್ತದೆ, ಸರಿಯಾಗಿ ಅರ್ಥಮಾಡಿಕೊಂಡು ಉದ್ದಾರವಾಗಿರಿ. ದೇವರ ನೈವೇದ್ಯಕ್ಕೆ ಅಡಿಗೆ ಮಾಡಬೇಕಾದರೆ ಮೊದಲು ಸ್ನಾನ ಮಾಡಬೇಕು ಇಲ್ಲದಿದ್ದರೆ ಅದು ದೇವರ ನೈವೇದ್ಯಕ್ಕೆ ಬರುವುದಿಲ್ಲ ಇದೊಂದು ಅಧಿಕಾರ. ಗಾಯತ್ರಿ ಜಪ ಮಾಡಬೇಕಾದರೆ ಹುಡುಗನಿಗೆ ಉಪನಯನ ಮಾಡಬೇಕು ಇದೊಂದು ಅಧಿಕಾರ. ವೈಶ್ವದೇವ ಮಾಡಬೇಕಾದರೆ ವಿವಾಹವಾಗಬೇಕು ಇದೊಂದು ಅಧಿಕಾರ. ಸ್ತ್ರೀಯರಿಗೆ ಮುತ್ತೈದೆ ತನ ಬರಬೇಕಾದರೆ ವಿವಾಹ ಸಂಸ್ಕಾರವಾಗಬೇಕು. ಪತಿಯ ಸಂತೋಷಕ್ಕಾಗಿ ಒಡವೆ, ವಸ್ತ್ರ, ಸೀರೆ ಮುಂತಾದ ಎಲ್ಲಾ ಅಲಂಕಾರವೂ ಸಹ ಪತ್ಯಂತರ್ಗತನಾದ ಪರಮಾತ್ಮನ ಪೂಜೆಯನ್ನು ಮಾಡುವುದಕ್ಕೆ ಎಂದು ತಿಳಿದುಕೊಳ್ಳಬೇಕು. ಇಂಥ ಪ್ರೀತಿಪಾತ್ರನಾದ ಗಂಡನು ಕಾರಣಾಂತರದಿಂದ ಮರಣಹೊಂದಿದರೆ ಆಗ ಅಲಂಕಾರ ಸಹಿತವಾಗಿ ಸಹಗಮನ ಸಂಸ್ಕಾರಮಾಡುವ ಸಂಪ್ರಾದಯವಿತ್ತು, ಇದು ಯುಗಾಂತರದ ಮಾತಾಯಿತು. ಈಗ ಇದು ಸಾಧ್ಯವಾದುದಲ್ಲ, ಅದಕ್ಕೆ ಪರ್ಯಾಯವೇ ಮಡಿಯಾಗುವುದು. ಇದೊದು ಅಧಿಕಾರ ಪ್ರಾಪ್ತಿ. (ಆಧಾರ : ಆಷಾಡ ಮಾಸ ಮಹಾತ್ಮ್ಯೆ).

ವೈಧವ್ಯವು ತಾತ್ಕಾಲಿಕ ಶಿಕ್ಷೆಯೇ ಹೊರತು ಮೋಕ್ಷಕ್ಕೆ ಬಾಧಕವಲ್ಲ, ಮಡಿಯಾಗುವುದೇ ಪತಿ ಭಕ್ತಿ ಲಕ್ಷಣ. ಪ್ರತಿವ್ರತೆತನಕ್ಕೆ ಧಕ್ಕೆ ಬರುವುದಿಲ್ಲ, ಉಳಿದ ಜೀವನ ತಪಶ್ಚರ್ಯದಂತೆ ಕಳೆದು ದೇವರು, ಬ್ರಾಹ್ಮಣರ ಸೇವಾದಿಂದ ಶ್ರೀಹರಿಯ ಅನುಗ್ರಹ ಪಡೆದುಕೊಳ್ಳಬಹುದು. ಸುವಾಸಿನಿ ಮುತ್ತೈದೆಯಾಗಿದ್ದಾಗ ಒಂದು ತರಹದ ಕ್ರಮವಿರುತ್ತದೆ. ಮಡಿಯಾದರೆ ಇನ್ನೊಂದು ತರಹ ಕ್ರಮವಿರುತ್ತದೆ ಗೌರವದಿಂದ ಬಾಳುವುದಕ್ಕೆ ಸಾಧ್ಯವಿದೆ. ಎರಡೂ ಇಲ್ಲದೆ ನಡುಮಧ್ಯೆ ಮೈಲಿಗೆಯಿಂದ ಇದ್ದರೆ ಕಾಲಹರಣವಾಗುತ್ತದೆ. ಯಾವ ಅಧಿಕಾರವೂ ಇಲ್ಲದೆ ಆಟಕ್ಕೆ ಉಂಟು ಲೆಕ್ಕಕ್ಕೆ ಇಲ್ಲ ಎಂದು ಆಗಿ ತ್ರಿಶಂಕುಸ್ವರ್ಗದಂತಾಗುತ್ತದೆ. ಹಾಗೂ ಮುತ್ತೈದೆಯಂತೆ ಅರಿಶಿನ, ಕುಂಕುಮ ಪೂಜೆ, ತುಳಸೀಪೂಜೆ ಮಾಡುವುದು, ಮಡಿಯಲ್ಲಿ ಊಟ ಮಾಡುವುದು, ತೀರ್ಥಯಾತ್ರೆ, ಧಾನ, ಧರ್ಮ, ಬ್ರಾಹ್ಮಣರಿಗೆ ಬಡಿಸುವುದು, ಪುರಾಣ ಶ್ರವಣ ಕಾಲದಲ್ಲಿ ಮುಂದೆ ಹೋಗಿ ಕುಳಿತುಕೊಳ್ಳೋಣ, ತೀರ್ಥಮಂತ್ರಾಕ್ಷತೆಗೆ ಮುಂಚೆ ಕೈಹಿಡಿಯೋಣ ಹೀಗೆ ಮಾಡಿದರೆ ಪುಣ್ಯ ಬರುವುದಿಲ್ಲ. ಪಾಪ ಸಂಪಾದನೆಯಾಗುತ್ತದೆ. ಅವರ ಮಕ್ಕಳಿಗೆ ಅನಿಷ್ಟವಾಗುತ್ತದೆ. ದುಡ್ಡು ಕೊಡುತ್ತಾರೆ ಎಂದು ಅಥವಾ ಹೆಸರು ಬರುತ್ತದೆ ಎಂದು ಕೆಲವರು ಇಂಥ ಮೇಲ್ಕಂಡ ಉಪದೇಶವನ್ನು ಮಾಡಿ, ತಾವೂ ನರಕಕ್ಕೆ ಬಿದ್ದು, ನಿಮ್ಮನ್ನೂ ನರಕಕ್ಕೆ ಬೀಳಿಸುತ್ತಾರೆ. ಗಮನವಿರಲಿ. ಬೇಡ ಎಂದು ಹೇಳುವವರೇ ನಿಮ್ಮ ಹಿತ ಬಯಸುವವರು. ಇದು ಹೇಗಿರುತ್ತದೆಂದರೆ "ಅಸತಿಯ ವ್ರತ ನೇಮವೋ, ರಂಡೆ ಕೊರಳ ಸೂತ್ರವೋ" ಎಂಬುದಾಗಿ ದಾಸರು ನುಡಿದಿದ್ದಾರೆ. ಏಕಾದಶೀ ಉಪವಾಸ ಮಾಡುಬಹುದು ಇದಕ್ಕೆ ಬಾಧಕವಿಲ್ಲ. ಎಲ್ಲಾ ಮಾಡಬೇಕು ಎಂದು ಇಷ್ಟ ಇರುವವರು ಅದಕ್ಕೆ ತಕ್ಕಂತೆ ಅದೇ ಶಾಸ್ತ್ರಗಳೇ ತಿಳಿಸುವ ಕ್ರಮಗಳಂತೆ ನಡೆದುಕೊಳ್ಳದೇ ಇದ್ದರೆ ಏನುಮಾಡಿದಂತಾಯಿತು, ಯೋಚನೆ ಸರಿಯಾಗಿ ಮಾಡಿ ನೋಡಿ. ಗರ್ಭಿಣಿಯಾಗಿದ್ದರೆ ಮಡಿಯಾಗುವಂತಿಲ್ಲ, ಕೆಲಸಕ್ಕೆ ಹೋಗುವವರು ಮಡಿಯಾಗಲು ಸಾಧ್ಯವಿಲ್ಲ, ಕಾಯಿಲೆ ರೋಗಗಳಿಂದ ನರಳುತ್ತಿದ್ದರೆ, ಮಡಿಯಾಗಲು ಸಾಧ್ಯವಿಲ್ಲ, ಕೆಲವರು ಮಡಿಯಲ್ಲಿ ಊಟ ಮಾಡಲು ತೊಂದರೆ ಇದೆ ಎಂಬ ಕಾರಣದಿಂದ ಮಡಿಯಾಗುವುದಿಲ್ಲ. ಮೇಲ್ಕಂಡ ಯಾವ ತೊಂದರೆಗಳೂ ಇಲ್ಲದೇ ಇದ್ದರೂ ಸಹ ಕೆಲವರು ಮಡಿಯಾಗುವುದಿಲ್ಲ ಇದಕ್ಕೆ ಏನು ಉತ್ತರ ಹೇಳಬೇಕೆನ್ನುವುದು ಗೊತ್ತಾಗುವುದಿಲ್ಲ ಮೈಲ್ಗೆ ಅನ್ನ ತಿಂದರೂ ಪರವಾಗಿಲ್ಲ ಮಡಿಯಾಗಿಬಿಡಿ ಎಂದು ನಮ್ಮ ಗುರುಗಳು ಹೇಳುತ್ತಿದ್ದರು. ಇನ್ನೂ ಕೆಲವರು ಸಕಲ ಮುತ್ತೈದೆ ಲಕ್ಷಣಗಳಿಂದ ಕೂಡಿ ಮೋಸಗಾರ್ತಿಯಾಗಿರುತ್ತಾರೆ. ಮತ್ತೆ ಕೆಲವು ಗಡಿ ಮೀರಿದ ಸ್ತ್ರೀಮೋಲಂಘಿಣಿಯರು ಎರಡನೇ ಮದುವೆಯನ್ನು ಮಾಡಿಕೊಳ್ಳುತ್ತಾರೆ. ಇದರಿಂದ ಅವರ ತಂದೆಯ ಮನೆಯ ಕುಲಕ್ಕೂ, ಗಂಡನ ಮನೆಯ ಕುಲಕ್ಕು ಅನರ್ಥವನ್ನು ತಂದುಕೊಡುತ್ತಾರೆ. ಇಂಥವರನ್ನೆಲ್ಲಾ, ಹಾಗೆಯೇ ಧರ್ಮ ಕೆಡಿಸುವ ಗಂಡಸರನ್ನು, ಹೆಂಗಸರನ್ನು ಸಹ ಯಮಲೋಕದ ಪೋಲೀಸ್‌ನವರು ಹಿಡಿದುಕೊಂಡು ಹೋಗಿ ಸಂಯಮಿನೀಪುರದ ಹೈಕೋರ್ಟ್ ನಲ್ಲಿ ದಾಖಲು ಮಾಡಿ ಅಲ್ಲಿ ಶ್ರೇಷ್ಠ ನ್ಯಾಯಾಧೀಶರಾದ ಸಮವರ್ತೀಪರೇತರಾಟ್ ಶ್ರೀಯಮಧರ್ಮರಾಜರ ಅಪ್ಪಣೆಯಂತೆ ಅನೇಕ ಶಿಕ್ಷೆಗಳಿಗೆ ಗುರಿಪಡಿಸುತ್ತಾರೆ. ಅಲ್ಲಿ ಯಾವ ಲಂಚಗಳಾಗಲೀ, ಜಾಮೀನುಗಳಾಗಲೀ ಇಲ್ಲ. ಆದ್ದರಿಂದ ಯೋಚನೆ ಮಾಡಿ ಗಂಡಸರಾಗಲೀ, ಹೆಂಗಸರಾಗಲೀ ಆದಷ್ಟು ಧರ್ಮಉಳಿಸಿಕೊಂಡು ಕ್ಷೇಮದ ಹಾದಿಗೆ ಹೋಗಿ.

ಸ್ತ್ರೀಧರ್ಮದ ವಿಚಾರವಾಗಿ ಶ್ರೀ೧೧೦೮ ವಿಶ್ವನಂದನತೀರ್ಥರು, ಪುರಾಣದ ಆಧಾರದ ಮೇಲೆ ಸ್ತ್ರೀಧರ್ಮ ಎಂಬ ಸಂಗ್ರಹ ಮಾಡಿ, ಗ್ರಂಥ ಮಾಡಿರುತ್ತಾರೆ. ಅದರ ಬೆಲೆ ರೂ.೧೫/- ಅಂಚೆ ವೆಚ್ಚ ರೂ.೫/- ಒಟ್ಟು ರೂ.೨೦/- ಗಳನ್ನು ನಮ್ಮ ವಿಳಾಸಕ್ಕೆ ಮನಿಯಾರ್ಡರ್ ಮಾಡಿ ಸಂದೇಶದ ಜಾಗದಲ್ಲಿ ನಿಮ್ಮ ಹೆಸರು ಮತ್ತು ವಿಳಾಸವನ್ನು ತಪ್ಪದೇ ಬರೆಯಿರಿ. ನೀವು ಸಂದೇಶದ ಜಾಗದಲ್ಲಿ ನಿಮ್ಮ ವಿಳಾಸ ಬರೆಯದಿದ್ದರೆ ನಮಗೆ ನಿಮ್ಮ ವಿಳಾಸ ಸಿಗುವುದಿಲ್ಲ. ಪೋಸ್ಟ್‌ಮಾನ್ ಅನಗ್ರಹ ಸಂಪಾದಿಸಬೇಕಾಗುತ್ತದೆ. ದಯವಿಟ್ಟು ಹಾಗೆ ಮಾಡಬೇಡಿ.

## ಹೆಂಗಸರು ಹೇಳಬಾರದ ಸ್ತೋತ್ರಗಳು

ಶ್ರೀಬ್ರಹ್ಮಸೂತ್ರಬಾಷ್ಯದಲ್ಲಿ ಶ್ರೀಮನ್‌ಮಧ್ವಾಚಾರ್ಯರ ಅಪ್ಪಣೆ - ಇದನ್ನು ಯಾರೂ ನಿರಾಕರಿಸುವಂತಿಲ್ಲ, ಸ್ತ್ರೀಶೂದ್ರ, ಬ್ರಹ್ಮ-ಬಂಧುಗಳು ವೇದಕ್ಕೆ ಅಧಿಕಾರಿಗಳಲ್ಲ. ಕೇವಲ ನಾಮಜ್ಞಾನಾಧಿಕಾರಿಗಳು, ತಂತ್ರಜ್ಞಾನಾಧಿಕಾರಿಗಳು. ಬ್ರಹ್ಮಬಂಧುಗಳು ಅಂದರೆ - ಉಪನಯನವಾಗದ ಹುಡುಗರು, ಉಪನಯನವಾಗಿದ್ದರೂ ಸಹ ಸಂಧ್ಯಾವಂದನಾದಿಗಳನ್ನು ಮಾಡದೇ ಕಾಲ ಕಳೆಯುವವರು. ಮಹಾಭಾರತವು ಪಂಚಮವೇದ ಎಂದು ಅಭಿಪ್ರಾಯವಿದೆ. ಆದ್ದರಿಂದ ಅದರಲ್ಲಿ ಬರುವ ಶ್ರೀಮದ್‌ಭಗವದ್ಗೀತಾ ಶ್ರೀವಿಷ್ಣುಸಹಸ್ರನಾಮ ಸ್ತೋತ್ರ ಬೀಜಾಕ್ಷರಗಳಿಂದ ಕೂಡಿರುತ್ತದೆ. ಆದ್ದರಿಂದ ಸ್ತ್ರೀಶೂದ್ರ, ಬ್ರಹ್ಮಬಂಧುಗಳು ಪಾರಾಯಣ ಮಾಡುವಂತಿಲ್ಲ, ಇದು ಅವರಿಗೆ ಪರಧರ್ಮ. ಹಣ ಸಂಪಾದನೆ, ಕೀರ್ತಿ ಸಂಪಾದನೆಯ ಕೆಲವು ಪುರುಷರು ತಮ್ಮ ಸ್ವಾರ್ಥತೆಗಾಗಿ ಕೆಲವು ತರ್ಕಗಳಿಂದ ಶ್ರೀಮದಾಚಾರ್ಯರ ಅಪ್ಪಣೆಯನ್ನು ಉಲ್ಲಂಘಿಸಿ, ಹೆಂಗಸರು ಹೇಳಬಹುದು ಎಂದು ಹೇಳಿದವರು - ಅದನ್ನು ಕೇಳಿ ಹೇಳುವವರು ಇಬ್ಬರೂ ಸಹ ಹದ್ದು ಮೀರಿದ ಕಾರಣ ಯಮಲೋಕದ ಪೋಲೀಸ್‌ನವರು ನಿಮ್ಮಿಬ್ಬರನ್ನು ಅರೆಸ್ಟ್ ಮಾಡಿ ಸಂಯಮಿನೀಪುರದ ಹೈಕೋರ್ಟಿನಲ್ಲಿ ದಾಖಲು ಮಾಡಿ ಶಿಕ್ಷೆಗೆ ಗುರಿಪಡಿಸುತ್ತಾರೆ. ಅಲ್ಲಿ ಲಂಚ, ಜಾಮೀನುಗಳು ನಡೆಯುವುದಿಲ್ಲ, ಶಿಕ್ಷೆ ಅನುಭವಿಸಲೇಬೇಕು, ಯೋಚನೆ ಮಾಡಿ.

ಇದೆಲ್ಲ ಹಿನ್ನೆಲೆಯಿಂದಲೇ ಶ್ರೀವ್ಯಾಸರಾಜರು ಮೂಲಭಗವದ್ಗೀತಾ ೧೮ ಅಧ್ಯಾಯದ ಅಭಿಪ್ರಾಯಗಳನ್ನು ಸಂಗ್ರಹಿಸಿ ಕನ್ನಡದಲ್ಲಿ "ಕೇಳಯ್ಯ ಎನ್ನ ಮಾತು ಪಾರ್ಥನೇ ಗೀತದರ್ಥವ" ಭಗವದ್ಗೀತೆಯನ್ನು ಮಾಡಿಕೊಟ್ಟಿದ್ದಾರೆ, ಇದನ್ನು ಸ್ತ್ರೀಶೂದ್ರ ಬ್ರಹ್ಮ ಬಂಧುಗಳು ಹೇಳಿದರೆ, ಮೂಲ ಹೇಳುವುದರಿಂದ ಎಷ್ಟು ಫಲ ಬರುತ್ತದೋ, ಅಷ್ಟೇ ಫಲ ಬರುತ್ತದೆ. ಪಾಪ ಬರುವುದಿಲ್ಲ. ಶ್ರೀವಾದಿರಾಜರು ಕನ್ನಡದಲ್ಲಿ ಹರಿವಾಯುಸ್ತುತಿ ಮಾಡಿರುತ್ತಾರೆ. ಶ್ರೀಪಾದರಾಜರು ಶ್ರೀಮಧ್ವನಾಮ ರಚನೆ ಮಾಡಿದ್ದಾರೆ. ಇದರಲ್ಲಿ ಶ್ರೀಮಣಿಮಂಜರೀ, ಶ್ರೀ ಸುಮಧ್ವವಿಜಯ, ಶ್ರೀಮದ್‌ಮಹಾಭಾರತ ತಾತ್ಪರ್ಯ ನಿರ್ಣಯ ಇವುಗಳೆಲ್ಲದರ ಸಂಗ್ರಹವನ್ನು ಇದರಲ್ಲಿ ಇಟ್ಟಿದ್ದಾರೆ.

ಕನ್ನಡದಲ್ಲಿ ಶ್ರೀರಾಘವೇಂದ್ರ ಸ್ತೋತ್ರವೂ ಸಹ ಇದೆ, ಮೂಲದಲ್ಲಿ ಹೇಳುವುದರಿಂದ ಬರುವ ಫಲವು ಇದರಲ್ಲೇ ನಮಗೆ ಸಿಗುವಾಗ ಮೂಲಕ್ಕೆ ಏಕೆ ಪ್ರಯತ್ನ ಪಡಬೇಕು. ಅದು ನಿಮಗೆ ಪರಧರ್ಮ. ಯೋಚನೆ ಮಾಡಿ.

## ಚುಟುಕೇಶ್ವರ

ಒಂದು ಸಂಸಾರದಲ್ಲಿ ಅಥವಾ ಸಮಾಜದಲ್ಲಿ ನಾನಾ ಕೆಲಸ ಮಾಡುವವವರು ಇರುತ್ತಾರೆ. ಅವರವರ ಕೆಲಸವನ್ನು ಅವರವರೇ ಮಾಡಿಕೊಳ್ಳುತ್ತಿದ್ದರೆ, ಒಟ್ಟಿನಲ್ಲಿ ಎಲ್ಲಾ ಸಮರ್ಪಕವಾಗಿ ಆಗುತ್ತದೆ. ಹಾಗಾಗದೇ ಒಬ್ಬರ ಕೆಲಸವನ್ನು ಇನ್ನೊಬ್ಬರು ಮಾಡುವುದಕ್ಕೆ ಹೋಗಿ, ಮಾಡಕ್ಕೆ ಬರದೇ ಕೆಡಿಸಿ, ನಾನಾ ಸಮಸ್ಯೆ ತೊಂದರೆಗಳಿಗೆ ಅವಕಾಶ ಕೊಡಬೇಕಾಗುತ್ತದೆ. ಇದೇ ವರ್ಣಾಶ್ರಮದ ಧರ್ಮದ ಮೂಲತತ್ವ. ಆದುದರಿಂದ ಅವರವರ ವಿಹಿತವಾದ ಕರ್ಮ, ಅನುಷ್ಠಾನ, ಸ್ಥಾನ ಮಾನಗಳು ಮುಂತಾದವುಗಳು ಅವರವರಿಗೆ ಸೀಮಿತವಾದದ್ದು ಅದಕ್ಕೆ ಇನ್ನೊಬ್ಬರು ಕೈಹಾಕಬಾರದು. ಎಲ್ಲವೂ ಸುಖವಾಗಿರುತ್ತದೆ. ಇಲ್ಲದಿದ್ದರೆ ಅವ್ಯವಸ್ಥೆಯಾಗಿ ಪಜೀತಿಯಾಗುತ್ತದೆ. ಬಸ್ ಪ್ರಯಾಣದಲ್ಲಿ ಚಾಲಕ ವಾಹನ ನಡೆಸಬೇಕು, ನಿರ್ವಾಹಕ ಟಿಕೆಟ್ ಕೊಟ್ಟು ದುಡ್ಡು ವಸೂಲಿಮಾಡಬೇಕು. ಪ್ರಯಾಣಿಕರು ಸುಖವಾಗಿ ಕುಳಿತು ಪ್ರಯಾಣ ಮಾಡಬೇಕು. ಇದರಲ್ಲಿ ವ್ಯತ್ಯಾಸವಾದರೆ ಅವ್ಯವಸ್ಥೆ ಖಂಡಿತ.

# ಶ್ರೇಷ್ಠತ್ವ ನಿರ್ಣಯ

ಎಲ್ಲರಿಗೆ ಶ್ರೇಷ್ಠನಾದವನು ಸರ್ವೋತ್ತಮನಾದ ಶ್ರೀಹರಿಯು. ಅವನ ಸೃಷ್ಟಿಯಲ್ಲಿ ತಾರತಮ್ಯದಿಂದ ಶ್ರೇಷ್ಠತ್ವ ನೀಚತ್ವಗಳು ಉಂಟಾಗುತ್ತದೆ. ಸ್ಥಾವರ ಜೀವರಿಗಿಂತ (ಸಸ್ಯಗಳಿಗಿಂತ) ಜಂಗಮಜೀವರು ತಾರತಮ್ಯದಲ್ಲಿ ಶ್ರೇಷ್ಠ. ಜಂಗಮ ಜೀವರುಗಳಲ್ಲಿ ಅಂದರೆ ಸಂಚಾರ ಮಾಡತಕ್ಕ ಪ್ರಾಣಿಗಳಲ್ಲಿ ಕಾಲಿಲ್ಲದಂತಹ ಪ್ರಾಣಿಗಳಿಗಿಂತ ಕಾಲಿರುವ ಪ್ರಾಣಿಗಳು ಶ್ರೇಷ್ಠ. ಹೆಚ್ಚಿಗೆ ಕಾಲಿರುವ ಪ್ರಾಣಿಗಳಿಗಿಂತ ಕಡಿಮೆ ಕಾಲುಗಳಿರುವ ಪ್ರಾಣಿಗಳು ಶ್ರೇಷ್ಠ. ಕಾಲುಗಳ ಸಂಖ್ಯೆ ಕಡಿಮೆಯಾಗುತ್ತಾ ಶ್ರೇಷ್ಠತ್ವವು ಜಾಸ್ತಿಯಾಗುತ್ತದೆ. ಮನುಷ್ಯಜಾತಿಯಲ್ಲಿ ವರ್ಣಾಶ್ರಮದಂತೆ ಶೂದ್ರ, ವೈಶ್ಯ, ಕ್ಷತ್ರಿಯ, ಬ್ರಾಹ್ಮಣ ಕ್ರಮಕ್ರಮವಾಗಿ ಶ್ರೇಷ್ಠರು. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥಾಶ್ರಮಿ, ಸನ್ಯಾಸಿ ಇವರೂ ಕ್ರಮಕ್ರಮವಾಗಿ ಶ್ರೇಷ್ಠರು. ಬ್ರಾಹ್ಮಣ ಜಾತಿಯಲ್ಲಿ ವಾಯುಮತದವರು ಶ್ರೇಷ್ಠರು.

ವಾಯುಮತಾವಲಂಬಿಗಳಾದ ಬ್ರಾಹ್ಮಣರಲ್ಲಿ ಸ್ನಾನ-ಸಂಧ್ಯಾವಂದನೆಗಳನ್ನು ಮಾಡದೆ ಶೂದ್ರರಂತೆ ಜೀವನ ನಡೆಸುವವರು ಬ್ರಹ್ಮಬಂಧುಗಳು ಎನಿಸಿಕೊಳ್ಳುತ್ತಾರೆ. ಇವರಿಗೆ ವೇದಾಧಿಕಾರ ಇರುವುದಿಲ್ಲ. ಇವರಿಗಿಂತ ಸ್ನಾನ ಸಂಧ್ಯಾವಂದನಾದಿಗಳನ್ನು ಮಾಡಿಕೊಂಡಿರುವವರು ಶ್ರೇಷ್ಠರು. ಇವರಿಗಿಂತ ಮೃತ್ತಿಕಾಶೌಚಾದಿಗಳನ್ನು ಮಾಡಿಕೊಂಡು ಏಕದಶ್ಯಾದಿ ಉಪವಾಸಗಳನ್ನು ಮಾಡಿಕೊಂಡು ನಿಷಿದ್ಧವಾದ ಪದಾರ್ಥಗಳನ್ನು ತಿನ್ನದೆ ದೇಹಶುದ್ಧಿಯನ್ನು ಹೊಂದಿರುವವರು, ಸದಾಚಾರ ಸಂಪನ್ನರಾಗಿರುವವರು ಶ್ರೇಷ್ಠರು. ಶಾಸ್ತ್ರಗಳನ್ನು ಅಧ್ಯಯನ ಮಾಡಿಕೊಂಡು ಆಚಾರವಂತರಾಗಿದ್ದು ಕೊಂಡರೆ ಅವರು ಹಿಂದಿನವರಿಗಿಂತ ಶ್ರೇಷ್ಠರು. ಓದಿದ್ದನ್ನು ಅರ್ಥಮಾಡಿಕೊಂಡಿರುವವರು ಶ್ರೇಷ್ಠರು. ಅರ್ಥ ಮಾಡಿಕೊಂಡಿರುವವರಿಗಿಂತ ಅನುಷ್ಠಾನ ಮಾಡುವವರುಇನ್ನು ಶ್ರೇಷ್ಠರು. ಅನುಷ್ಠಾನ ಮಾಡಿ ಅದರ ಅನುಭವವನ್ನು ಹೊಂದಿದವರು ಇನ್ನೂ ಶ್ರೇಷ್ಠರು. ಇವರಿಗಿಂತ ಅಂತರಂಗ ಬಹಿರಂಗ ವೈಷ್ಣವದೀಕ್ಷೆಯನ್ನು ಹೊಂದಿ ಶ್ರೀಮಧ್ವಾಚಾರ್ಯರ ಮತವೇ ಸಾತ್ವಿಕರಿಗೆ ಯೋಗ್ಯವಾದುದು, ಬಾಕಿಯೆಲ್ಲ ಅವೈಷ್ಣವ ಸಂಪ್ರದಾಯಗಳು - ಹೇಯವಾದುದು, ಎಂದು ದಾರ್ಢ್ಯವಾದ ನಂಬಿಕೆಯನ್ನು ಹೊಂದಿ, ಅಯೋಗ್ಯವಾದುದನ್ನು ಖಂಡಿಸುವ ಸ್ವಭಾವವುಳ್ಳವರು ಅವರಿಗಿಂತ ಶ್ರೇಷ್ಠರು. ಶಾಪಾನುಗ್ರಹ ಶಕ್ತಿಯನ್ನು ಹೊಂದಿ ಅಪರೋಕ್ಷಜ್ಞಾನಿಗಳಾದವರು ಎಂದರೆ ದೇವರನ್ನು ದರ್ಶನ ಮಾಡಿರುವವರು ಹಿಂದಿನವರಿಗಿಂತ ಶ್ರೇಷ್ಠರು. ಎಲ್ಲಕ್ಕಿಂತ ಮಿಗಿಲಾಗಿ ಸಕಲವೂ ಮುಖ್ಯಪ್ರಾಣದೇವರ ವಶವಾದುದು, ಆ ಮುಖ್ಯಪ್ರಾಣದೇವರು ಪರಮಾತ್ಮನ ವಶರಾದವರು, ಆ ಪರಮಾತ್ಮನು ಸರ್ವೋತ್ತಮನು, ಸರ್ವಕ್ಕೆ ಸ್ವಾಮಿಯು, ಅವನು ನನ್ನ ಅನಿಷ್ಟಗಳನ್ನು ಕಳೆಯುವವನು. ನನ್ನ ಎಲ್ಲ ಇಷ್ಟಗಳನ್ನು ಕೊಡುವವನು. ನಮಗೇನು ಕೊಟ್ಟರೆ ಅದೇ ಸರಿ ಎಂದು ಅನುಸಂಧಾನ ಮಾಡಿಕೊಂಡು ಯಾರನ್ನೂ ಆಕ್ಷೇಪಣೆಯನ್ನು ಮಾಡದೇ ಮೌನವಾಗಿ, ಗೂಢವಾಗಿ ಇರುತ್ತಾನೋ ಅಂಥವನು ಹಿಂದಿನವರಿಗಿಂತ ಶ್ರೇಷ್ಠನು. ಆದರೆ ಈ ವರ್ತಮಾನ ದಲ್ಲಿ ಅಂತಹ ಉತ್ತಮರು ಕಣ್ಣಿಗೆ ಕಾಣಿಸುತ್ತಿಲ್ಲ. ಆದುದರಿಂದ ನಾವು ಕರ್ಮಾನುಷ್ಠಾನ ಮಾಡುವಾಗ ದೇಶಕಾಲೋಚಿತವಾಗಿ ಇದ್ದುದರಲ್ಲಿ ಉತ್ತಮರಾದವರನ್ನು ಆರಿಸಿಕೊಂಡು ಶ್ರೀಹರಿಸೇವಾ ಮಾಡುವುದು.

**ಅನುಭವಾಮೃತ**

ಧನಮುಂ, ಕೀರ್ತಿಯುಂ, ಸಲೆಬರ್ಕುಂ (ಬರುತ್ತದೆ)
ಅದನುಳುಹಿಕೊಳಲು ಮಿಗೆ ಕಷ್ಟಮಿರ್ಕುಂ (ಉಳಿಸಿಕೊಳ್ಳುವುದು ಕಷ್ಟ)

ನಂಬಿಕೆಟ್ಟವರಿಲ್ಲವೋ ರಂಗಯ್ಯನ । ನಂಬದೇ ಕೆಟ್ಟರೇ ಕೆಡಲಿ - (ದಾಸವಾಣಿ)

# ಶ್ರೀಮಧ್ವಸೂರ್ಯಪದಕ




ಶ್ರೀಮನ್‌ಮಧ್ವಾಚಾರ್ಯರಿಗೆ ಪ್ರಥಮಾವರಣದಂತಿರುವ ಅತಿ ಸಮೀಪವರ್ತಿಗಳಾದ ತಪಸ್ವಿಗಳಾದ ಜ್ಞಾನಶ್ರೇಷ್ಠರುಗಳನ್ನು ಒಮ್ಮೆಯಾದರೂ ಸ್ಮರಿಸಿದರೇ ಶ್ರೀಮದಾಚಾರ್ಯರ ಅನುಗ್ರಹವಾಗುವುದು ಖಂಡಿತ.

ಗಾಯತ್ರೀ ಮಂತ್ರದಂತೆ ಕಂಠಪಾಠ ಮಾಡಿಕೊಂಡು ಗುರುಮಂತ್ರ ಮಾಡಿಕೊಳ್ಳುವಾಗ ಒಂದು ಬಾರಿ ಹೇಳಿಕೊಳ್ಳಿ. ಸಣ್ಣಮಕ್ಕಳಿಗೆ ಹೆಣ್ಣು, ಗಂಡು ಎಂಬ ಭೇದವಿಲ್ಲದೆ ಕಂಠಮಾಠ ಮಾಡಿಸಿ, ಸ್ನಾನವಾದ ಕೂಡಲೆ ಒಂದು ಸಾರಿ ಹೇಳಿ ದೇವರಿಗೆ ನಮಸ್ಕಾರ ಮಾಡುವಂತೆ ಅಭ್ಯಾಸ ಮಾಡಿಸಿ. ಇದರ ಮಹಿಮೆ ನಿಮಗೆ ಮುಂದೆ ಗೊತ್ತಾಗುತ್ತದೆ.

**ಕಂಠಪಾಠ ಮಾಡಿ - ಮಹಿಮೆ ಮನಸಾ ಚಿಂತನೆ ಮಾಡಬೇಕು.**

೧. ಅನಂ - ಶ್ರೀಅನಂತಾಸನದೇವರು - ಶ್ರೀ ಉಡುಪಿ ಪಟ್ಟಣದ ಒಡೆಯರು

೨. ಮ - ಶ್ರೀಮಧ್ಯಗೇಹ ಭಟ್ಟರು - ಶ್ರೀಮಧ್ವಾಚಾರ್ಯರಿಗೆ ನಿಮಿತ್ತ ತಂದೆಯವರು

೩. ಅಚ್ಯು- ಶ್ರೀಅಚ್ಯುತಪ್ರೇಕ್ಷಾಚಾರ್ಯರು - ಹಂಸನಾಮಕ ಪರಮಾತ್ಮನ ಪರಂಪರೆಯಲ್ಲಿ ಬಂದು ಶ್ರೀಮಧ್ವಾಚಾರ್ಯರಿಗೆ ಸನ್ಯಾಸ ಕೊಟ್ಟವರು.

೪. ತ್ರಿ - ಶ್ರೀ ತ್ರಿವಿಕ್ರಮಪಂಡಿತಾಚಾರ್ಯರು - ಶ್ರೀ ಹನುಮ ಭೀಮ ಮಧ್ವರೂಪಗಳನ್ನು ಪ್ರತ್ಯಕ್ಷವಾಗಿ ನೋಡಿ ಶ್ರೀಹರಿವಾಯುಸ್ತುತಿ ರಚನೆ ಮಾಡಿ ಉಪಕಾರ ಮಾಡಿದವರು.

೫. ನಾ - ಶ್ರೀನಾರಾಯಣಪಂಡಿತಾಚಾರ್ಯರು - ಶ್ರೀಮಣಿಮಂಜರಿ ಶ್ರೀ ಸುಮಧ್ವವಿಜಯ ಗ್ರಂಥಗಳನ್ನು ಮಾಡಿಕೊಟ್ಟು ಉಪಕಾರ ಮಾಡಿದವರು.

೬. ಪ - ಶ್ರೀಪದ್ಮನಾಭತೀರ್ಥರು - ಮತ್ತ ದುರ್ವಾದಿಮಾತಂಗ ತರ್ಕಮಸ್ತಕಧಾರಣೆ ಪಂಚಾಸ್ಯಃ ಎಂದು ಬಿರುದು ಪಡೆದ ಶ್ರೀ ವೇದಪ್ರವಚನಾಚಾರ್ಯರ ಶಿಷ್ಯರು.

೭. ಹೃ - ಶ್ರೀಹೃಷೀಕೇಶತೀರ್ಥರು - ಶ್ರೀಪಲಿಮಾರು ಮಠದ ಮೂಲಪುರುಷರು-ಜಿತೇಂದ್ರಿಯರು

೮. ನ - ಶ್ರೀನರಸಿಂಹತೀರ್ಥರು - ಶ್ರೀಅದಮಾರು ಮಠದ ಮೂಲ ಪುರುಷರು ಶ್ರೀ ನರಸಿಂಹೋಪಾಸಕರು - ಮಹಾತಪಸ್ವಿಗಳು.

೯. ಜ - ಶ್ರೀಜನಾರ್ದನ ತೀರ್ಥರು - ಶ್ರೀಕೃಷ್ಣಾಪುರಮಠದ ಮೂಲ ಪುರುಷರು, ಜನನ-ಮರಣ ನಾಶ ಮಾಡಿಕೊಂಡವರು.

೧೦. ಉ - ಶ್ರೀಉಪೇಂದ್ರತೀರ್ಥರು - ಶ್ರೀ ಪುತ್ತಿಗೆ ಮಠದ ಮೂಲ ಪುರುಷರು, ಸದಾ ಉಪೇಂದ್ರನ ಸ್ಮರಣೆ ಮಾಡುವವರು.

೧೧. ವಾ - ಶ್ರೀವಾಮನತೀರ್ಥರು - ಶ್ರೀಶೀರೂರು ಮಠದ ಮೂಲ ಪುರುಷರು, ಲೌಕಿಕ ವ್ಯವಹಾರದಿಂದ ಬಿಡಲ್ಪಟ್ಟವರು.

೧೨. ವಿ - ಶ್ರೀವಿಷ್ಣುತೀರ್ಥರು - ಶ್ರೀಸೋದೆ ಮಠದ ಮೂಲ ಪುರುಷರು, ಮಹಾತಪಸ್ವಿಗಳು ಮತ್ತು ವೇದಾಂತಗುರುಸೋದರರೆಂದು ಪ್ರಸಿದ್ಧರು.

೧೩. ರಾ - ಶ್ರೀರಾಮತೀರ್ಥರು - ಶ್ರೀಕಾಣಿಯೂರು ಮಠದ ಮೂಲ ಪುರುಷರು ಶ್ರೀರಾಮದೇವರ ಪಾದದಲ್ಲಿ ಸದಾ ಭಕ್ತಿ ಮಾಡುವವರು

೧೪. ಅಧೋ - ಶ್ರೀಅಧೋಕ್ಷಜತೀರ್ಥರು - ಶ್ರೀಪೇಜಾವರ ಮಠದ ಮೂಲ ಪುರುಷರು ತ್ರಿಕಾಲಜ್ಞಾನಿಗಳು.

ಇಂತಹ ತಪಸ್ವಿಗಳಿಂದ ವಂದಿತರಾದ, ಚಕ್ರದ ಮಧ್ಯದಲ್ಲಿರುವ ಶ್ರೀಮನ್‌ಮಧ್ವಾಚಾರ್ಯರಿಗೆ ಅನಂತಾನಂತ ನಮಸ್ಕಾರಗಳು.

ದುರ್ವಾದ ಕಾಂಡ ಖಂಡನ ಮಂಡನರು, ಪರಮತಖಂಡನಪೂರ್ವಕ ಸ್ವಮತಸ್ಥಾಪನ ವಿದ್ಯಾದೀಕ್ಷೆಯನ್ನು ಶಿಷ್ಯ ಕ್ಷೇತ್ರದಲ್ಲಿ ಬೀಜವಾಪನ ಮಾಡುವವರು. ಜ್ಞಾನಭಕ್ತಿವೈರಾಗ್ಯಸಾಗರರು ಆದ ಯತಿಶ್ರೇಷ್ಠರು ಈ ಭೂಮಿಯನ್ನು ಅಲಂಕರಿಸಿ ಪವಿತ್ರವನ್ನು ಮಾಡುತ್ತಿದ್ದರು. ಶ್ರೀವಾದಿರಾಜ-ಗುರುಸಾರ್ವಭೌಮರು ತೀರ್ಥಪ್ರಬಂಧ ಗ್ರಂಥದಲ್ಲಿ ಅಷ್ಟಮಠದ ಯತಿಗಳನ್ನು ಅಷ್ಟದಿಕ್ಪಾಲಕರಂತೆ ವರ್ಣಿಸಿದ್ದಾರೆ. ಇಂತಹ ಜ್ಞಾನಿಗಳನ್ನು ಸ್ಮರಿಸಿ ನಮಿಸಿದರೆ ಶ್ರೀಹರಿವಾಯುಗಳ ಅನುಗ್ರಹವಾಗುವುದರಲ್ಲಿ ಸಂದೇಹವಿಲ್ಲ. ಆದ್ದರಿಂದ ಇದು ಮುಖ್ಯಕರ್ತವ್ಯ.

# ಮಠ ಮತ್ತು ಮಠದೀಕ್ಷಾ

ಶ್ರೀವೇದವ್ಯಾಸರ ಇಷ್ಟದಂತೆ ಜೀವೋತ್ತಮರಾದ ಮುಖ್ಯಪ್ರಾಣದೇವರು ಹನುಮ, ಭೀಮ, ಮಧ್ವ ಎಂಬ ವೇದಪ್ರಸಿದ್ಧವಾದ ಅವತಾರಗಳನ್ನು ಮಾಡಿ ವೇದವಿರುದ್ಧವಾದ ದುಷ್ಟಮತಗಳನ್ನು ಖಂಡಿಸಿ, ವೇದಸಮ್ಮತವಾದ ವಿಷ್ಣುಸರ್ವೋತ್ತಮ, ವಾಯುಜೀವೋತ್ತಮ, ಪಂಚಭೇದ ತಾರತಮ್ಯ, ಜಗತ್ಸತ್ಯತ್ವ, ಜೀವತ್ರೈವಿಧ್ಯಸತ್ಯತ್ವ, ಮುಂತಾದ ಶ್ರೇಷ್ಠತತ್ವಗಳನ್ನು ಸ್ಥಾಪನೆ ಮಾಡಿ ಸಜ್ಜನರನ್ನು ಉದ್ಧಾರ ಮಾಡಿದರು. ಅವರ ನಂತರ ಶ್ರೀಟೀಕಾರಾಯರು, ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀಮಂತ್ರಾಲಯಪ್ರಭುಗಳು, ಶ್ರೀರಘೋತ್ತಮತೀರ್ಥರು (ಭಾವಬೋಧಕಕಾರರು) ಸಂಪ್ರದಾಯ ಪ್ರವರ್ತಕರುಗಳು, ಶ್ರೀಪುರಂದರದಾಸರು, ಶ್ರೀವಿಜಯದಾಸರು, ಶ್ರೀಗೋಪಾಲದಾಸರು, ಶ್ರೀಜಗನ್ನಾಥದಾಸರು ಮುಂತಾದ ಅಪರೋಕ್ಷಜ್ಞಾನಿಗಳು ಬಂದು ಶ್ರೀಮದ್‌ಬ್ರಹ್ಮಸೂತ್ರಕ್ಕೆ ಭಾಷ್ಯ, ಟೀಕೆ, ಟಿಪ್ಪಣಿ, ವ್ಯಾಖ್ಯಾನ, ದೇವರನಾಮ, ಸುಳಾದಿ, ಉಗಾಭೋಗ ಇತ್ಯಾದಿ ಸದ್‌ಗ್ರಂಥಗಳನ್ನು ಮಾಡಿಕೊಟ್ಟು ಸಜ್ಜನರ ಉದ್ಧಾರ ಗೈದರು. ಮೇಲ್ಕಂಡ ಸರ್ವಗುರುಗಳೂ ಶ್ರೀಮದ್ಭಾಗವತದ ಉಕ್ತಿಯಂತೆ 'ನಿರ್ಮತ್ಸರಾಃ ಸಜ್ಜನಾಃ' ಎಂಬ ಸ್ವಭಾವದವರು. ಇವರೆಲ್ಲ ದ್ವೇಷಾಸೂಯೆಗಳು ಇಲ್ಲದಂತಹ ಪವಿತ್ರರು.

ಹಂಸರೂಪಿಯಾದ ಪರಮಾತ್ಮನ ಪರಂಪರೆಯಲ್ಲಿ ಬಂದ ಸನಕಾದಿಗಳು, ದೂರ್ವಾಸಾದಿಗಳು, ಪರತೀರ್ಥರು, ಸತ್ಯಪ್ರಜ್ಞರು, ಪ್ರಾಜ್ಞತೀರ್ಥರು, ಅಚ್ಯುತಪ್ರೇಕ್ಷಾಚಾರ್ಯರು ಹಾಗೆಯೇ ಶ್ರೀಮಧ್ವಾಚಾರ್ಯರು, ಪದ್ಮನಾಭತೀರ್ಥರು, ನರಹರಿತೀರ್ಥರು, ಮಾಧವತೀರ್ಥರು, ಅಕ್ಷೋಭ್ಯತೀರ್ಥರು, ಜಯತೀರ್ಥರು ಇತ್ಯಾದಿಯಾಗಿ ಪರಂಪರೆಯು ಬಂದಿತು. ಮಧ್ವಮತ ಎಂಬ ವೃಕ್ಷಕ್ಕೆ ಇದು ಮೂಲ. ಟೀಕಾಚಾರ್ಯರಿಂದ ನಂತರ ವಿದ್ಯಾಧಿರಾಜರು, ಅವರ ನಂತರ ರಾಜೇಂದ್ರರು, ಕವೀಂದ್ರರು ಎಂದು ಇಬ್ಬರಿಗೆ ಆಶ್ರಮ ಭಗವದಿಚ್ಛೆಯಿಂದ ಕೊಡಬೇಕಾದಾಗ ಈ ಪರಂಪರೆಯು ಎರಡು ಭಾಗವಾಯಿತು. ಆದ್ದರಿಂದ ರಾಜೇಂದ್ರರ ಮಠವು ಪೂರ್ವಾದಿ ಮಠವೆಂತಲೂ, ಕವೀಂದ್ರರ ಮಠವು ಉತ್ತರಾದಿ ಮಠವೆಂತಲೂ ಕರೆಯಲ್ಪಟ್ಟಿತು. ರಾಜೇಂದ್ರರ ಮಠದಲ್ಲಿ ಶ್ರೀವ್ಯಾಸರಾಜರು ನ್ಯಾಯಾಮೃತ, ತರ್ಕತಾಂಡವ, ಚಂದ್ರಿಕಾ, ಮಂದಾರಮಂಜರಿ ಎಂಬ ಗ್ರಂಥಗಳನ್ನು ರಚಿಸಿ ಶ್ರೀಮಧ್ವಾಚಾರ್ಯರ ಸೇವೆಯನ್ನು ಮಾಡಿ ಸಜ್ಜನರಿಂದ ಪೂಜಿಸಲ್ಪಟ್ಟರು ಹಾಗೂ ಪ್ರಸಿದ್ಧರಾದರು. ಇದರಿಂದ ಆ ಮಠ ಶ್ರೀವ್ಯಾಸರಾಜಮಠವೆಂದು ಪ್ರಸಿದ್ಧಿಯಾಯಿತು. ಕವೀಂದ್ರರ ಪರಂಪರೆಯಲ್ಲಿ ಪುನಃ ಭಗವದಿಚ್ಛೆಯಿಂದ ಶ್ರೀವಿದ್ಯಾನಿಧಿಗಳಿಂದ ಮುಂದೆ ಉತ್ತರಾದಿಮಠ ಮುಂದುವರೆಯಿತು. ರಾಮಚಂದ್ರತೀರ್ಥರಿಂದ ವಿಬುಧೇಂದ್ರರು, ವಿದ್ಯಾನಿಧಿಗಳು ಎಂಬ ಇಬ್ಬರು ತಪಸ್ವಿಗಳಿಗೆ ಆಶ್ರಮ ಕೊಡಬೇಕಾಯಿತು. ಈ ವಿಬುಧೇಂದ್ರರ ಪರಂಪರೆಯಲ್ಲಿ ಶ್ರೀಪರಿಮಳಾಚಾರ್ಯರು ಎಂದು ಪ್ರಸಿದ್ಧವಾದ ಶ್ರೀಮಂತ್ರಾಲಯಪ್ರಭುಗಳಾದ ಶ್ರೀರಾಘವೇಂದ್ರ ತೀರ್ಥರು ಪ್ರಸಿದ್ಧರಾದುದರಿಂದ ಶ್ರೀರಾಯರ ಮಠ ಎಂದು ಪ್ರಸಿದ್ಧವಾಯಿತು.

ಹೀಗೆಯೇ ಶ್ರೀವೇದವ್ಯಾಸರು ಎಂಬ ಬುಡವುಳ್ಳ ಮರಕ್ಕೆ ಶ್ರೀಮಧ್ವಾಚಾರ್ಯರು ಎಂಬ ಕಾಂಡ. ಈ ಕಾಂಡದ ತುದಿಯಲ್ಲಿ ಶ್ರೀಜಯತೀರ್ಥರು ಎಂಬ ತುದಿಯಿಂದ ಶ್ರೀಉತ್ತರಾದಿ ಮಠ, ಶ್ರೀವ್ಯಾಸರಾಜರಮಠ, ಶ್ರೀರಾಯರಮಠ, ಕುಂದಾಪುರವ್ಯಾಸರಾಜಮಠ, ಶ್ರೀಮದಾಚಾರ್ಯರಿಂದಲೇ ಉಡುಪಿಯ ಅಷ್ಟಮಠಗಳು, ಶ್ರೀ ವಿಷ್ಣುತೀರ್ಥರಿಂದ ಶ್ರೀಸುಬ್ರಹ್ಮಣ್ಯ ಮಠ, ಶ್ರೀ ಸತ್ಯತೀರ್ಥರಿಂದ ಶ್ರೀಭಂಡಾರಕೇರಿ ಮಠ, ಶ್ರೀಪದ್ಮನಾಭತೀರ್ಥರಿಂದ ಶ್ರೀಪಾದರಾಜಮಠ, ಶ್ರೀಮಾಧವತೀರ್ಥರಿಂದ ಮಾಧವತೀರ್ಥರಮಠ, ಶ್ರೀಅಕ್ಷೋಭ್ಯತೀರ್ಥರಿಂದ ಶ್ರೀಕೂಡಲಿ ಅಕ್ಷೋಭ್ಯತೀರ್ಥರ ಮಠ,

ಶ್ರೀಅಚ್ಯುತಪ್ರೇಕ್ಷಾಚಾರ್ಯರಿಂದ ಶ್ರೀಭೀಮನಕಟ್ಟೆ ಮಠ ಎಂಬ ಶಾಖೋಪಶಾಖೆಗಳು ಹೊರಟು ಅನೇಕ ಸಣ್ಣ ಸಣ್ಣ ಕೊಂಬೆಗಳು ಚಿಗುರೊಡೆದವು.

## ಮಠ ಮತ್ತು ಮತ

ಪವಿತ್ರವಾದ ತುಳಸೀಗಿಡಕ್ಕೆ ಅನೇಕ ಶಾಖೋಪಶಾಖೆಗಳು ಹೊರಟು ತುಳಸೀದಳಗಳನ್ನು ಕೊಡುತ್ತದೆ. ಇದರಲ್ಲಿ ಯಾವುದು ಪವಿತ್ರ ಅಲ್ಲ ಅಂತ ಹೇಳುವುದಕ್ಕಾಗುತ್ತದೆ. ಈ ಪಾದಪ(ಗಿಡ) ಅಪಾದಮೌಳಿಪರ್ಯಂತವೂ ಪವಿತ್ರವೇ. ಇದರಂತೆ ಮಧ್ವಮತವೆಂಬ ಗಿಡಕ್ಕೆ ಮಠಗಳು ಶಾಖೆಗಳು. ಎಲ್ಲ ಮಠಗಳಲ್ಲೂ ಸಹ ಜ್ಞಾನಿಗಳು ಬಂದು ಮಧ್ವಮತವನ್ನು ಪುಷ್ಟೀಕರಿಸುವಂತಹ ಪರಮತಖಂಡನ ಪೂರ್ವಕ ಸ್ವಮತ ಸ್ಥಾಪನೆ, ಗ್ರಂಥಗಳ ನಿರ್ಮಾಣ ಮಾಡಿರುತ್ತಾರೆ. ಸಂಪ್ರದಾಯ ಪ್ರವರ್ತನ ಮಾಡಿರುತ್ತಾರೆ. ಅವುಗಳಲ್ಲಿ ಕೆಲವು ಅವಾಂತರ ಭೇದಗಳಿರುತ್ತದೆ. ತಮ್ಮ ತಮ್ಮ ಮಠದ ಸಂಪ್ರದಾಯಗಳನ್ನು ಅನುಸರಿಸುತ್ತಾ ಮಠದ ದೀಕ್ಷೆಯಿಂದ ವರ್ತಿಸುವುದು ಯುಕ್ತ ವಾದುದು. ಸ್ವಮಠ ದೀಕ್ಷಾ ಎಂಬುದು ದುರಾಗ್ರಹವಾಗಿ ಪರಮಠಗಳ ನಿಂದಾರೂಪ ತಾಳಬಾರದು. ಅದು ದೊಡ್ಡ ವೈಷ್ಣವ ದ್ರೋಹವಾಗುತ್ತದೆ. ಎಲ್ಲಾ ಮಠಗಳು ನಮಗೆ ಗುರುಸ್ಥಾನೀಯವಾದುದೇ ಎಂದು ಗೌರವಿಸುವುದು ಎಲ್ಲಾ ಮಾಧ್ವರ ಕರ್ತವ್ಯ.

ಮಠದ ದೀಕ್ಷೆಯಿಂದ ಮತದ ದೀಕ್ಷೆಗೆ ಹಾನಿಯಾಗಬಾರದು. ಸಂಸಾರಾವಸ್ಥೆಯಲ್ಲಿ ಅನೇಕ ಮಠಗಳು ಆದರೆ ಮೋಕ್ಷಸ್ಥಾನವಾದ ಶ್ರೀವೈಕುಂಠದಲ್ಲಿ ಒಂದೇ ಮಠ, ಅದು ಪ್ರಾಚೀನ ಶ್ರೀವೇದವ್ಯಾಸರ ಮಠ. ಆದುದರಿಂದ ಪಾಠ, ಪ್ರವಚನ, ಹವ್ಯಕವ್ಯ ಆರಾಧನೆ, ಅಲಂಕಾರ ಮುಂತಾದ ಸಂದರ್ಭಗಳಲ್ಲಿ ವೈಷ್ಣವ ದೀಕ್ಷೆ, ಸದಾಚಾರ ನಿಷ್ಠೆ, ಅಲ್ಪತೃಪ್ತಿ, ಮಾತ್ಸರ್ಯವಿಲ್ಲದಿರೋಣ ಇಂತಹ ಬ್ರಾಹ್ಮಣರಿಗೆ ಆದ್ಯತೆ ಕೊಡಬೇಕು, ಅಲ್ಲಿ ಮಠಕ್ಕಿಂತ ಮತ ಮುಖ್ಯ. ಇದು ನಿರ್ಮತ್ಸರರಾದ ಸಜ್ಜನರ ಅಭಿಪ್ರಾಯ.

"ಪೃಥ್ವೀಮಂಡಲ ಮಧ್ಯಸ್ಥಾಃ ಪೂರ್ಣಬೋಧ ಮತಾನುಗಾಃ
ವೈಷ್ಣವಾಃ ವಿಷ್ಣುಹೃದಯಾಃ ಸ್ತಾನಮಸ್ಯೇಗುರೂನ್ಮಮ ॥

ಅವಧೂತ ಶಿರೋಮಣಿ ಶ್ರೀಅರಣ್ಯಕಾಚಾರ್ಯರ ವಾಕ್ಯ - ಇವರು ಯಾವ ಮಠದ ಹೆಸರನ್ನೂ ಹೇಳಲಿಲ್ಲ.

### ಚುಟುಕೇಶ್ವರ

**ಪ್ರತಿಯೊಬ್ಬ ಸಾಧಕನು ಯೋಚನೆ ಮಾಡಬೇಕಾದ ವಿಚಾರ** - ನಾನು ಯಾರು? ಎಲ್ಲಿಂದ ಬಂದೆ? ಇಲ್ಲಿಗೇಕೆ ಬಂದೆ? ಇಲ್ಲಿ ಎಷ್ಟು ದಿವಸ ಇರುತ್ತೇನೆ ಸುತ್ತಲಿರುವ ಪರಿಸರದ ಮಹಿಮೆ ಏನು? ನಾವು ಏನು ಮಾಡಬೇಕು? ಏನು ಮಾಡಬಾರದು? ಮುಂದೆ ಎಲ್ಲಿಗೆ ಹೋಗುತ್ತೇನೆ? ಮುಂದೆ ಏನನ್ನು ಹೊಂದಬೇಕು? ಇಷ್ಟು ವಿಚಾರಗಳನ್ನು ಲೋಕದಲ್ಲಿ ಮಾಡುವ ಲೌಕಿಕ ಕೆಲಸಗಳಿಗೂ ವಿಚಾರ ಮಾಡಿಕೊಳ್ಳದೇ ಪ್ರವೇಶ ಮಾಡಬಾರದು. ಹಾಗೆಯೇ ಪ್ರವೇಶ ಮಾಡಿದರೇ ಕೆಲಸ ಸರಿಯಾಗಿ ಆಗುವುದಿಲ್ಲ. ಇದು ಸಾಧನದ ಮಾರ್ಗಕ್ಕೂ ಅನ್ವಯಿಸುತ್ತದೆ. ಆದ್ದರಿಂದ ಯಾವ ಕೆಲಸ ಮಾಡಬೇಕಾದರೂ ಮುಂಚೆ ಅದನ್ನು ಸರಿಯಾಗಿ ಯೋಚನೆ ಮಾಡಿ ವ್ಯವಸ್ಥಿತವಾಗಿ ಮಾಡುವುದು.

## ಕಾಂಬೋದಿ ರಾಗ

ನೀ ಮಾಯೆಯೊಳಗೋ ನಿನ್ನೊಳು ಮಾಯೆಯೋ...... ಎಂಬಂತೆ

ಅದು ಇದರೊಳಗೋ ಇದು ಅದರೊಳಗೋ
ಅದು ಇದೂ ಎರಡು ಯಾವುದ್ರೊಳಗೋ
ಯಾವುದೆಲ್ಲದ್ರೊಳಗೋ ಎಲ್ಲವೂ ಯಾವುದ್ರೊಳಗೋ
ಅದು ಮತ್ತೆ ಬೇರಿಲ್ಲ ತಿಳಿಕಂಡ್ಯ ಶ್ರೀಹರಿ ।

ಮತದೊಳಗೆ ಮಠವೋ ಮಠದೊಳಗೆ ಮತವೋ
ಮತ ಮತ್ತು ಮಠವೆರಡು ದೀಕ್ಷೆಯೊಳಗೋ
ದೀಕ್ಷೆ ಬುದ್ಧಿಯೊಳಗೋ ಬುದ್ಧಿಯೊಳು ದೀಕ್ಷೆಯೋ
ದೀಕ್ಷೆ ಬುದ್ಧಿಗಳೆರಡು ಸ್ವರೂಪ ಮತಿಯೊಳಗೋ

ಮಠವೆಂಬೋದು ಬದುಕಿನಲ್ಲಿ ಮತವೊಂದೆ ಮುಕುತಿಯಲಿ
ಮಠಗಳ ಬಡಿದಾಟ ಜನರಿಗತಿ ಗೋಳಾಟ
ಯುಕುತಾಯುಕತ ಚಿಂತಿಸಿ ಬಿಡುವುದೀ ಹೆಣಗಾಟ
ಸಕ್ತವಾಗಲಿ ಮನವು ಮಧ್ವಮತದವರಾವೆಂದು

ಮುತ್ಯನಿಗೆ ಮತ್ತೈದು ಮಕ್ಕಳಾದರು ನೋಡಾ
ಮತ್ತೈವರಿಗೆ ಆದರು ಇಪ್ಪತ್ತೈದು ಕಾಣಾ
ತತ್ತೆರದೀ ಮಠಗಳಾದವು ಕೇಳಾ
ಗೋತ್ರ ಒಂದೇ ಕಾರಣ ಇದಕೆ ಶ್ರೀಹರಿ ಚಿತ್ತವಯ್ಯ

## ಸ್ವಾಮಿಗಳು ಮತ್ತು ಅವರ ಆವರಣಗಳು

ವಿಶೇಷ ವಿಚಾರಗಳಿಗೆ ಈ ಪುಸ್ತಕದ ಕೊನೆ ಪುಟದಲ್ಲಿ **ಸಲಹೆ** ಎಂಬ ಭಾಗ ನೋಡಿ

೧ನೇ ಆವರಣ : ಎಡಬಲ ಸೇವಕರು
೨ನೇ ಆವರಣ : ಮಠದ ಪಂಡಿತರು
೩ನೇ ಆವರಣ : ವಿದ್ಯಾರ್ಥಿಗಳು
೪ನೇ ಆವರಣ : ಮಠದ ಶಿಷ್ಯರು, ಗೃಹಸ್ಥರು, ವೈದಿಕರು, ಲೌಕಿಕರು, ಸಾಮಾನ್ಯ ಜನರು, ಸೀಮೋಲ್ಲಂಘನ ಮಾಡಿದವರು, ಮುಂತಾದವರು.

ಶ್ರೀಪಾದಪುತ್ರರು ಎಂದರೆ ಯಾರು? 'ಸುಧೀಂದ್ರವರಪುತ್ರಕಃ', ಇರುವುದರಿಂದ ಶ್ರೀಪಾದಂಗಳವರಿಂದ ಕರಕಮಲಸಂಜಾತರೇ ಶ್ರೀಪಾದಪುತ್ರರು. ಈಗ ಅದು ಸ್ವಾಮಿಗಳವರ ಪೂರ್ವಾಶ್ರಮದ ಪುತ್ರರಿಗೆ ಹೇಳುವ ಸಂಪ್ರದಾಯ ಬಂದಿದೆ. ಇದು ಎಷ್ಟರಮಟ್ಟಿಗೆ ಸತ್ಯವಾದ ವಿಚಾರ ಅಲ್ಲವೇ? ಕೆಲವು ಮಠದಲ್ಲಿ ಶ್ರೀಪಾದ ಪಿತರೂ ಇದ್ದಾರೆ.

ಶ್ರೀಪಾದಪುತ್ರ ಎಂಬುದು ಅನ್ವರ್ಥನಾಮ ಯಾರಿಗೆ ಅನ್ವಯಿಸುತ್ತದೆ? ಒಬ್ಬ ಶ್ರೀಪಾದ ಪುತ್ರರಿಗೆ ಅನ್ವರ್ಥನಾಮದಲ್ಲಿ 'ವ' ಒತ್ತಕ್ಷರ ಲೋಪವಾಗಬೇಕಾಗುತ್ತದೆ. ಸ್ವಾಮಿಗಳವರಿಂದ ಸಾಮಾನ್ಯ ಶಿಷ್ಯ ವರ್ಗಕ್ಕೆ ಧರ್ಮ, ಜ್ಞಾನ ಮತ್ತು ಮಧ್ವಮತದ ದೀಕ್ಷೆ ಬಗ್ಗೆ ಎಷ್ಟರ ಮಟ್ಟಿಗೆ ಸದ್ವಿನಿಯೋಗವಾಗುತ್ತಿದೆ. ಎಂಬುದು ವಿಚಾರಾರ್ಹವಾದದ್ದು.

ಶ್ರೀ ಚಕ್ರಪಾಣೇ ಕಾಲಾಂತರ್ಗತ ಕಾಲಾಯನಮಃ

# ಕಾಲಚಕ್ರ ಮಹಿಮಾ ಧರ್ಮಾಧರ್ಮಗಳ ರೂಪರೇಖಾ

ಚಕ್ರ ಮತ್ತು ಗ್ರಾಫ್ ಮೂಲಕ ಪ್ರದರ್ಶನ

ಧ - ಧರ್ಮ

ಅ - ಅಧರ್ಮ

**ಕೃತಯುಗ**




ಕೇವಲ ಪೂರ್ಣಧರ್ಮ

**ತ್ರೇತಾಯುಗ**




ಮುಕ್ಕಾಲು ಭಾಗ ಧರ್ಮ
ಕಾಲು ಭಾಗ ಅಧರ್ಮ

**ದ್ವಾಪರಯುಗ**




ಅರ್ಧ ಭಾಗ ಧರ್ಮ
ಅರ್ಧ ಭಾಗ ಅಧರ್ಮ

**ಕಲಿಯುಗ**




ಕಾಲು ಭಾಗ ಧರ್ಮ
ಮುಕ್ಕಾಲು ಭಾಗ ಅಧರ್ಮ

| ಸಾಧನ - ಧ್ಯಾನ - ತಪಸ್ಸು | | ಯಜ್ಞ ಯಾಗ | | ಅರ್ಚನ ಪೂಜೆ | | ಕೇವಲ ಹರಿ ಎಂಬ ಎರಡಕ್ಷರ |
|---|---|---|---|---|---|---|
| ಫಲ - ೧ ವರ್ಷದ ಫಲ | = | ೧ ತಿಂಗಳ ಫಲಕ್ಕೆ ಸಮ | = | ಒಂದು ಪಕ್ಷದ ಫಲಕ್ಕೆ ಸಮ | = | ಹೇಳಿದ್ದಕ್ಕೆ ಸಮ |

**ತಾತ್ಪರ್ಯ** : ಸುಮ್ಮನೆ ಹರಿ ಎಂದು ಎರಡಕ್ಷರ ಹೇಳಿದ ಮಾತ್ರಕ್ಕೆ ಫಲ ಬರುತ್ತದೆಂದು ತಿಳಿಯಬಾರದು, ಅದರಲ್ಲಿ ವಿಶೇಷ ಉಂಟು, ಮಾರ್ಕೆಟ್‌ನಲ್ಲಿ ಒಬ್ಬ ಕುಂಟ ಕುಳಿತುಕೊಂಡು ಹಣ ಸಂಪಾದನೆ ಮಾಡುವುದಕ್ಕೆ ಬೆಳಿಗ್ಗೆಯಿಂದ ಸಂಜೆಯವರೆಗೂ "ಕಾಲಿಲ್ಲಕುಂಟ ನಾರಾಯಣ" ಎಂದು ವಿಷ್ಣು ಸಹಸ್ರನಾಮಕ್ಕಿಂತ ಜಾಸ್ತಿಯಾಗಿ ಹೇಳಿರುತ್ತಾನೆ. ಆದರೆ ಅವನು ಹೇಳುವ ಉದ್ದಿಶ್ಯ ನಾರಾಯಣನಿಗೆ ಕಾಲಿಲ್ಲದ ಕುಂಟ ಎಂದರ್ಥವೋ ಅಥವಾ ನನಗೆ ಕಾಲಿಲ್ಲ ಕುಂಟನಾಗಿದ್ದೇನೆ ನಾರಾಯಣ ನನ್ನನ್ನು ಕಾಪಾಡು ಎಂಬುದೋ ಗೊತ್ತಾಗುವುದಿಲ್ಲ. ಹೀಗೆ ಹೇಳಿದರೆ ಅದನ್ನು ಸರಿಯಾಗಿ ಹರಿ ಎಂದು ಹೇಳಿದ ಹಾಗೆ ಆಗುವುದಿಲ್ಲ. ಆದುದರಿಂದ ಶಾಸ್ತ್ರ ಶ್ರವಣ ಅಭ್ಯಾಸ ಮಾಡಿ ನಾರಾಯಣ ದೋಷದೂರ ಎಂದು ಶ್ರವಣ ಮಾಡಿ ತಿಳಿದುಕೊಂಡು ಅದರಂತೆ ಅನುಸಂಧಾನ ಮಾಡಿದರೆ ಹರಿ ಎಂಬೆರಡಕ್ಷರವನ್ನು ಉಚ್ಚಾರಣೆ ಮಾಡಬೇಕೆಂದು ಹೇಳಿರುವುದು ಯಥಾರ್ಥವಾಗುತ್ತದೆ. ಇದಕ್ಕೆ ಫಲ ಮೇಲೆ ಕೊಟ್ಟಿರುತ್ತೇವೆ.

# ಕಲಿಯುಗದಲ್ಲಿ ಕಾಲಚಕ್ರ ಮಹಿಮಾ




ಸಾಧುಸಂಗ ಕೊಟ್ಟು ನಿನ್ನ ಪಾದಭಜನೆ ಇತ್ತು ಎನ್ನ ಭೇದ ಮಾಡಿ ನೋಡದಿರು ಹೇ ಅಧೋಕ್ಷಜ

**ಸಾತ್ವಿಕ ಪ್ರಾಚುರ್ಯ** ಕಾಲದಲ್ಲಿ ಜ್ಞಾನಿಗಳು, ತಪಸ್ವಿಗಳು, ಹರಿಭಕ್ತರು ಅವತಾರ ಮಾಡುತ್ತಾರೆ. ಅದಕ್ಕೆ ತಕ್ಕಂತೆ ಅದರ ಅನುಯಾಯಿಗಳು ಬರುತ್ತಾರೆ. ಆಗ ಎಲ್ಲೆಲ್ಲೂ ಧರ್ಮದ ಪ್ರಾಚುರ್ಯವೇ ಕಾಣುತ್ತದೆ, ಶ್ರೀಮದಾಚಾರ್ಯರ ಕಾಲ, ಶ್ರೀ ವ್ಯಾಸರಾಜರ ಕಾಲ, ಶ್ರೀರಾಯರ ಕಾಲ, ಶ್ರೀವಿಜಯದಾಸರ ಕಾಲ. ಇತ್ಯಾದಿ.

**ರಾಜಸ ಪ್ರಾಚುರ್ಯ** ಕಾಲದಲ್ಲಿ ಮಿಶ್ರ ವ್ಯಾಪಾರ ನಡೆಯುತ್ತದೆ. ಅಂತಹ ಮುಖಂಡರು ಮತ್ತು ಅದರ ಅನುಯಾಯಿಗಳು ಸೃಷ್ಟಿಯಾಗುತ್ತಾರೆ. ಬೆಳಿಗ್ಗೆ ಮನೆಯಲ್ಲಿ ದೇವರ ಪೂಜೆ ಮಡಿಯಲ್ಲಿ ಮಾಡಿ ಅಂಗಾರ ಅಕ್ಷತೆ ಹಚ್ಚಿಕೊಂಡು ಹೊರಗೆ ಹೋಗಿ ಹೋಟೆಲ್‌ನಲ್ಲಿ ಸಿಕ್ಕದವರ ಜೊತೆ ತಿಂದುಬರುವುದು. ಬೆಳಿಗ್ಗೆ ರಾಯರ ಗುಡಿಗೆ ಹೋಗಿಬಂದು, ಸಾಯಂಕಾಲ ಸಾಯಿಬ್ಬಾಬನ ಗುಡಿ, ರಾತ್ರಿ ಅಯ್ಯಪ್ಪನ ಗುಡಿಗೆ ಹೋಗಿಬರುವುದು. ಪುರಾಣದಲ್ಲಿ ಮಹಾವಿರಕ್ತರಾದ ಜಡಭರತರಾಯರ ಕತೆಯನ್ನು ಹೇಳಿ ಕೇಳಿ ವೈರಾಗ್ಯದ ಮಹಿಮೆಯನ್ನು ವರ್ಣಿಸಿ ಮನೆಗೆ ಬಂದು ಟಿ.ವಿ. ಮುಂದೆ ಕುಳಿತುಕೊಂಡು ಕ್ರಿಕೆಟ್ ಮ್ಯಾಚ್ ಕಾಮಂಟ್ರಿ ಹುಚ್ಚುಚ್ಚು ಕುಣಿತಗಳು ನೋಡಿ ಸಂತೋಷಪಡುವುದು.

**ತಾಮಸ ಪ್ರಾಚುರ್ಯ** ಕಾಲದಲ್ಲಿ ವಿಶೇಷವೇನೆಂದರೆ - ಹಿಂದೆ ಒಬ್ಬ ಹಿರಣ್ಯಕಶಿಪು, ಒಬ್ಬ ರಾವಣ ಇದ್ದರು ಅವರಿಗೆ ದೇಹ ಬಲ, ಆಯಸ್ಸು ವರ ಬಲ ಮುಂತಾದ ಮಹಿಮೆಗಳಿಂದ ಅಸಾಧ್ಯ ಹಾವಳಿ ಮಾಡುತ್ತಿದ್ದರು. ಅದಕ್ಕೆ ಒಬ್ಬ ಶ್ರೀನರಸಿಂಹದೇವರು, ಒಬ್ಬ ಶ್ರೀರಾಮದೇವರು ಬಂದು ಅವರನ್ನು ಸಂಹಾರ ಮಾಡಿ ಧರ್ಮ ಉಳಿಸುತ್ತಿದ್ದರು. ಈಗ ಕಲಿಯುಗದಲ್ಲಿ ಅನೇಕ ಹಿರಣ್ಯಕಶಿಪುಗಳು, ರಾವಣರುಗಳು ಹುಟ್ಟಿ ಹಾವಳಿ ಮಾಡುತ್ತಿರುವುದರಿಂದ ಅನೇಕ ನರಸಿಂಹದೇವರುಗಳು ಮತ್ತು ರಾಮದೇವರುಗಳು ಬಂದು ಸಂಹಾರ ಮಾಡಬೇಕಾಗಿದೆ.

ಈಗ ಹಾವಳಿ ಈ ರೀತಿ ಇರುತ್ತದೆ - ಧಾರ್ಮಿಕ ಮುಖಂಡರುಗಳಾಗಿ ಧರ್ಮವನ್ನು ವ್ಯತ್ಯಾಸ ಮಾಡುತ್ತಾ, ಜ್ಞಾನ ಪಲ್ಲಟ ಮಾಡುತ್ತಾ, ಆಚಾರ-ವಿಚಾರ ವ್ಯತ್ಯಾಸ ಮಾಡುತ್ತಾ ನಾನಾ ತರಹ ಆಚರಣೆಗಳನ್ನು ತೋರಿಸಿ ಅವರ ಅನುಯಾಯಿಗಳಿಗೆ ಅಡ್ಡದಾರಿ ತೋರಿಸುತ್ತಾರೆ. ಅಥವಾ ರಾಜಕೀಯ ರಂಗದಲ್ಲಿ ಚುನಾವಣೆಯ ಚುಡಾವಣೆಯ ತಪಸ್ಸಿನ ಮೂಲಕ ಪ್ರಜೆಗಳ 'ಓಟು'ನ ವರ ಬಲದಿಂದ ಪ್ರಜಾ ಕರಕಮಲಸಂಜಾತರಾದ ರಾಜಕೀಯ ಮುಖಂಡರುಗಳಾಗಿ ಧರ್ಮದ ಕಾನೂನುಗಳನ್ನು ಬದಲಾಯಿಸಿ, ಅದನ್ನು ಬಲವಂತವಾಗಿ ಜಾರಿಗೆ ತಂದು ಲಂಚ, ಅನ್ಯಾಯ, ದ್ರೋಹ ವಿಪರೀತ ಸಂಗ್ರಹ ಹೆಚ್ಚಿಗೆ ತೆರಿಗೆ ಹಾಕುವ ಮುಂತಾದ ನಾನಾತರಹದ ಕಾರ್ಯಕ್ರಮಗಳಿಂದ ಸಾಮಾನ್ಯ ಜನರಿಗೆ ಹಿಂಸೆಯಾಗುವಂತೆ ಮಾಡಿ ಸಾಮಾನ್ಯ ಜನರ ಸ್ವಾತಂತ್ರ್ಯವನ್ನು ಅಪಹರಿಸಿ ಕೊನೆಗೆ ತೆರಿಗೆ ಕೊಡಲಾರದೆ ಕಾಡಿಗೆ ಓಡಿ ಹೋಗಬೇಕಾಗುವಂತಹ ಪರಿಸ್ಥಿತಿಯನ್ನು ತರುತ್ತಿದ್ದಾರೆ, ದಸ್ಯುಗಳು (ಕಳ್ಳರು) ರಾಜ್ಯವಾಳುತ್ತಾರೆ ಎಂದು ಪುರಾಣದಲ್ಲಿ ಹೇಳಿರುವುದು ನಿಜವಾಗುವ ಕಾಲ ಬಂದಿದೆ.

**ಈ ಸಮಯದಲ್ಲಿ ಒಬ್ಬ ಲಾವಣಿಕಾರ ಈ ರೀತಿ ಬರೆದಿರುತ್ತಾನೆ** - 'ಕನ್ನಡ ನಾಡಿನ ಕನ್ನಡ ಜನರಿಗೆ ಕನ್ನಡ ಭಾಷೆಯೆ ಮರೆತೋಯ್ತು । ವರ ಕನ್ನಡ-ಇಂಗ್ಲೀಷ್ ಬೆರೆತೋಯ್ತು, ಘನ ಹೊನ್ನಿನ ದೇಶವು ಮಣ್ಣಾಯ್ತು - ತಿನ್ನಲು ಮನೆಯಲಿ ಸೊನ್ನೆಗಳಾದರು - ಉನ್ನತ ಶೋಕಿಯು ಬಲವಾಯ್ತು - ನವನವೀನ ವಿಚಾರವು ಅತಿಯಾಯ್ತು - ನವರಂಗಾಟಗಳು ಹೆಚ್ಚಾಯ್ತು - ಕಾವಿಯ ಧರಿಸಿದ ಕಪಟ ಸನ್ಯಾಸಿಗಳ ವಿಚಾರ ತತ್ತ್ವವು ಅತಿಯಾಯ್ತು - ಕಂಠ ಕಳೆವ ಶ್ರೀಕಂಠನ ಧ್ಯಾನವು ಜಂಟಲ್‌ಮನ್‌ಗಳಿಗೆ ಇರದೋಯ್ತು.

# ಪಂಚಭೇದ ಪ್ರಪಂಚದಲ್ಲಿ ವಂಚನೆಯ ಸಂಚಿನ ಪರಿಚಯ

ರಾಮೋರಾಜ್ಯಾಭಿಷಿಕ್ತಶನ್ ಸ್ವಶಾಸ ಜಗತೀಂ ಪ್ರಭುಃ
ಧರ್ಮಾನಶಿಕ್ಷಯತ್ಪೂರ್ಣೋ ಬುಭುಜೇ ಸಂಪದಃ ಸುಖೀ

ಶ್ರೀರಾಮದೇವರು ರಾಜ್ಯದಲ್ಲಿ ಅಭಿಷೇಕ ಮಾಡಿಸಿಕೊಳ್ಳಲ್ಪಟ್ಟವರಾಗಿ ಭೂಮಿಯನ್ನು ರಕ್ಷಿಸಿದರು. ವರ್ಣಾಶ್ರಮೋಚಿತ ಧರ್ಮಗಳನ್ನು ತಮ್ಮ ಆಚಾರಗಳಿಂದ ಜನರಿಗೆ ತಿಳಿಯಪಡಿಸಿ ಪೂರ್ಣವಾದ ಸುಖವುಳ್ಳ ಸಮರ್ಥರಾದ ಶ್ರೀರಾಮದೇವರು ವೈಭವಗಳನ್ನು ಅನುಭವಿಸಿದರು.

ಯದ್ಯದಾಚರತಿ ಶ್ರೇಷ್ಠಃತತ್ತದೇವೇತರೋ ಜನಾಃ

ದೊಡ್ಡವರು ಹೇಗೆ ಹೇಗೆ ಆಚರಣೆ ಮಾಡುತ್ತಾರೋ ಅದರಂತೇ ಇತರೇ ಜನಗಳೂ ಆಚರಿಸುತ್ತಾರೆ. ಶ್ರೀರಾಮದೇವರು ಧರ್ಮಶಾಸ್ತ್ರಗಳನ್ನು ರಚಿಸಿ ಶ್ರೀಹನುಮಂತ ದೇವರಿಗೆ ಪಾಠಹೇಳಿ ಅವರಿಂದ ಸನಕಾದಿಗಳಿಗೆ ಪಾಠಹೇಳಿಸಿ, ತಾವೂ ಆಚರಣೆ ಮಾಡಿ ಜನಗಳಿಗೆ ತೋರಿಸಿಕೊಟ್ಟರು. ಹೀಗೆ ೧೩ ಸಾವಿರ ವರ್ಷ ರಾಜ್ಯವಾಳಿದರು ಆಗ ಅದು ರಾಮರಾಜ್ಯ - ಅಲ್ಲಿದ್ದವರೆಲ್ಲಾ ರಾಮರಾಜ್ಯದ ಪ್ರಜೆಗಳು. ಈಗ ದಸ್ಯುಗಳ ರಾಜ್ಯ (ರಾವಣ)

**ವಂಚನೆ ಕ್ರಮಗಳು ಹೇಗೆ ಇವೆ? ಅಡ್ಡದಾರಿಗೆ ತಿರುಗಿಸುವ ಸೊಬಗು**

"ಯಏತತ್ಪರತಂತ್ರಂ ತು ಸರ್ವಮೇವ ಹರೇಸ್ಸದಾವಶ ಮಿತ್ಯೇವ ಜಾನಾತಿ
ಸಂಸಾರಾನ್ಮುಚ್ಯತೇ ಹಿ ಸಃ । ಸ್ವತಂತ್ರಃಕರ್ತಾಹರಿರೇವ ಜೀವೋಽಪಿ ಕರ್ತಾ ॥

ಇದೆಲ್ಲದರ ಅರ್ಥವನ್ನು ಶ್ರೀಗೋಪಾಲದಾಸರು ಎಲ್ಲವೂ ಶ್ರೀಹರಿಯ ಅಧೀನ ಎಂದು ತಿಳಿವುದಕ್ಕಿಂತ ಅನ್ಯಸಾಧನವಿಲ್ಲ, ಎಂದು ನುಡಿದರು. "ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತಿಃ ಪ್ರಬೋಧಯನ್ ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ" ಸಾತ್ವಿಕ, ರಾಜಸ, ತಾಮಸರಲ್ಲಿ ಅವರವರ ಸ್ವಭಾವದಂತೆ ಕಾರ್ಯಗಳು ನಡೆಯುತ್ತವೆ. ಇದಕ್ಕೆ ಮೂಲ ಕಾರಣ ಅವರವರ ಸ್ವಭಾವ ಅದರಂತೆ ಆಗುವ ಭಗವಂತನ ಪ್ರೇರಣೆ. ಇದರಿಂದ ದೇವರಲ್ಲಿ ಯಾವ ದೋಷವೂ ಇಲ್ಲ.

"ಅಸುರಾಃ ಕಲಿಮಾಶ್ರಿತ್ಯ ಜಾಯಂತೇ ಬ್ರಹ್ಮಯೋನಿಷು
ಬಾಧ್ಯಂತೇ ಶ್ರೋತ್ರಿಯಾನ್ ಕೃಶಾನ್"

"ವಸುಧೆಯೊಳು ಅಸುರಜನರೇ ಬಹಳ ವಶವಲ್ಲವೋ ಕಲಿಯ ಬಾಧೆ, ಬಿಸಿಲಿನಿಂದ ಪೀಡಿತವಾದ ಸಸಿಗಳಂತೆ ಶಿಶುಗಳು ನಾವಿಪ್ಪವೋ ಅಸುನಾಥ ಪೊರೆಯೋ ಹರಿಯೇ" ಶ್ರೀಗೋಪಾಲದಾಸರ ವಾಣಿ. ಅಸುರರು ಕಲಿಯುಗದಲ್ಲಿ ಕಲಿಯನ್ನು ಆಶ್ರಯಿಸಿ ಬ್ರಾಹ್ಮಣ ಕುಲದಲ್ಲಿ ಹುಟ್ಟಿ (ಎಲ್ಲರಿಗೂ ಅನ್ವಯವಲ್ಲ ಕೇಚಿತ್ ಪಕ್ಷ) ಶ್ರೋತ್ರಿಯರನ್ನು ಕೃಶರಾದವರನ್ನು ಪೀಡಿಸುತ್ತಾರೆ ಎಂಬ ಶಾಸ್ತ್ರ ವಚನವನ್ನು ದಾಸರು ತಮ್ಮ ನುಡಿಯಲ್ಲಿ ಹೇಳಿದ್ದಾರೆ. ಅಂತಹವರಲ್ಲಿ ಕೆಲವರು, ಮಾಧ್ವರಾಗಿ ಹುಟ್ಟಿ ಮಧ್ವಶಾಸ್ತ್ರವನ್ನು "ಅಪಸವ್ಯಮನನಾಗಿ ಓದಿಕೊಂಡೆನು ಇದೆಲ್ಲ ಸೊಲ್ಲ" ಎಂಬ ಶ್ರೀಜಗನ್ನಾಥದಾಸರಾಯರ ವಾಣಿಯಂತೆ, ಪಾಠಪ್ರವಚನ, ಉಪದೇಶಗಳನ್ನು ಮಾಡುತ್ತಾ, "ಆಚಾರವೇ ಪ್ರಥಮ ಧರ್ಮ ಅದಕ್ಕೆ ನಾಶರಹಿತನಾದ ಅಚ್ಯುತನೇ ಪ್ರಭು" ಎಂಬ ಶ್ರೀವೇದವ್ಯಾಸರ ಅಭಿಪ್ರಾಯಕ್ಕೆ ಕುಠಾರಪ್ರಯೋಗ ಮಾಡಿ, ಶಾಸ್ತ್ರ ಮರ್ಯಾದೆ ಮೀರಿ ಮುಸಲ್ಮಾನ್, ಕ್ರೈಸ್ತರ ಆಚರಣೆಗಳಲ್ಲಿ ದೀಕ್ಷೆಯುಳ್ಳವರಾಗಿ, ಹಿಂದಿಂದನ್ನು ಮುಂದೆ ಮಾಡಿ, (ಜುಟ್ಟನ್ನು ದಾಡಿ ಮಾಡಿ) ಕೆಳಗಿಂದನ್ನು ಮೇಲೆ ಮಾಡಿ, ಎಲ್ಲಾ ವ್ಯತ್ಯಾಸ ಮಾಡಿ "ಕರ್ಮಸಂಗಿಗಳಾದ ಅಲ್ಪ ಜ್ಞಾನಿಗಳ ಬುದ್ಧಿ

ಭೇದ ಮಾಡಬಾರದು" ಎಂಬ ಶ್ರೀಕೃಷ್ಣನ ಅಪ್ಪಣೆಯನ್ನು ಮೀರಿ, ಪರಂಪರಯಿಂದ ಬಂದ ಶಾಸ್ತ್ರಾರ್ಥ, ಕಥೆ, ನಂಬಿಕೆ, ಆಚಾರ ಅನುಸಂಧಾನಗಳನ್ನು ಬದಲಾಯಿಸಿ ಸಂದೇಹಗಳನ್ನು ತಂದುಹಾಕಿ ಬೇರೆ ಅರ್ಥಮಾಡಿ ಶುಷ್ಕತರ್ಕದ ವಾಗ್ಬಾಣಗಳ ಮೂಲಕ ಬ್ರಹ್ಮಾಸ್ತ್ರಪ್ರಯೋಗ ಮಾಡುತ್ತಿದ್ದಾರೆ. ಇದೇ ಪೀಡಿಸುವ ಕ್ರಮ. ಇದು ಯಾರಿಗೆ ತೊಂದರೆ ಮಾಡುತ್ತದೆ ಅಂದರೆ.... ಮುಂದೆ ಕೇಳಿ.

ನಾನು ಯಾರು, ಎಲ್ಲಿಂದ ಬಂದೆ, ಇಲ್ಲಿ ಮಾಡಬೇಕಾದದ್ದು ಯಾವುದು, ಮಾಡಬಾರದ್ದು ಯಾವುದು, ಇಲ್ಲಿಂದ ಮುಂದೆ ಎಲ್ಲಿಗೆ ಹೋಗುತ್ತೇನೆ, ನಾನು ಏನನ್ನು ಹೊಂದಬೇಕು, ಎಂಬ ವಿಚಾರಗಳನ್ನು ನಿಜವಾಗಿ ತಿಳಿದುಕೊಂಡು ಸಾಧನೆ ಮಾಡಬೇಕೆಂಬ ಹಂಬಲುಳ್ಳ, ಆಗ ತಾನೇ ಮೊಟ್ಟೆಯೊಡೆದು ಈಚೆಗೆ ಮೂಡಿ ಬಂದಿರುವ ಗುಬ್ಬಚ್ಚಿ ಮರಿಯಂತಿರುವ ಬಡಪಾಯಿ ಸಾಚಾ ಸಾಧಕರಿಗೆ..... ತೊಂದರೆ. ಇವರು ಮೇಲ್ಕಂಡ ಉಪದೇಶದ ಫಲವಾಗಿ ತಾವು ಮಾಡುತ್ತಿರುವ ಸಣ್ಣಪುಟ್ಟ ಸಾಧನೆಗಳನ್ನು ಬಿಟ್ಟು ಅವರ ಬ್ರಹ್ಮಾಸ್ತ್ರಕ್ಕೆ ಸಿಲುಕಿ, ಅವರ ಬುಟ್ಟಿಯೊಳಕ್ಕೆ ಸಿಕ್ಕಿಬಿದ್ದು ತ್ರಿಶಂಕು ಸ್ವರ್ಗಕ್ಕೆ ಹೋಗಿ, ಅಲ್ಲಿ ತಲೆಕೆಳಕಾಗಿ ಕಾಲು ಮೇಲಾಗಿ ಮಾಡಿ ನೇತಾಡುತ್ತಿರಬೇಕಾಗುತ್ತದೆ. ಇದು ಬೇಕಾದರೆ ಅಲ್ಲೇ ಹೋಗಬಹುದು. ಅದು ಬೇಡವಾದರೆ ಸತ್ಸಂಪ್ರದಾಯವುಳ್ಳ ಗುರುಗಳಿಂದ ಸರಿಯಾಗಿ ತಿಳಿದುಕೊಂಡು ಶ್ರೀಹರಿವಾಯುಗಳ ಕೃಪೆಗೆ ಪಾತ್ರರಾಗಿ ನಿರ್ದುಃಖಾನಂದ ಭರಿತವಾದ ಶಾಶ್ವತಮೋಕ್ಷ ಪಡೆಯಿರಿ.

ಅಸಾತ್ವಿಕರು ತಮ್ಮ ಸ್ವಭಾವಕ್ಕನುಗುಣವಾಗಿ ಜ್ಞಾನ, ಆಚರಣೆ, ನಡೆ-ನುಡಿ, ಅನುಷ್ಠಾನಗಳಿಂದ ನಡೆದುಕೊಳ್ಳುತ್ತಾರೆ. ಇದರಿಂದ ಪ್ರಭಾವಿತರಾದ ಸಾತ್ವಿಕರಾದ ಸಜ್ಜನರೂ ಕೂಡ ತಮ್ಮ ಹಾದಿ ಬಿಟ್ಟು ಇವರ ಹಾದಿಗೆ ಹೋಗುತ್ತಾರೆ.

ಶ್ರೀಮದಾಚಾರ್ಯರಿಂದ ವಾಕ್ಯಾರ್ಥದಲ್ಲಿ ಸೋತು ಹೋದ ಪೂರ್ವೋಕ್ತರಾದ ದೈತ್ಯರಲ್ಲಿ ಕೆಲವರು ತಮ್ಮ ಕೆಲಸವನ್ನು ಮುಂದುವರಿಸಲು ಇನ್ನೊಂದು ಹೊಸ ಕ್ರಮವನ್ನು ಹಿಡಿದರು. ಪ್ರಕಟ ಬೌದ್ಧನಾಗಿ ಬಂದು ವೇದ ಅಪ್ರಮಾಣ ಅಂತ ವಾಕ್ಯಾರ್ಥಕ್ಕೆ ಬಂದರು, ಆಗ ವೈದಿಕರು ಅವರನ್ನು ಜಲ್ಪ, ವಿತಂಡ ಕ್ರಮದಲ್ಲಿ ವಾದದಲ್ಲಿ ಸೋಲಿಸಿ ಓಡಿಸಿದರು. ಪುನಃ ಅವರು ಶಾಲು ಹೊದ್ದಿಕೊಂಡು ಪ್ರಚ್ಛನ್ನಬೌದ್ಧರಾಗಿ ಬಂದು ವೈದಿಕ ವೇಷದಿಂದ ವೇದ ಒಪ್ಪುತ್ತೇವೆ. ಆದರೆ ಅದು ಸುಳ್ಳು ಹೇಳುತ್ತದೆ. ಅಂತ ಬೌದ್ಧ ಮತದ ತತ್ವವನ್ನೇ ವೈದಿಕ ಶಬ್ದಗಳಿಂದ ಹೇಳುತ್ತಾ ವಾದಕ್ಕೆ ಬಂದರು. ಆಗಲೂ ವೈದಿಕರು ಅವರನ್ನು ನಿರುತ್ತರನ್ನಾಗಿ ಮಾಡಿ ಓಡಿಸಿದರು. ಆಗ ಅವರು ಇನ್ನು ಇದು ಪ್ರಯೋಜನವಿಲ್ಲ ಇವರ ವಂಶದಲ್ಲೇ ಹುಟ್ಟಿ ಇವರ ಶಾಸ್ತ್ರವನ್ನೇ ಹಾಳು ಮಾಡೋಣ ಎಂದು ಯೋಚಿಸಿ ಮಾಧ್ವರಾಗಿ ಹುಟ್ಟಿ ಉಪದೇಶ ಮಾಡತಕ್ಕ ಜಾಗಗಳಲ್ಲಿ ಉತ್ತಮ ಸ್ಥಾನಗಳಲ್ಲಿ ಬಂದು ಗುರುವಿಗೆ ತಿರುಮಂತ್ರ ಎನ್ನುವ ಹಾಗೆ ಶ್ರೀಮದಾಚಾರ್ಯರಿಂದ ಪ್ರಾರಂಭಿಸಿ ಬಹಳ ಕಾಲದಿಂದ ಪರಂಪರಾಗತವಾಗಿ ಬಂದ ಪ್ರಾಚೀನ ಶಾಸ್ತ್ರಾರ್ಥಗಳನ್ನು ತಮ್ಮ ತಾರ್ಕಿಕ ಬುದ್ಧಿಯಿಂದ ಅರ್ಥಾಂತರ ಮಾಡಿ ಶ್ರುತಪರಿತ್ಯಾಗ ಮಾಡಿ ತಮ್ಮ ಸ್ವಂತವಾದ ನೂತನ ಅರ್ಥಗಳನ್ನು ಮಾಡಿ ಅಶ್ರುತಕಲ್ಪನ ಮಾಡಿ ಬುದ್ಧಿ ಭೇದ ಮಾಡುತ್ತಿದ್ದಾರೆ. ಕೆಲವರು ಹೇಳುವ ವಾದಗಳು ಕೆಳಕಂಡಂತೆ ಇರುತ್ತವೆ.

ಅಪೌರುಷೇಯವಾದ ವೇದಗಳನ್ನು ಶ್ರೀಬಾದರಾಯಣಕೃತಬ್ರಹ್ಮಸೂತ್ರಗಳ ಮೂಲಕ ಅರ್ಥ ಮಾಡಿಕೊಳ್ಳಬೇಕಾದ ಆವಶ್ಯಕತೆ ಇಲ್ಲ. ಹಾಗೆ ನೇರವಾಗಿ ಅರ್ಥಮಾಡಿಕೊಳ್ಳಬಹುದು ಅಂತ ಕೆಲವರ ಅಭಿಪ್ರಾಯ - ಇದೇ ಅಡ್ಡದಾರಿಯ ಕ್ರಮ.

ವೇದಗಳಿಗೆ ೩ ಅರ್ಥಗಳುಂಟು. ಹಾಗೇ ಅರ್ಥ ಮಾಡಿದರೆ ಸರಿಯಾದ ಅಭಿಪ್ರಾಯ ಗೊತ್ತಾಗುವುದಿಲ್ಲ. ಅದಕ್ಕಾಗಿಯೇ ಸರ್ವಜ್ಞರಾದ ಶ್ರೀಹರಿವಾಯುಗಳು ಸಜ್ಜನರಿಗೆ ಯಥಾರ್ಥ ಜ್ಞಾನ ಬರಲೋಸುಗ ಶ್ರೀಬ್ರಹ್ಮಸೂತ್ರ ಮತ್ತು ಅದರ ಭಾಷ್ಯ ರಚನೆ ಮಾಡಿಕೊಟ್ಟಿದ್ದಾರೆ. ಶ್ರೀಹರಿವಾಯುಗಳ

ಬುದ್ಧಿ ಉತ್ತಮವೋ ಅಥವಾ ಪೂರ್ವಪಕ್ಷದವರ ಬುದ್ಧಿ ಉತ್ತಮವೋ ಯೋಚಿಸಿ ನೋಡಿ. ಮೂಲ ವಸ್ತುವಾದ ಅಕ್ಕಿಯನ್ನು ಹಾಗೆಯೇ ಮುಕ್ಕುವುದುಕ್ಕಾಗುವುದಿಲ್ಲ ಹೊಟ್ಟೆ ನೋವು ಬರುತ್ತದೆ. ಅದಕ್ಕೆ ಅಗ್ನಿ, ಅಂಬು (ನೀರು) ಸಂಬಂಧವಾಗಿ ಅನ್ನವಾಗಿ ಸಂಸ್ಕಾರ ಮಾಡಿ ನಂತರ ದೇವರಿಗೆ ನೈವೇದ್ಯ, ವೈಶ್ಯದೇವ ಬ್ರಾಹ್ಮಣರ ಭೋಜನಾನಂತರ ನಮಗೆ ಭೋಜನ - ಹಾಗೆ ಮಾಡದಿದ್ದರೆ ನಾವು ಕಳ್ಳರಾಗುತ್ತೇವೆ. ಮೂಲದಿಂದಲೇ ಅರ್ಥವಾಗುತ್ತದೆ ಎಂದು ಹೇಳುವವರಲ್ಲಿ ಒಬ್ಬರು, ಬೈಬಲನ್ನು ಓದಿ ವೇದ ಅರ್ಥ ಮಾಡಿಕೊಂಡೆ ಎಂದು ಹೇಳುತ್ತಾರೆ. ಅಂದರೆ ಬ್ರಹ್ಮಸೂತ್ರ ಭಾಷ್ಯಕ್ಕಿಂತ ಬೈಬಲ್ ಹೆಚ್ಚಾಯಿತು. ಇದು ಸರಿಯೇ ಯೋಚಿಸಿ. ಇದೊಂದು ಅಡ್ಡದಾರಿ.

ಶ್ರೀ ೧೦೮ ವಿಜಯಧ್ವಜಾಚಾರ್ಯರು ಶ್ರೀ ಮದ್‌ಭಾಗವತಕ್ಕೆ ೩ ಸರಿ ವ್ಯಾಖ್ಯಾನ ಮಾಡಿದ್ದಾರೆ. ಮೊದಲು ಬರದದ್ದು ಕಳ್ಳತನವಾಗಿ ಹೋಯಿತು (ದೇವತಾಯೋಗ್ಯವಾದ ವ್ಯಾಖ್ಯಾನವಾದ್ದರಿಂದ ದೇವತೆಗಳು ಸ್ವೀಕರಿಸಿದರು) ಇನ್ನೊಂದು ಬರೆದಿದ್ದು ಬೆಂಕಿಯಿಂದ ನಾಶವಾಯಿತು. (ಇದು ದೇವ ಯೋಗ್ಯವಾದ ವ್ಯಾಖ್ಯಾನವಾದ್ದರಿಂದ ಅದು ದೇವತೆಗಳಿಗೆ ಹೋಯಿತು). ಮೂರನೇ ಸರಿ ಬರೆದದ್ದು ಮನುಷ್ಯ ಯೋಗ್ಯವಾದ ವ್ಯಾಖ್ಯಾನ, ಅದೇ ಈಗ ಉಪಲಬ್ಧವಾಗಿರುವುದು. ಇದು ಬಿಟ್ಟರೆ ನಮಗೆ ಬೇರೆ ಗತಿ ಇಲ್ಲ. ಇಂಥ ಭಾಗವತ ವ್ಯಾಖ್ಯಾನ ಸರಿಯಾಗಿಲ್ಲ ಎಂದು, ತಪ್ಪುಗಳಿವೆ ಎಂದು ಹೇಳಿ ಹೊಸದಾಗಿ ವ್ಯಾಖ್ಯಾನ ಮಾಡಲು ಹೊರಟಿದ್ದಾರೆ. ಶ್ರೀ ಶ್ರೀ ೧೦೮ ವಿಜಯಧ್ವಜಾಚಾರ್ಯರ ನಂತರ ಹಸ್ತ ಪ್ರತಿ ಬರೆದವರ, ಅನಂತರ ಮುದ್ರಣ ಮಾಡಿದವರ ದೋಷಗಳಿಂದ ತಪ್ಪುಗಳಿರಬಹುದು ಇದಕ್ಕೆ ಅವರು ಸ್ವಾಮಿಗಳ ಮೇಲೆ ಅಪಾದನೆ ಮಾಡುವುದು ಸರಿಯಲ್ಲ ......... ಅಲ್ಲವೇ ಯೋಚಿಸಿ.

ಶ್ರೀಮತ್ಪೂರ್ಣಪ್ರಮತಿಕಾರುಣ್ಯಮಾನ್ಯಾಸ್ಪದರಾದ ಶ್ರೀಮಜ್ಜಯತೀರ್ಥಶ್ರೀಮಚ್ಚರಣರು ಅನುವ್ಯಾಖ್ಯಾನ ಗ್ರಂಥಕ್ಕೆ ಟೀಕಾರೂಪದಲ್ಲಿ ಬರೆದಿರುವದೇ ಶ್ರೀಮನ್ನ್ಯಾಸುಧಾಗ್ರಂಥ. ಸಾಮಾನ್ಯ ಬುದ್ಧಿಗೆ ಗೋಚರವಾಗದ ಪೂರ್ವಪಕ್ಷಗಳನ್ನು ತೋರಿಸಿ ಅದನ್ನು ಖಂಡನೆ ಮಾಡಿ, ಸಿದ್ಧಾಂತ ಸ್ಥಾಪನೆ ಮಾಡಿರುವ ಪ್ರೌಢಗ್ರಂಥ. ಹಿಂದೆ ಕಲ್ಕತ್ತಾ ನಗರದಲ್ಲಿ ಒಂದು ಸಭೆ ನಡೆಯಿತು. ಅಲ್ಲಿ ವಿಚಾರ ಏನೆಂದರೆ, ವ್ಯಾಖ್ಯಾನ ಬರವಣಿಗೆ ಶೈಲಿಯಲ್ಲಿ ಉತ್ತಮವಾಗಿವುದು ಯಾವುದು ಎಂಬ ವಿಷಯವಾಗಿತ್ತು. ನಮ್ಮ ಟೀಕಾರಾಯರ ವ್ಯಾಖ್ಯಾನ ವೈಖರಿಯು ಉತ್ತಮವಾದುದು ಎಂದು ಪರಕೀಯರು ನಿರ್ಮತ್ಸರರಾಗಿ ಒಪ್ಪಿಕೊಂಡು ತಮ್ಮ ಗೌರವ ಕೊಟ್ಟಿದ್ದಾರೆ. ಪಾಮರರಾದವರೂ, ಶ್ರವಣ ಮಾಡಿದರೆ ಅರ್ಥವಾಗದಿದ್ದರೂ ಆನಂದವಾಗುತ್ತದೆ. ಅದಕ್ಕೆ "ಸುಧಾವ ಪಠನೀಯಾ ವಸುಧಾ ವಾ ಪಾಲನೀಯಾ" ಅಂತ ಪಂಡಿತ ಮಂಡಲದಲ್ಲಿ ಮಂಡಿತವಾಗಿದೆ. ಇಂಥಹ ಶ್ರೀಮನ್ನ್ಯಾಯಸುಧಾ ಗ್ರಂಥವನ್ನು ಶ್ರೀಟೀಕಾರಾಯರು ಬರೆಯಬೇಕಾದ ಆವಶ್ಯಕತೆ ಇರಲಿಲ್ಲ. ಅಂತ ಬುದ್ಧಿ ಭೇದ ಮಾಡುವರು. ಇದು ಸರಿಯೇ ಯೋಚಿಸಿ ನೋಡಿ.

ಶ್ರೀ ವಾದಿರಾಜಸ್ವಾಮಿಗಳವರು ಪಾಮರರಿಂದ ಪಂಡಿತರವರೆಗೆ ಅನುಕೂಲವಾಗುವಂಥ ಅನೇಕ ಸಣ್ಣ ಪುಟ್ಟ ಗ್ರಂಥಗಳಿಂದ ಪ್ರೌಢ ಗ್ರಂಥಗಳವರೆಗೆ ರಚಿಸಿ, ಯುಕ್ತಿಮಲ್ಲಿಕಾದಿ ಗ್ರಂಥಗಳಿಂದ ಪರಮತ ಖಂಡನ ಪೂರ್ವಕ ಸ್ವಮತ ಸ್ಥಾಪನ ಮಾಡತಕ್ಕ ಕ್ರಮಗಳನ್ನು ತೋರಿಸಿಕೊಟ್ಟರು. ಶ್ರೀರುಕ್ಮಿಣೀಶವಿಜಯ ಮಹಾಕಾವ್ಯವನ್ನು ರಚಿಸಿ ತಮ್ಮ ವಿದ್ವತ್ ಪ್ರೌಢಿಮೆಯನ್ನು ತಮ್ಮ ಕೃತಿಯಿಂದ ತೋರಿಸಿಕೊಟ್ಟು ಉಪಕಾರ ಮಾಡಿದ್ದಾರೆ. ಅವರು ಆಡಿದ ವಚನಗಳೆಲ್ಲವೂ ವೇದಾರ್ಥಗಳೇ ಸಂದೇಹವಿಲ್ಲ. ಅಪರೋಕ್ಷ ಜ್ಞಾನಿಗಳಾದ ಇಂಥವರ ಗುಣಸೌರಭ ಯುಕ್ತವಾದ ಗ್ರಂಥಗಳಲ್ಲಿ ತಪ್ಪುಗಳನ್ನು ಹುಡುಕಲು ಪ್ರಯತ್ನ ನಡೆಯುತ್ತಿದೆಯೆಂದು ಶ್ರುತವಾಗಿದೆ. ಇದು ಸುವಾಸನೆಯಿಂದ ಕೂಡಿದ ಮಲ್ಲಿಗೆ ಹೂವಿನಲ್ಲಿ ದುರ್ವಾಸನೆ ಇದೆಯೇ ಅಂತ ಹುಡುಕಿದಂತೆ ಆಗುತ್ತದೆ. ಗುರುವಿಗೆ ತಿರುಮಂತ್ರ ಹೇಳಿದಂತೆಯೇ ಆಯಿತು - 'ಶ್ರಮ ಏವ ಹಿ ಕೇವಲಂ" ಇದು ಒಂದು ಗಂಭೀರವಾದ ಬುದ್ಧಿ ಭೇದ, ಯೋಚನೆ ಮಾಡಿನೋಡಿ.

ಅಪರೋಕ್ಷೀತೃತಶ್ರೀಶರು ಸಮುಪೇಕ್ಷಿತ ಭಾವಜರು, ಶ್ರೀವಾಯುದೇವರ ವಿಶೇಷ ಸನ್ನಿದಾನ ಪಾತ್ರರಾದ, ಶ್ರೀ ನರಸಿಂಹದೇವರು ತಮ್ಮ ತೊಡೆಯ ಮೇಲೆ ಕೂಡಿಸಿಕೊಂಡು ಲಾಲಿಸಿಕೊಂಡಂತಹ ಪ್ರಹ್ಲಾದಾಂಶರಾದ, ಶ್ರೀಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರ ಸ್ವಾಮಿಗಳವರಿಗೆ ವ್ಯಾಕರಣ ಜ್ಞಾನವಿಲ್ಲ ಎಂದು ಒಬ್ಬರ ವಾದ. ಇದೊಂದು ತರಹ ಬುದ್ಧಿ ಬೇದ. ಸರಿಯಾಗಿದೆಯೇ ವಿಚಾರ ಮಾಡಿ.

ಅಪರೋಕ್ಷ ಜ್ಞಾನಿಗಳಾದ ಶ್ರೀ ಭೃಗುಅಂಶ ಸಂಭೂತರಾದ ಶ್ರೀ ವಿಜಯದಾಸರ ದೇವರ ನಾಮಗಳಲ್ಲಿ ಪ್ರಾಮಾಣ್ಯ ಸಂದೇಹ ಪಡುವುದು ಎಷ್ಟರಮಟ್ಟಿಗೆ ಸರಿಯಾಗಿದೆ.

"ವ್ಯಾಸೋಚ್ಛಿಷ್ಟಂ ಜಗತ್ ಸರ್ವಂ" ಎಂದು ಪ್ರಸಿದ್ಧವಾಗಿರುವಾಗ ಶ್ರೀವ್ಯಾಸಕೃತ ಭವಿಷ್ಯೋತ್ತರ ಪುರಾಣದ ಶ್ರೀನಿವಾಸ ಕಲ್ಯಾಣದ ಕಥೆ ನಡೆದಿಲ್ಲ; ಸುಳ್ಳು ಎಂದು ಒಬ್ಬರ ವಾದ. ಶ್ರೀನಿವಾಸ ದೇವರು ಶ್ರೀ ವಿಷ್ಣುವಲ್ಲ, ಅದು ಸುಬ್ರಹ್ಮಣ್ಯ ಸ್ವಾಮಿ ಎಂದು ಅವರ ಅಭಿಪ್ರಾಯ. ಶ್ರೀವ್ಯಾಸರಾಜರು ಶ್ರೀನಿವಾಸದೇವರನ್ನು ೧೨ ವರ್ಷಗಳ ಪೂಜೆ ಮಾಡಿದ್ದು, ಶ್ರೀದಾಸರಾಯರುಗಳು ದೇವರನ್ನು ಸ್ತೋತ್ರ ಮಾಡಿದ್ದು ಎಲ್ಲಾ ಸುಳ್ಳಾಗಬೇಕಾಗುತ್ತದೆ ಇದು ಎಂಥ ಪ್ರಬಲ ಬುದ್ಧಿ ಭೇದ, ಯೋಚಿಸಿರಿ.

ಶ್ರೀಮದಾಚಾರ್ಯರಿಂದ ರಚಿತವಾದ ಸರ್ವಮೂಲಗ್ರಂಥಗಳಲ್ಲಿ ನಖಸ್ತುತಿಯು ಒಂದು ಗ್ರಂಥ. ಇದು ಎರಡು ಶ್ಲೋಕಗಳಿಂದ ಕೂಡಿದ್ದು, ಮೊದಲನೇ ಶ್ಲೋಕದಲ್ಲಿ ನರಸಿಂಹದೇವರ ನಖಸ್ತುತಿ ಮಾಡಿರುತ್ತಾರೆ. ಇದರಿಂದ ನರಸಿಂಹದೇವರಿಗೂ ಮತ್ತು ಉಗುರುಗಳಿಗೂ ಸ್ವಗತ ಭೇದ ಶೂನ್ಯ ಎಂಬ ತತ್ವವನ್ನು ತೋರಿಸುತ್ತದೆ. ನಂತರ ನರಸಿಂಹ ದೇವರ ಸ್ತೋತ್ರವನ್ನು ಮಾಡಿರುತ್ತಾರೆ. ಇದು ಪರಂಪರೆಯಿಂದ ಬಂದಿದೆ. ಹೀಗಿರುವಾಗ ನಖಸ್ತುತಿ ಒಂದೇ ಶ್ಲೋಕ ಇರುವುದು, ಎರಡು ಶ್ಲೋಕವಲ್ಲ ಎಂದು ಹೊಸ ವಾದ, ಭಕ್ತಿಯಿಂದ ಹೇಳುವವರಿಗೆ ಸಂದೇಹ ತಂದು ಕೊನೆಗೆ ಹೇಳಬೇಕೊ, ಹೇಳಬಾರದೋ ಹೇಳಿದರೆ ಪಾಪ ಬರುವುದೇನೊ ಎಂದು ಬುದ್ಧಿ ಭೇದ ಮಾಡಿ ಹಾಳುಮಾಡುತ್ತಿದ್ದಾರೆ. ಒಂದೇ ಶ್ಲೋಕವಿದ್ದರೂ ಸಹ ಎರಡು ಶ್ಲೋಕ ಹೇಳಿದರೆ ಇವರಿಗೇನು ನಷ್ಟವಾಗುತ್ತದೆ, ಮಾಡಬಾರದ ಕೆಲಸವೇನು ಅಲ್ಲ. ಹರಿಯ ಸ್ಮರಣೆಯನ್ನು ಎಷ್ಟು ಬಾರಿ ಮಾಡಿದರೂ ಸಾಲದು, ಬುದ್ಧಿ ಭೇದ ಎಷ್ಟು ಅಪಾಯಕಾರಿ ಆದುದರಿಂದ ಎರಡು ಶ್ಲೋಕಗಳನ್ನು ಪಾರಾಯಣ ಮಾಡುವುದೇ ಕರ್ತವ್ಯ ಕ್ಷೇಮಕರ.

"ಶ್ರೀಮನ್ ಮಧ್ವಮತೇ ಹರಿಃಪರತರಃ" ಈ ಶ್ಲೋಕ ಶ್ರೀ ವ್ಯಾಸರಾಜರು ಮಾಡಿದ್ದಲ್ಲ ಎಂದು ಒಬ್ಬರ ವಾದ ಇದನ್ನು ಚರ್ಚೆ ಮಾಡುತ್ತಿದ್ದಾರೆ. ಇದು ಚರ್ಚೆಗೆ ಉಚಿತವಾದ ವಿಚಾರವೇ ಅಲ್ಲ. ಪರಕೀಯರ ವಾಕ್ಯಗಳು ತಮ್ಮ ಸಿದ್ಧಾಂತಕ್ಕೆ ಪೂರಕವಾಗಿದ್ದರೆ ಸ್ವೀಕರಿಸಬಹುದು ಎಂದು ಪರಂಪರೆಯಿಂದ ಅಭಿಪ್ರಾಯವಿದೆ. ಹೀಗಿರುವಾಗ ಈ ಶ್ಲೋಕ ಮಧ್ವಮತದ ಸಿದ್ಧಾಂತಕ್ಕೆ ವಿರುದ್ಧವಾಗಿಲ್ಲ ಮತ್ತು ಪೋಷಕವಾಗಿದೆ, ಮಾಧ್ವರಲ್ಲಿ ಶ್ರೀ ವ್ಯಾಸರಾಜರನ್ನು ಬಿಟ್ಟು ಬೇರೆ ಯಾರು ಈ ಶ್ಲೋಕ ರಚಿಸಿದರು ಎಂದು ಕೇಳಿಲ್ಲ. ಹೀಗಿರುವಾಗ ಶ್ರೀ ವ್ಯಾಸರಾಜರೇ ಈ ಶ್ಲೋಕ ಮಾಡಿರುವುದು ಎಂದು ಹೇಳುವುದರಿಂದ ನಷ್ಟವೇನು ಇಲ್ಲ. ಆದ್ದರಿಂದ ಈ ವಿಚಾರದಲ್ಲಿ ಸಂದೇಹ ಪಡಬೇಕಾಗಿಲ್ಲ.

ಶ್ರೀ ವ್ಯಾಸರಾಜರು ತಮ್ಮ ಗ್ರಂಥಮಾಲಿಕಾ ಸ್ತೋತ್ರದಲ್ಲಿ ಸರ್ವಮೂಲಗಳ ಗ್ರಂಥಗಳ ಸಂಖ್ಯೆ ೩೭ ಎಂದು ಹೇಳಿದ್ದಾರೆ, ಈಗ ಕೆಲವರು ಇನ್ನೂ ಜಾಸ್ತಿ ಇದೆ ಎಂದು ಹೇಳುತ್ತಿದ್ದಾರೆ. ಹೀಗೆ ಹೇಳುವವರ ಬುದ್ಧಿಗಿಂತ ಶ್ರೀ ವ್ಯಾಸರಾಜರ ಬುದ್ಧಿ ಪ್ರೌಢವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ. ಅದರಿಂದ ಎಷ್ಟೇ ಹೆಚ್ಚು ಗ್ರಂಥಗಳಿದ್ದರೂ ಸಹ ಅದು ೩೭ರಲ್ಲೇ ಅಡಕವಾಗಿದೆ ಎಂದು ತಿಳಿಯುವುದು ಕ್ಷೇಮ.

### ಅಕ್ಷತೆ ಹಚ್ಚಿಕೊಳ್ಳುವುದಕ್ಕೆ ಎಲ್ಲಿ ಪ್ರಮಾಣವಿದೆ ಎಂದು ಪ್ರಶ್ನೆ?

ಅದಕ್ಕೆ ಮರು ಪ್ರಶ್ನೆ : ಅಕ್ಷತೆ ಹಚ್ಚಿಕೊಳ್ಳಬಾರದು ಎಂಬುದಕ್ಕೆ ಎಲ್ಲಿ ಪ್ರಮಾಣವಿದೆ ಅಂತ?

"ಅಲಂಕರಣಾರ್ಥಂ ಅಕ್ಷತಾನ್ ಸಮರ್ಪಯಾಮಿ" ಮಂತ್ರವೇ ಇದೆ, ಅಕ್ಕಿ ಸಂಬಂಧವಾದ ಮಂತ್ರಾಕ್ಷತೆ ಒಂದು, ಇನ್ನೊಂದು ಉದಕ ಸಂಬಂಧವಾದ ತಿಲಕಪ್ರಾಯದಲ್ಲಿ ತಿಲಕದಂತೆ ಹಚ್ಚಿಕೊಳ್ಳುವ ಗಂಧ ಸದೃಶವಾದ ಅಕ್ಷತೆ. ಇದು ಪರಂಪರೆಯಿಂದ ಅಕ್ಷತೆ ಹಚ್ಚಿಕೊಳ್ಳುವುದು ನಡೆದು ಬಂದ ಸಂಪ್ರದಾಯ, ಇಂತಹ ಸಂಪ್ರದಾಯಗಳಿಗೆ ಪ್ರಮಾಣ ಕೇಳಬಾರದು, ನಡೆದುಕೊಂಡು ಬಂದಿರುವುದೇ ಪ್ರಮಾಣ. ಇದು ಮಾಡಬಾರದ ಕೆಲಸವೇನು ಅಲ್ಲ, ಇದು ಯಾರ ಮನೆ ಹಾಳು ಮಾಡುವ ಕೆಲಸವೇನು ಅಲ್ಲ. ಎಲ್ಲಾ ಅಲಂಕಾರ ಮಾಡಿದರೂ ಸಹ ತಿಲಕವಿಲ್ಲದಿದ್ದರೆ ಅದು ಶೋಭಿಸುವುದಿಲ್ಲ, 'ಯದುಕುಲ ತಿಲಕ' ಎಂದು ದೇವರಿಗೆ ಕೊಂಡಾಡುತ್ತಿದ್ದಾರೆ. ತಿಲಕ ಎನ್ನುವುದು ಮಂಗಳ ಸೂಚಕವಾದ ಚಿಹ್ನೆ. ಲಲಾಟ ಶೂನ್ಯವು ಅಮಂಗಳ ಮತ್ತು ಶ್ಮಶಾನ ಸದೃಶ. ಇದು ಮುಸಲ್ಮಾನರ ಮತ್ತು ಕ್ರಿಶ್ಚಿಯನ್ನರ ಧರ್ಮ. ಇದನ್ನು ಹೇಳುವವರು ತಮ್ಮ ತರ್ಕಗಳಿಂದ ಬುದ್ಧಿ ಭೇದ ಮಾಡುತ್ತಿದ್ದಾರೆ. ಆದ್ದರಿಂದ ಇದು ಸೂಕ್ತವಾದುದಲ್ಲ.

ಅಕ್ಷತೆಗೆ ಹಚ್ಚಿಕೊಳ್ಳುವುದಕ್ಕೆ ಪ್ರಮಾಣವಿಲ್ಲ ಎಂದು ಹೇಳಿದ ಮೇಲೆ ಇವರು ಪ್ರಮಾಣಬದ್ಧವಾಗಿ ನಡೆದುಕೊಳ್ಳುವರು ಎಂದಾಯಿತು. ಹಾಗಾದರೆ ಗಡ್ಡ ಬಿಡುವುದಕ್ಕೆ, ಶರಟು, ಪೈಜಾಮ ಹಾಕಿಕೊಂಡು ಉಪನ್ಯಾಸ ಮಾಡುವುದಕ್ಕೆ, ವಿದೇಶಕ್ಕೆ ಹೋಗುವುದಕ್ಕೆ ಇತ್ಯಾದಿ, ಇತ್ಯಾದಿ ಅನೇಕ ಆಚರಣೆಗಳ ಹಾವಳಿಗೆ ಎಲ್ಲಿ ಪ್ರಮಾಣವೆಂದು ಕೇಳಬೇಕಾಗುತ್ತದೆ.

ಪ್ರಾತಃ, ಮಾಧ್ಯಾಹ್ನಿಕ, ಸಾಯಂ, ಸಂಧ್ಯಾವಂದನೆ ಎಂದು ತ್ರಿಕಾಲಗಳಲ್ಲಿ ಸಂಧ್ಯಾವಂದನೆ ಮಾಡಬೇಕೆಂದು ಅನುಷ್ಠಾನ ಬಂದಿರುತ್ತದೆ. ಹೀಗಿರುವಾಗ ಮಾಧ್ಯಾಹ್ನಿಕ ಸಂಧ್ಯಾವಂದನೆ ಪ್ರಮಾಣ ಇಲ್ಲ ಎಂದು ಒಬ್ಬರ ವಾದ. ಇದರಿಂದ ಬುದ್ಧಿಭೇದ ಉಂಟಾಗಿ ಕರ್ಮಲೋಪವಾಗುತ್ತದೆ. ಅದರಿಂದ ಸೂರ್ಯಹತ್ಯೆ ದೋಷ ಬರುತ್ತದೆ. ಈ ವಾದ ಸರಿಯಲ್ಲ.

ಹೆಂಗಸರು ಮುಟ್ಟಾದರೆ ಮೂರು ದಿವಸ ದೂರ ಇರಬೇಕೆ, ಇರಬೇಡವೇ ಎಂದು ಪ್ರಶ್ನೆ. ಉತ್ತರ ಹೀಗೆ ಹೇಳುತ್ತಾರೆ : ಶಾಸ್ತ್ರಗಳಲ್ಲಿ ಹೇಳಿದೆ, ದೂರವಿರುವುದು, ಇಲ್ಲದಿರುವುದು ನಿಮಗೆ ಸೇರಿದ್ದು ಅಂದರೆ ಅನುಮಾನವಾದ ಉತ್ತರ ಹೊರತು ನಿಶ್ಚಿತವಾದ ಅಭಿಪ್ರಾಯ ಬರಲಿಲ್ಲ. ಅವರಿಗೆ ಪರ್ಯಾಯವಾಗಿ ದೂರ ಇರಬಾರದೆಂಬ ಜ್ಞಾನ ಹುಟ್ಟುವುದಕ್ಕೆ ಅನುಕೂಲವಾಗುತ್ತದೆ. ರಜಸ್ಸಂಪರ್ಕದಿಂದ ಹೆಂಗಸರಿಗೆ ವೈಧವ್ಯ ಬರುತ್ತದೆ ಅದರಿಂದ ದೂರವಿರಬೇಕಾದುದು ವಿಹಿತ. ಮುಸಲ್ಮಾನರಲ್ಲಿ ೫ ದಿವಸ ದೂರ ಕುಳಿತಿರುತ್ತಾರೆ. ಜರ್ಮನಿಯಲ್ಲಿ ಮುಟ್ಟಾದ ಹೆಂಗಸರು ಯಂತ್ರಗಳಲ್ಲಿ ಕೆಲಸ ಮಾಡಿದ್ದಕ್ಕೆ, ಯಂತ್ರಗಳು ಕೆಟ್ಟು ಹೋಯಿತೆಂದು ಒಬ್ಬ ಜರ್ಮನ್ ವಿಜ್ಞಾನಿಯ ವಾದ. ಎಂದು ಶ್ರುತವಾಗಿದೆ.

### ಶೂದ್ರರು ಗಾಯತ್ರಿ ಜಪ ಮಾಡಬಹುದೇ ಎಂದು ಪ್ರಶ್ನೆ ?

**ಅದಕ್ಕೆ ಉತ್ತರ : *ಶಾಸ್ತ್ರದ ಆಧಾರದಿಂದ ಕೂಡದು,*** ಸಂವಿಧಾನದ ಹಕ್ಕಿನ ಮೂಲಕ ಮಾಡಬಾರದು ಎಂದು ಹೇಳುವುದು ವಿರೋಧವಾಗುತ್ತದೆ. ಇದು ಡೋಲಾಯಮಾನವಾದ ಉತ್ತರ. ಇದೂ ಕೂಡ ಮುಟ್ಟಾದ ಹೆಂಗಸರ ಸಮಸ್ಯೆಯಂತೆಯೇ? ಇದೇ ತರಹ ಬೇಕಾದಷ್ಟಿವೆ, ಗ್ರಂಥಭಾರ ಭಯದಿಂದ ಮುಂದುವರಿಸಿಲ್ಲ.

## ಆಚರಣೆಯಿಂದ ಬುದ್ಧಿ ಭೇದ ಕ್ರಮ

## ಲೌಕಿಕಕೆ ಮರುಳಾಗಿ ದಣುಕೊಳಲಿ ಬೇಡ (ದಾಸವಾಣಿ)

ವಿಪರೀತ ಬುದ್ಧಿವಂತರಾದ ಕೆಲವರು ವಿಚಿತ್ರ ಪ್ರಶ್ನೆಗಳನ್ನು ಹಾಕಿ ಜನರನ್ನು ಮರುಳು ಮಾಡಿ ತಮ್ಮ ವಶಮಾಡಿಕೊಳ್ಳುತ್ತಿದ್ದಾರೆ. ಇವರಿಗೆ ಪರಮತ ಖಂಡನ ಪೂರ್ವಕ, ಸ್ವಮತ ಸ್ಥಾಪನ ಶಕ್ತಿ ಇದೆ, ಆದರೆ ಅವರು ಸ್ವಮತವನ್ನೇ ಖಂಡಿಸುತ್ತಾ ಪರಮತ ಸ್ಥಾಪನ ಮಾಡುತ್ತಿದ್ದಾರೆ ಇದು ಜನರಿಗೆ ತಾರ್ಕಿಕ ಬುದ್ಧಿ ಹುಟ್ಟಿಸಿ ಅಡ್ಡದಾರಿ ಹೋಗಲು ಅನುಕೂಲವಾದ ಬುದ್ಧಿ ಭೇದ.

ಕೆಲವರು ಪರಮ ಚೇತನನ ವಿಚಾರ ಬಿಟ್ಟು ಜಡದ ವಿಚಾರವನ್ನು ಜಿಜ್ಞಾಸೆ ಮಾಡುತ್ತಾ ಜಡವಾಗಿದ್ದಾರೆ. ಇದರಿಂದ ಅಲೌಕಿಕವಾದ ವಿಚಾರ ಬಿಟ್ಟು ಲೌಕಿಕ ವಿಚಾರದಲ್ಲೇ ಇರಬೇಕೆಂಬ ಬುದ್ಧಿ ಭೇದ ಪ್ರದರ್ಶನವಾಗುತ್ತಿದೆ.

ಕೆಲವರು ಸಂತತ ಊರ್ಧ್ವಗಮನ ಎಂಬಂತೆ ಬಹಳ ಮೇಲಕ್ಕೆ ಹೋಗಿ ಅಲ್ಲಿಯ ಸ್ನೇಹದಿಂದ ಎಣ್ಣೆ ಜಿಡ್ಡು ಮತ್ತು ದುರ್ವಾಸನೆಯಿಂದ ಕೂಡಿದ ಕಪ್ಪು, ಟಾರು ಮಸಿಯನ್ನು ಅಂಟಿಸಿಕೊಂಡು ಆಪಾದಮೌಳಿ ಪರ್ಯಂತ ವಸ್ತ್ರ ಸಹಿತವಾಗಿ ಕೃಷ್ಣ (ಕಪ್ಪು) ವರ್ಣದಿಂದ ಕೂಡಿ ದೊಪ್ಪನೆ ಕೆಳಗೆ ಬಿದ್ದು ಅಯ್ಯಪ್ಪ ಎಂದು ಮೂಲೆಯಲ್ಲಿ ಕಾಲು ನೋವಿನಿಂದ ಕುಳಿತಿದ್ದಾರೆ. ಇವರ ದುರ್ವಾಸನೆಯಿಂದ ಯಾರು ಇವರ ಹತ್ತಿರ ಹೋಗಲು ಆಗುವುದಿಲ್ಲ. ಇದರಿಂದ ಇಂಥಹ ಸಾಹಸ ಮಾಡಿದರೆ ಇದೇ ಗತಿ. ಎಂದು ಅಭಿಪ್ರಾಯ. ಇವರೇ ಮೇಲಕ್ಕೆ ಹೋಗುವಾಗ ನಾವು ಹೋದರೆ ತಪ್ಪೇನು ಅಂತ ಬುದ್ಧಿ ಭೇದ ಹುಟ್ಟಿಸುತ್ತದೆ.

ಕೆಲವರು ಶಾಶ್ವತ ಸುಖಕ್ಕೆ ದಾರಿಯಾಗಿದ್ದ ಸುರಕ್ಷಿತವಾದ ಜಾಗ ಬಿಟ್ಟು ಯಾವುದೋ ಸಣ್ಣ ವಿಚಾರಕ್ಕೆ ಮರುಳಾಗಿ ಹಿಂದಕ್ಕೆ ಹೋಗಬಾರದ 1 Way Traffic ನಲ್ಲಿ Reverse gear ಹಾಕಿಕೊಂಡು ಹಿಂದಿಂದಕ್ಕೆ ಕಾರಿನಲ್ಲಿ ವೇಗವಾಗಿ ಹೋಗಿ ರಸ್ತೆಯ ಕೊನೆಯಲ್ಲಿದ್ದ ಆಳವಾದ ಭಾರಿ ಹಳ್ಳಕ್ಕೆ ಬಿದ್ದು, ಅಲ್ಲಿದ್ದ ಮುಳ್ಳು ಪೊದರೆಯೊಳಗೆ ಸಿಕ್ಕಿಕೊಂಡು ಮೈಯೆಲ್ಲಾ ಗಾಯಮಾಡಿಕೊಂಡು, ಕೈ ಮುರಿದುಕೊಂಡು, ಹೆಲಿಕಾಪ್ಟರ್‌ನಿಂದ ಎತ್ತಿಸಿಕೊಂಡು ಆಸ್ಪತ್ರೆಯಲ್ಲಿ ಸತತವಾಗಿ ಹಾಸಿಗೆ ಬಂಧನಕ್ಕೊಳಗಾದರು. ಇದರಿಂದ ಸನ್ಮಾರ್ಗವನ್ನು ಬಿಟ್ಟು ಅಡ್ಡದಾರಿಗೆ ಹೋದರೆ ಇದೇ ಗತಿ. ಇದೊಂದು ಬುದ್ಧಿ ಭೇದ.

ಚೆನ್ನಾಗಿ ಶಾಸ್ತ್ರತಿಳಿದವರೊಬ್ಬರು ಒಂದು ಕಡೆ ಉಪನ್ಯಾಸ ಮಾಡುವಾಗ ಶ್ರೀರಾಮದೇವರಿಗೆ - ವಾಲಿ ಯಾರು? ಸುಗ್ರೀವ ಯಾರು? ಎಂದು ಗೊತ್ತಾಗಲಿಲ್ಲ ಎಂದು ಹೇಳಿದರು. ಇದು ಸರ್ವಜ್ಞರಾದ ರಾಮದೇವರಿಗೆ ಅಜ್ಞಾನ ದೋಷ ಹೇಳಿದಂತಾಯಿತು. ಇದರಿಂದ ಮಧ್ವಸಿದ್ಧಾಂತಕ್ಕೆ ಕುಠಾರ ಪ್ರಯೋಗವಾಯಿತು. ಇದರಿಂದ ಅಂಧಃತಮಸ್ಸಿಗೆ ಹೋಗಬೇಕಾಗುತ್ತದೆ. ಅವರು ಯಾತಕ್ಕೆ ಹೇಳಿದರು ಏನು ಉದ್ದೇಶಕ್ಕೆ ಹೇಳಿದರು ಗೊತ್ತಾಗಲಿಲ್ಲ. ಅಂತೂ ಇದು ಅಪಾಯಕಾರಿ. ಇದು ಭೀಕರ ಬುದ್ಧಿ ಭೇದ.

ಇನ್ನೊಬ್ಬರು ಗ್ಯಾಸ್‌ನಲ್ಲಿ ವೈಶ್ವದೇವ ಮಾಡಬಹುದು ಎಂದು ಹೇಳಿದರು. ಗ್ಯಾಸ್ ಮೊದಲೇ ನಿಷಿದ್ಧ. ಅದರಲ್ಲಿ ವೈಶ್ವದೇವ ಮಾಡುವುದು ಹೇಗೆ ಕೂಡುತ್ತದೆ. ಅದರ ಬದಲು ವೈಶ್ವದೇವ ಮಂತ್ರ ಪಾರಾಯಣ ಮಾಡಿ ಎಂದು ಹೇಳಬಹುದಾಗಿತ್ತು, ಆದರೆ ಹಾಗೆ ಹೇಳಲಿಲ್ಲ, ಇದೊಂದು ಅಡ್ಡದಾರಿ. ಇದೊಂದು ಅಡ್ಡದಾರಿಯ ಬುದ್ಧಿ ಭೇದ.

ಈ ಮಧ್ವಶಾಸ್ತ್ರ ಪಾಠವನ್ನು ಒಳಗೆ ಹೇಳಿ, ಹೊರಗೆ ಹೋಗಿ - ಕರೆದಲ್ಲಿಗೆ ಬರುವೆ ಎಂಬ ಸರಳತೆಯ ಪ್ರದರ್ಶನದಿಂದ ನೋಡಬಾರದ ನೋಟ, ಕೂಡಬಾರದ ಕೂಟದೊಳಗೆ ನಲಿದಾಟ ಎಂಬ ದಾಸರ ವಾಣಿಯಂತೆ ಆಚಾರ್ಯ ಮಧ್ವರ ವಿರೋಧಿಗಳ ಗುಂಪಿಗೆ ಹೋಗಿ, ಅವರು ಹೇಳುವ ದೇವರಿಗೆ ಅಭಿಷೇಕ, ಪೂಜೆ ಮಾಡಿ, ದೀಪಹಚ್ಚಿ, ಮಂಗಳಾರತಿ ಮಾಡಿ, ಅವರನ್ನು ಹೊಗಳಿ, ಅವರಿಂದ ಸನ್ಮಾನಿತರಾಗಿ, 'ಯೇನಕೇನ ಪ್ರಕಾರೇಣ ಪ್ರಸಿದ್ಧ ಪುರುಷೋ ಭವ' ಎಂಬಂತೆ, 'ಅಂದರಿಕಿ ಮಂಚಿವಾಡು ಗೋವಿಂದಯ್ಯ' ಆಗಿ ವಾಪಸ್ ಬರುವಾಗ, ರಸ್ತೆ ಸಂಚಾರ ನಿಯಮಕ್ಕೆ ಅತೀತವಾದ ಆಂಬುಲೆನ್ಸ್ ವಾಹನದಂತೆ ಹೋಗಬಾರದ ಜಾಗ ಯಾವುದು, ಹೋಗಬೇಕಾದ ಜಾಗ ಯಾವುದು ಎಂಬ ನಿಯಮವನ್ನು ಉಲ್ಲಂಘಿಸಿ, ಸಾಂಕರ್ಯಭೂಷಿತರಾಗಿ ಎಲ್ಲೆಲ್ಲೋ ಹೋಗಿ ಏನೇನೋ ಮೆತ್ತಿಸಿಕೊಂಡು ಕಾಲು ತೊಳೆಯದೆ ಒಳಗೆ ಬಂದು ಸೇರಿದರು.

ಇದರಿಂದ ಸಂಪ್ರದಾಯಬದ್ಧವಾದ ನಿಯಮಗಳನ್ನು ಉಲ್ಲಂಘಿಸಿ ಸ್ವೇಚ್ಛೆಯಾಗಿ ಎಲ್ಲಿ ಬೇಕಾದರೂ ಹೋಗಬಹುದು ಎಂಬ ಬುದ್ಧಿಭೇದ ಉಂಟಾಗಿ, ಸಾಂಕರ್ಯ ಮಾಡುವ ಬುದ್ಧಿ ಹುಟ್ಟುತ್ತದೆ. ಪರಮತ ಖಂಡನ ಪೂರ್ವಕ ಸ್ವಮತ ಸ್ಥಾಪನೆ ಎಂಬ ಮಧ್ವತತ್ತ್ವಕ್ಕೆ ಕುಠಾರಪ್ರಯೋಗ ಮಾಡಿ ನಾವೆಲ್ಲರೂ ಜಗಳವಾಡಬಾರದು. ನಾವು ಹೊಂದಿಕೊಂಡು ಹೋಗೋಣ ಎಂಬ ಸಾಂಕರ್ಯ ಬುದ್ಧಿಯನ್ನು ಹುಟ್ಟಿಸುತ್ತದೆ. ಸಮಾಜದಲ್ಲಿ ಸೌಹಾರ್ದಕ್ಕೆ ಧಕ್ಕೆ ಬಾರದಂತೆ ನೋಡಿಕೊಳ್ಳುವುದು ಎಲ್ಲರಿಗೂ ಧರ್ಮ, ಆದರೆ ತತ್ತ್ವ ವಿಚಾರದಲ್ಲಿ ಮಾತ್ರ ತಪ್ಪನ್ನು ತಪ್ಪು ಎಂದು ಹೇಳಿ ಸರಿಯಾದನ್ನು ಅಂಗೀಕರಿಸಲೇಬೇಕು. ಹೀಗೆ ಮಾಡದಿದ್ದರೆ ಭಾರಿ ಬುದ್ಧಿ ಮತ್ತು ದ್ರೋಹ.

ನಮ್ಮ ಅಭಿಪ್ರಾಯ ಈ ರೀತಿ ಇದೆ : "ಸ್ವತಂತ್ರಃಕರ್ತಾ ಹರಿರೇವ । ಜೀವೋಽಪಿ ಕರ್ತಾ" ಎಂದು ಇರುವುದರಿಂದ ಜೀವರು ಸ್ವತಂತ್ರರಲ್ಲ, ದೇವಪ್ರೇರಣೆಗೆ ಒಳಗಾದವರೇ. ಸಾತ್ವಿಕ, ರಾಜಸ, ತಾಮಸ, ಬೇಧಗಳಿಂದ ಅವರವರ ಸ್ವಭಾವದಂತೆ ಕಾರ್ಯ ನಡೆಯುತ್ತದೆ. ಇದರಲ್ಲಿ ದೇವರ ದೋಷವಿಲ್ಲ, ಅಸಾತ್ವಿಕರ ಕಾರ್ಯಗಳು, ಸಾತ್ವಿಕರಿಗೆ ಯಾವಾಗಲೂ ವಿರೋಧವಾದವುಗಳೇ ಮತ್ತು ಬುದ್ಧಿ ಭೇದ ಮಾಡುವಂತಹುದೇ ಇರುತ್ತದೆ. ದೇವರ ಪ್ರೇರಣೆಯಿಂದ ಸರ್ವರೂ ಒಳಗಾದವರೇ ಎಂದು ಹೇಳಿಕೊಟ್ಟ ಶ್ರೀಮದಾಚಾರ್ಯರೇ ಸಾತ್ವಿಕರ ಹಿತದೃಷ್ಟಿಯಿಂದ ಅಸಾತ್ವಿಕರ ಮತಗಳನ್ನು ಮತ್ತು ಕಾರ್ಯಗಳನ್ನು ಖಂಡಿಸಿ ಸಾತ್ವಿಕರ ಸಂದೇಹ ಪರಿಹಾರ ಮಾಡಿ, ಸರಿಯಾದ ದಾರಿ ತೋರಿಸಿ ಉದ್ಧಾರ ಮಾಡಿರುತ್ತಾರೆ.

ದಾರಿ ಕೆಡಿಸುವುದು ಅಸುರರ ಸ್ವಭಾವ, ಅವರ ಸಹವಾಸದಿಂದ ಯೋಗ್ಯರಿಗೂ ಸಹ ಬುದ್ಧಿ ಕೆಡುತ್ತದೆ, ಆದ್ದರಿಂದ ಸ್ವಯಂ ಅಸುರರು ಮತ್ತು ಅಸುರಾವೇಶಯುಕ್ತ ಯೋಗ್ಯರು ಎಂದು ಎರಡು ವಿಧ. ಇಬ್ಬರಿಂದಲೂ ಸಹ ಅಡ್ಡದಾರಿ ಪ್ರದರ್ಶನಗಳು ನಡೆಯುತ್ತವೆ. ಅಸುರರ ಕಾರ್ಯಗಳನ್ನು ಖಂಡಿಸದಿದ್ದರೆ ವಿಷ್ಣು ದ್ರೋಹ ಬರುತ್ತದೆ. ಅಸುರಾವೇಶ ಯುಕ್ತ ಯೋಗ್ಯರನ್ನು ಖಂಡಿಸಿದರೆ ವೈಷ್ಣವ ದ್ರೋಹ ಬರುತ್ತದೆ. ಇಬ್ಬರ ಸ್ವರೂಪಗಳು ನಮಗೆ ಗೊತ್ತಿಲ್ಲವಾದ್ದರಿಂದ ಅವರಲ್ಲಿ ರಾಗ-ದ್ವೇಷಗಳನ್ನು ಬಿಟ್ಟು, ಅವರು ಮಾಡುವ ಕಾರ್ಯಗಳನ್ನು ಮಾತ್ರ ಖಂಡಿಸಬೇಕು. ಹೀಗೆ ಮಾಡಿದರೆ ಸ್ವಾಭಾವಿಕವಾಗಿ ಸಾತ್ವಿಕರಿಗೆ ಬುದ್ಧಿ ಭೇದ ಆಗುವುದಿಲ್ಲ. ಆದ್ದರಿಂದ ನಾವು ಇಲ್ಲಿ ಕಾರ್ಯವನ್ನು ಮಾತ್ರ ತಪ್ಪೆಂದು ತೋರಿಸುವುದೇ ಸಾತ್ವಿಕರ ದೃಷ್ಟಿಯಿಂದ ಉದ್ದೇಶವಾಗಿದೆಯೇ ಹೊರತು, ಆ ವ್ಯಕ್ತಿಗಳ ಬಗ್ಗೆ ನಾವು ಯಾವ ವಿಕಾರವನ್ನು ಮಾಡಿಕೊಳ್ಳುವುದಿಲ್ಲ.

# ವ್ಯಂಗ್ಯ ಚಿತ್ರಗಳ ಮೂಲಕ ಬುದ್ಧಿ ಭೇದ

ಕೋಟಿ ಮನ್ಮಥ ಲಾವಣ್ಯವನ್ನು ಧಿಕ್ಕರಿಸುವ ಜಗನ್ಮೋಹನ ಸೌಂದರ್ಯ ಲೀಲಾಮಾನುಷ ಮೂರ್ತಿಯಾದ, ರುದ್ರದೇವರಂಥಹ ಪುರುಷರನ್ನೇ ಮೋಹಿಸುವ ಜಗದೇಕ ಸುಂದರನಾದ ಪರಮಾತ್ಮನ ಚಿತ್ರವನ್ನು ಚಿತ್ರಿಸಲು ಯಾರಿಗೂ ಸಾಧ್ಯವಿಲ್ಲ. ಅದರಂತೆ ಉತ್ತಮ ಲಕ್ಷಣಗಳಿಂದ ಕೂಡಿದ ವಾಯುದೇವರೇ ಮೊದಲಾದ ದೇವತೆಗಳ ಚಿತ್ರಗಳನ್ನು ಚಿತ್ರಿಸಲೂ ಸಾಧ್ಯವಿಲ್ಲ. ಆದರೆ ಲಕ್ಷಣ ಶಾಸ್ತ್ರದಲ್ಲಿ ಮತ್ತು ಶಿಲ್ಪ ಶಾಸ್ತ್ರದಲ್ಲಿ ತಿಳಿಸಿರುವಂತೆ ಅವರವರ ವಿದ್ಯೆಯ ಯೋಗ್ಯತೆಯಂತೆ ಸುಂದರವಾಗಿ ಬರೆಯುತ್ತಾರೆ. ರಂಗೋಲಿ ದಾಸರು ಎಂದು ಪ್ರಸಿದ್ಧರಾದ ರಂಗ ಒಲಿದ ದಾಸರಾದ ಶ್ರೀಜಗನ್ನಾಥದಾಸರಾಯರು ಮತ್ತು ಹೆಳವನಕಟ್ಟೆ ಗಿರಿಯಮ್ಮ ಎಂಬ ಇಬ್ಬರು ಭಕ್ತರು ಕೂಡ ರಂಗೋಲಿಯಲ್ಲಿ ದೇವರ ಚಿತ್ರಗಳನ್ನು ಸುಂದರವಾಗಿ ರಚಿಸುತ್ತಿದ್ದರು. ಅದರಲ್ಲಿ ದೇವತಾ ಸನ್ನಿಧಾನ ಬಂದು ತಮ್ಮ ಮಹಿಮೆಯನ್ನು ತೋರಿಸುತ್ತಿತ್ತು. ರಂಗೋಲಿ ಹಾಕುವಾಗ ಇವರಿಬ್ಬರನ್ನು ಸ್ಮರಿಸಿಕೊಳ್ಳುವುದು ಕರ್ತವ್ಯ. ದೇವರ ಮತ್ತು ದೇವತೆಗಳ ಚಿತ್ರಗಳನ್ನು ವ್ಯಂಗ್ಯವಾಗಿ ಬರೆದರೆ ದೇವಹೇಳನಾಗಿ, ಅವರಿಗೆ ನಾವು ಅಪಚಾರ ಮಾಡಿದಂತಾಗುತ್ತದೆ. ಅಂದರೆ ಇಲ್ಲದ್ದನ್ನು ತಿಳಿದುಕೊಂಡು ಚಿಂತನೆ ಮಾಡಿದಂತಾಯಿತು. ಇದರಿಂದ ಯಾವುದನ್ನು ಹೇಗೆ ತಿಳಿದುಕೊಳ್ಳಬೇಕೋ ಹಾಗೆ ತಿಳಿದುಕೊಳ್ಳದೆ ವಿಪರೀತವಾಗಿ ಅಥವಾ ತಪ್ಪಾಗಿ ತಿಳಿದುಕೊಂಡಂತಾಯಿತು. ಇದಕ್ಕೆ ಮಿಥ್ಯಾ ಜ್ಞಾನ ಎಂದು ಹೆಸರು ಮಿಥ್ಯಾ ಜ್ಞಾನಕ್ಕೆ ಕಾರಣ ಅವಿದ್ಯಾ ಅಥವಾ ಅಜ್ಞಾನ. **"ಅಂಧಃತಮವ ಪ್ರವೇಶಿಪರು ಅವಿದ್ಯೋಪಾಸಕರು ಅದನು ಖಂಡಿಸದಿರ್ಪವರ್ ಅದಕು ಮಿಗಿಲೆನಿಪ ಘೋರ ನರಕವ ನೇಯ್ದುವರ್"** ಎಂದು ಅಪೌರುಷೇಯವಾದ ಈಶೋವಾಸ್ಯೋಪನಿಷತ್ತಿನಲ್ಲಿ ವರ್ಣಿತವಾಗಿದೆ. ಅಂದರೆ ಸುಂದರವಾಗಿರುವ ದೇವತೆಗಳ ರೂಪವನ್ನು ಈ ರೀತಿ ವಕ್ರ ವಕ್ರವಾಗಿ ಚಿಂತನೆ ಮಾಡಿದರೆ ಅದು ಮಿಥ್ಯಾಜ್ಞಾನವಾಗುತ್ತದೆ. ಅದರ ಫಲ ಅಂಧಃತಮಸ್ಸಿಗೆ ಹೋಗಬೇಕಾಗುತ್ತದೆ. ಆದ್ದರಿಂದ ಈ ಚಿತ್ರವನ್ನು ಅಂಗೀಕರಿಸುವವರು (ಬರೆಸಿದವರು, ಬರೆದವರು, ನೋಡಿದವರು ಮತ್ತು ಅದನ್ನು ಸರಿ ಎಂದು ತಿಳಿದುಕೊಳ್ಳುವವರು) ಇಷ್ಟು ಜನರು ಅಂಧಃತಮಸ್ಸಿಗೆ ಹೋಗಬೇಕಾಗುತ್ತದೆ. ಅದಕ್ಕೆ ಮುಂಚೆ ಮುಂದಿನ ಜನ್ಮಗಳಲ್ಲಿ ಅವರು ಇದೇ ತರಹ ಅಷ್ಟಾವಕ್ರವಾದ ಶರೀರಗಳನ್ನು ಹೊಂದಬೇಕಾಗುತ್ತದೆ. ಆದ್ದರಿಂದ ಇದು ತಪ್ಪು ಎಂದು ಖಂಡಿಸದಿದ್ದರೆ ಇನ್ನೂ ಇದಕ್ಕಿಂತ ಮಿಗಿಲಾದ ಘೋರ ನರಕಕ್ಕೆ ಹೋಗಬೇಕಾಗುತ್ತದೆ. ಆದುದರಿಂದ ಈ ಖಂಡನೆ ಅನಿವಾರ್ಯ.

## ಚಿತ್ರಗಳ ಕಾಮ್-ಎಂಟ್-ಅರಿಗಳು

**ವ್ಯಂಗ್ಯ ಚಿತ್ರಗಳು ಮತ್ತು ಅದರ ಪಕ್ಕದಲ್ಲಿ ಸರಿಯಾದ ಚಿತ್ರಗಳನ್ನು ಕೊಟ್ಟಿರುವುದರಿಂದ ನಿಮ್ಮ ಮನಸ್ಸಿಗೇ ತಪ್ಪು ಯಾವುದು ಮತ್ತು ಸರಿ ಯಾವುದು ಎಂದು ಗೊತ್ತಾಗುತ್ತದೆ, ಅಲ್ಲವೇ?**

**1ನೇ ಚಿತ್ರ** ನರಸಿಂಹದೇವರಿಗೆ - ತಲೆಬೋಳಾಗಿರುವ ಹಿರಣ್ಯಕಷುಪುವನ್ನು ಸಂಹಾರ ಮಾಡಲು ಹೊಸಲು ಸಿಕ್ಕದೇ ಒಂಟಿಕಾಲಲ್ಲಿ ನಿಲ್ಲಬೇಕಾಯಿತು. ಇದು ಪುರಾಣಕ್ಕೆ ವಿರುದ್ಧವಾದಂತಹ ಚಿತ್ರ. ಅದರ ಪರಿಹಾರ 2ನೇ ಚಿತ್ರದಲ್ಲಿ ಕೊಟ್ಟಿರುತ್ತದೆ.

**3ನೇ ಚಿತ್ರ** ಶ್ರೀವೇದವ್ಯಾಸದೇವರು ಮತ್ತು ಶ್ರೀಮನ್ ಮಧ್ವಾಚಾರ್ಯರು ಕುಳಿತಿರುವ ಭಂಗಿ ಮತ್ತು ಅವರ ಅಂಗಗಳು ಎಲ್ಲಾ ಕೃಷವಾಗಿ ಮನಸ್ಸಿಗೆ ಕ್ಲೇಷ ತರುತ್ತದೆ. ಇದಕ್ಕೆ ಪರಿಹಾರ 4ನೇ ಚಿತ್ರದಲ್ಲಿ ಕೊಟ್ಟಿರುತ್ತದೆ.

**5ನೇ ಚಿತ್ರ** ಶ್ರೀರಾಮದೇವರು ದಯಾರ್ದ್ರ ದೃಷ್ಟಿಯಿಂದ ಹನುಮಂತದೇವರನ್ನು ನೋಡಬೇಕಾದುದರ ಬದಲು ಆಕಾಶವನ್ನು ನೋಡುತ್ತಿದ್ದಾರೆ. ಮತ್ತು ಹನುಮಂತದೇವರ ಕಾಲು ಶ್ರೀರಾಮದೇವರ ಕಾಲುಗಳು ಕ್ಷಯ ರೋಗ ಬಂದು, ಕೋಳಿಯ ಕಾಲಿನಂತೆ ಇದೆ. ಇದರ ಪರಿಹಾರ 6ನೇ ಚಿತ್ರದಲ್ಲಿ ಕೊಟ್ಟಿರುತ್ತದೆ.

**7ನೇ ಚಿತ್ರ** 32 ಸುಂದರ ಲಕ್ಷಣಗಳಿಂದ ಕೂಡಿದ ವೃಕೋದರ ಎಂದು ಪ್ರಸಿದ್ಧರಾದ ತೆಳುವಾದ ಹೊಟ್ಟೆಯುಳ್ಳ ಶ್ರೀ ಭೀಮಸೇನದೇವರಿಗೆ ತಲೆ ಬೋಳಿಸಿ, ಹೊಟ್ಟೆ ದಪ್ಪ ಮಾಡಿ ಕಾಲಿಲ್ಲದಂತೆ ಮಾಡಿ, ಜರಾಸಂಧನನ್ನು ಸಂಹಾರ ಮಾಡಿಸುತ್ತಿದ್ದಾರೆ. ಶ್ರೀಕೃಷ್ಣ ಪರಮಾತ್ಮನನ್ನು ನಪುಂಸಕನನ್ನಾಗಿ ಮಾಡಿದ್ದಾರೆ. ಇದಕ್ಕೆ ಪರಿಹಾರ 8ನೇ ಚಿತ್ರದಲ್ಲಿ ಕೊಟ್ಟಿರುತ್ತದೆ.

**9ನೇ ಚಿತ್ರ** ಶ್ರೀಸುಮಧ್ವವಿಜಯದಲ್ಲಿ ವರ್ಣಿಸಿರುವಂತೆ ಶ್ರೀಮನ್‌ಮಧ್ವಾಚಾರ್ಯರಿಗೆ ನಾಮ ಮುದ್ರಾಧಾರಣಗಳು ತೋರಿಸಿರಬೇಕಾದ್ದಲ್ಲಿ, ನಾಮ ಮಾತ್ರ ತೋರಿಸಿ ಮುದ್ರೆಯನ್ನು ತೋರಿಸಿಲ್ಲ. ಇದರಿಂದ ಶ್ರೀಸುಮಧ್ವವಿಜಯಕ್ಕೆ ವಿರುದ್ಧವಾಗಿದೆ. ಈ ಚಿತ್ರ ಸಾತ್ವಿಕರಿಂದ ಗ್ರಾಹ್ಯವಲ್ಲ. ಇದಕ್ಕೆ ಪರಿಹಾರ 10 ನೇ ಚಿತ್ರದಲ್ಲಿ ಕೊಟ್ಟಿರುತ್ತದೆ. ಕಾರಣ ಇನ್ನೂ ಸ್ವಲ್ಪ ವರುಷಗಳು ಕಳೆದ ನಂತರ 12 ನೇ ಚಿತ್ರ ಮಾಯವಾಗಿ 9 ನೇ ಚಿತ್ರವೇ ಪ್ರಚಾರವಾಗುತ್ತದೆ. ಆಗ ಇರತಕ್ಕ ಮುಂದಿನ ಪೀಳಿಗೆಗೆ ಮುದ್ರೆ ಹಚ್ಚುವುದಕ್ಕೆ ಪ್ರಮಾಣವಿಲ್ಲ ಎಂದು ಹೇಳುತ್ತಾರೆ. ಇದು ಸಂಪ್ರದಾಯ ಪರಂಪರೆಯ ನಾಶಕವಾದ ಅಪಾಯಕಾರಿ ಅಲ್ಲವೇ?

**11ನೇ ಚಿತ್ರ** ಶ್ರೀಮನ್‌ಮಧ್ವಾಚಾರ್ಯರ ಆಕೃತಿಯನ್ನು ನೋಡಿದ ಪ್ರತಿಮಾ ಮಾಡತಕ್ಕಂಥ ಕೆಲಸಗಾರರು ಆಚಾರ್ಯರ ಆಕಾರವು ಪ್ರತಿಮಾ ಮಾಡುವುದಕ್ಕೆ ಇದು ಪ್ರಮಾಣವಾಗಿದೆ ಎಂಬ ಅಭಿಪ್ರಾಯಪಟ್ಟರೆಂದು ಸುಮಧ್ವವಿಜಯದಲ್ಲಿ ವರ್ಣಿಸಿದ್ದಾರೆ. ಅಂಥ ಮಧ್ವಾಚಾರ್ಯರಿಗೆ ಕೈ, ಕಾಲುಗಳೇ ಸರಿಇಲ್ಲದಂತೆ ಮಾಡಿ ಅವರ ಮುಂದೆ ಇರುವ ಗ್ರಂಥಗಳನ್ನೆಲ್ಲ ನೋಟಿನ ಕಂತೆಯಂತೆ ತೋರಿಸಿ ಭಕ್ತಿ ಬರದಂತೆ ಮಾಡಿರುತ್ತಾರೆ. ಇದಕ್ಕೆ ಪರಿಹಾರ 12ನೇ ಚಿತ್ರದಲ್ಲಿ ಕೊಟ್ಟಿರುತ್ತದೆ.

**12ನೇ ಚಿತ್ರ** 12ನೇ ಚಿತ್ರವು ಶ್ರೀಸತ್ಯಧ್ಯಾನತೀರ್ಥ ಸ್ವಾಮಿಗಳವರಿಗೆ ಸ್ವಪ್ನದಲ್ಲಿ ದರುಶನವಾಗಿದೆಯೆಂದು ಆಪ್ತವಾಕ್ಯಗಳಿಂದ ಶೃತವಾಗಿದೆ.

**13ನೇ ಚಿತ್ರ** ಮನ್ಮಥನ ಸೌಂದರ್ಯಕ್ಕಿಂತಲೂ ಸುಂದರವಾದ 28 ಸುಂದರ ಲಕ್ಷಣಗಳಿಂದ ಕೂಡಿದ ಮಹಾರುದ್ರ ದೇವರಿಗೆ ಮತ್ತು ಪಾರ್ವತಿದೇವಿಯವರಿಗೂ ಕಾಲು ಇಲ್ಲದಂತೆ ಮಾಡಿ, ಗಣಪತಿಗೆ ಬಹಳ ಸಣ್ಣ ಶರೀರವನ್ನು ಕೊಟ್ಟು, ನೋಡುವುದಕ್ಕೆ ಭಕ್ತಿ ಬರುವುದರ ಬದಲು ಅಸಹ್ಯವಾಗುವಂತೆ ಚಿತ್ರಿಸಿದ್ದಾರೆ. ಇದಕ್ಕೆ ಪರಿಹಾರ ಪಕ್ಕದಲ್ಲಿರುವ 14, 15 ಮತ್ತು 16ನೇ ಚಿತ್ರಗಳನ್ನು ನೋಡಿ. ವಿಚಾರ ಮಾಡಿ.

ಇದರಂತೆ ಪರಮಹಂಸ ಸನ್ಯಾಸಿಗಳಾದ ಶ್ರೀರಾಘವೇಂದ್ರಸ್ವಾಮಿಗಳವರಿಗೆ ಗೃಹಸ್ಥರಂತೆ ಕಚ್ಚೆ ಉಡಿಸಿದ ಚಿತ್ರಗಳು ಬಂದಿವೆ. ಮತ್ತು ಶ್ರೀರಾಘವೇಂದ್ರಸ್ವಾಮಿಗಳವರಿಗೆ ದ್ವಾದಶ ನಾಮಗಳನ್ನು ತೋರಿಸಿದ್ದಾರೆಯೇ ಹೊರತು ಮುದ್ರೆಯನ್ನೇ ತೋರಿಸಿಲ್ಲ ಈ ಚಿತ್ರಗಳು ಎಲ್ಲಾ ಕಡೆಗೆ ವ್ಯಾಪಿಸಿದೆ. ಇದು ಅಜ್ಞಾನದ ಪರಮಾವಧಿ.

## ಹುಟ್ಟಿದ ಹಬ್ಬ (BIRTHDAY)

ಭಗವಂತ ಕೊಟ್ಟ ಆಯಸ್ಸು ಇಷ್ಟು ದಿವಸ ಸಾರ್ಥಕವಾಯಿತು. ಇನ್ನೂ ಮುಂದೆ ಸಾರ್ಥಕವಾಗಲಿ ಎಂದು ತೋರಿಸಿಕೊಳ್ಳುವ ಹುಟ್ಟು ಹಬ್ಬದ ಸಂಕೇತ ಆಚರಣೆ. - ಆದರೆ ಇದು ಈಗ ಕಲಿಪುರುಷನ ರಾಜ್ಯದಲ್ಲಿ ಹುಟ್ಟಿದ ಹಬ್ಬ ಅಮಂಗಳ ಸೂಚಕ ಪ್ರದರ್ಶನವಾಗಿದೆ. ಕ್ರಿಶ್ಚಿಯನ್ನರ ಆಚರಣೆ ಅನುಕರಣೆಯಾಗಿದೆ. ಮಗುವಿಗೆ ಅಲಂಕಾರ ಮಾಡಿ ಹಣೆಗೆ ಇಟ್ಟ ಮಂಗಳಸೂಚಕವಾದ ತಿಲಕವನ್ನು ಅಳಿಸಿ - ಸತ್ತವರ ಮನೆಯಲ್ಲಿ ಹತ್ತು ದಿವಸ ಇಟ್ಟಿದ್ದ ದೀಪವನ್ನು ಕೊನೆಯ ದಿವಸ ಬಾಯಿಂದ 'ಉಫ್' ಎಂದು ಆರಿಸುವ ಅನುಕರಣೆಯಾಗಿದೆ. ಎಂದರೆ ಆ ಮಗುವಿನ ಜೀವನದಲ್ಲಿ ಬೆಳಗುವ ಬಾಳನ್ನು ತಪ್ಪಿಸಿ ಕತ್ತಲನ್ನು ಮಾಡಿದಂತಾಯಿತು. - ಕೇಕ್ ಕಟ್ ಮಾಡಿ ಅಂದರೆ ಮಗುವಿನ ಕೇಕೆ ಹಾಕುವ ಭವಿಷ್ಯವನ್ನು ಕತ್ತರಿಸಿ ಹಾಕಿಬಿಡುವುದು ಎಂದು ಅರ್ಥವಾಯಿತು.

ಸಿಕ್ಕಾಪಟ್ಟೆ ಜನರು ಸೇರಿ ತಾವು ಮಾಡುತ್ತಿರುವ ಅಕಾರ್ಯದ ಜ್ಞಾನವಿಲ್ಲದೆ ಆನಂದವಾಗಿ ಚಪ್ಪಾಳೆ ತಟ್ಟಿ ತಿನ್ನಬಾರದ್ದನ್ನು ತಿಂದು ಹೋಗಿಬಿಡುವುದು. ಯೋಚನೆ ಮಾಡಿ ಇದು ಸರಿಯೇ? ಅಥವಾ ತಪ್ಪೇ? ಇಂಗ್ಲೀಷ್ ಕಟ್ 'Cut' ಎಂದರೆ ತುಂಡುತುಂಡು ಮಾಡುವುದು ಎಂದರ್ಥ. ಕನ್ನಡದಲ್ಲಿ ಕಟ್ಟು ಎಂದರೆ ತುಂಡು ಮಾಡಿದುದನ್ನು ಸೇರಿಸುವುದು ಎಂದರ್ಥ. ಯೋಚಿಸಿ ಯಾವುದು ಸರಿಯಾಗಿದೆ. ದೀಪ ಆರಿಸುವುದು ಅಮಂಗಳ, ದೀಪ ಹಚ್ಚುವುದು ಮಂಗಳ. ಮೇಲ್ಕಂಡ ಆಚರಣೆ ಅಮಂಗಳವಾದುದು ಮಾಡಬಾರದ ಕೆಲಸ. ಆದ್ದರಿಂದ ಮಗುವಿಗೆ ಅಲಂಕಾರ ಮಾಡಿ ಹಣೆಗೆ ತಿಲಕವನ್ನು ಇಟ್ಟು ಹೊಸ ಬಟ್ಟೆಯನ್ನು ಹಾಕಿ ದೇವರಿಗೆ, ದೊಡ್ಡವರಿಗೆ ನಮಸ್ಕಾರ ಮಾಡಿಸಿ ಹಬ್ಬದ ಅಡಿಗೆಯನ್ನು ದೇವರಿಗೆ ನೈವೇದ್ಯ ಮಾಡಿ ಸಂತೋಷವಾಗಿ ನೆಂಟರೆಲ್ಲರೂ ಊಟ ಮಾಡಿ ಸಾಯಂ ಕಾಲದಲ್ಲಿ ದೇವಸ್ಥಾನಕ್ಕೆ ಹೋಗಿ ದೇವರಿಗೆ ಹಣ್ಣು ಕಾಯಿ ಸಮರ್ಪಿಸಿ ಮಂಗಳಾರುತಿ ಮಾಡಿಸಿಕೊಂಡು ಬಂದು, ಭಗವಂತನಿಗೆ ನಮಸ್ಕಾರ ಮಾಡಿ ಎಲ್ಲರೂ ಸಂತೋಷವಾಗಿರುವುದು. ಇದೇ ಸನಾತನ ಸಂಪ್ರದಾಯ. ಆದ್ದರಿಂದ ದಯಮಾಡಿ ಕ್ರಿಶ್ಚಿಯನ್ನರ ಸಂಪ್ರದಾಯವನ್ನು ಬಿಟ್ಟು ಪರಂಪರೆಯಿಂದ ಬಂದಿರುವ ಸನಾತನ ಸಂಪ್ರದಾಯವನ್ನು ಅಳವಡಿಸಿಕೊಳ್ಳುವುದು ಕ್ಷೇಮ.

# ಅರಿಷಡ್ವರ್ಗಗಳು

ಆರು ಜನ ಶತ್ರುಗಳು

## ಒಳಗಿನ ಅರಿಷಡ್ವರ್ಗಗಳು

ಕಾಮ - ಕೆಟ್ಟ ಆಸೆಗಳು ಮತ್ತು ಕೆಟ್ಟ ಅಭಿಪ್ರಾಯಗಳು ಇದೇ ಕಾಮ.
ಕ್ರೋಧ - ಅದು ಸಿಗಲಿಲ್ಲವೆಂಬ ಸಿಟ್ಟು
ಲೋಭ - ಅದು ಸಿಕ್ಕಿರುವಾಗ ಇನ್ನೊಬ್ಬರಿಗೆ ಕೊಡಲು ಇಷ್ಟವಿಲ್ಲದಿರುವುದು
ಮೋಹ - ಅದರ ಬಗ್ಗೆ ಯಾವಾಗಲೂ ಚಿಂತನೆ ಮಾಡುವುದು
ಮದ - ಅದು ನನಗೇ ಇದೆಯಲ್ಲಾ ಎಂದು ಅಹಂಕಾರಪಡುವುದು.
ಮಾತ್ಸರ್ಯ - ಅಸೂಯೆ ಪಡುವುದು ಅಂತಹದೇ ಇನ್ಯಾರಲ್ಲಾದರೂ ಇದ್ದರೆ ಸಂಕಟಪಡುವುದು.

## ಹೊರಗಿನ ಅರಿಷಡ್ವರ್ಗಗಳು

**ನ್ಯೂಸ್ ಪೇಪರ್** - ಇದರಿಂದ ಲೋಕವಾರ್ತೆಯ ಅಧ್ಯಯನ. ಮನಸ್ಸಿಗೆ ವಿಕಾರವಾಗತಕ್ಕಂಥ ವಿಚಾರಗಳ ಧಾರೆ, ಮನಸ್ಸಿಗೆ ಅಶಾಂತತೆ. ವೇದಾಧ್ಯಯನ ಮಾಡಿ ಮೋಕ್ಷಕ್ಕೆ ಹೋಗುವ ದಾರಿ ತಪ್ಪಿಸಿ, ಅದೇ ಕಾಲದಲ್ಲಿ ಲೋಕಾಧ್ಯಯನ ಮಾಡಿ ನಿತ್ಯ ಸಂಸಾರದ ಬಂಧನಕ್ಕೆ ಒಳಗಾಗುವ ರಣರಂಗ. (ಲೋಕವಾರ್ತೆಯು ನಿನ್ನ ಕಿವಿಗೆ ಕೇಳಿಸಬೇಡ -ಲೋಕೈಕನಾಥನ ವಾರ್ತೆ ಕೇಳದಿರಬೇಡ - ದಾಸವಾಣಿ).

**ಕೆಟ್ಟ ಕೆಟ್ಟ ಕಾದಂಬರಿಗಳು** - ಕೆಟ್ಟ ವಿಚಾರಗಳನ್ನು ತಿಳಿದುಕೊಂಡು ನಮ್ಮ ಜೀವನದಲ್ಲಿ ನೆಮ್ಮದಿ ಇಲ್ಲದಂತೆ ಹಾಳಾಗುವ ದಾರಿ. ಓದಬಾರದ್ದನ್ನು ಓದಿ, ತಿಳಿಯಬಾರದದ್ದನ್ನು ತಿಳಿದುಕೊಂಡು ಹಳ್ಳಕ್ಕೆ ಬಿದ್ದು ಹಾಳಾಗುವ ದಾರಿ ತೋರಿಸುವ ದುರ್ವಿದ್ಯೆ (ವಿಷಯ ಜೇನೆಂದು ಮೆದ್ದರೆ ವಿಷವಹದಿಹದೆ -ದಾಸವಾಣಿ)

**ಹೋಟೆಲ್** - ತಿನ್ನಬಾರದ್ದನ್ನು ತಿನ್ನಬಾರದ ಸ್ಥಳದಲ್ಲಿ ತಿನ್ನುವಂತೆ ಶಿಕ್ಷಣ ಕೊಡುವ ತಿಪ್ಪೆಗುಂಡಿಯ ಮೇಲಿನ ಅಡಿಗೆ ಭೋಜನ ಶಾಲೆ. (ಸೂಕರ (ಹಂದಿ) ಭೋಜನ -ದಾಸವಾಣಿ)

**ಸಿನಿಮಾಹಾಡುಗಳು** - ಕೇಳಬಾರದ, ಹಾಡಬಾರದ ವಿಚಾರಗಳನ್ನೊಳಗೊಂಡು ಮನಸ್ಸಿನ ವಿಕಾರಕ್ಕೆ ಉತ್ತೇಜನ ಕೊಡುವ ಅಶ್ಲೀಲ ಸಾಹಿತ್ಯ. (ಕಮಲನಾಭನ ಪಾಡಿಪೊಗಳದ ಸಂಗೀತ ಗಾರ್ಧಪರೋಧನ - ಶ್ರೀವ್ಯಾಸರಾಜರು)

**ಕ್ರಿಕೆಟ್ ಆಟ** - ದೇವರನ್ನು ಮರೆಸಿ, ವ್ಯರ್ಥವಾಗಿ ಕಳೆದು ಮುಂದಿನ ಜನ್ಮದಲ್ಲಿ ವೆಸ್ಟ್ ಇಂಡೀಸ್‌ನಲ್ಲಿ ಹುಟ್ಟಲು ಕಾರಣವಾದ ಕೆಟ್ಟ ತಪಸ್ಸು. (ನರಕಕ್ಕೆ ಎಳೆಸುವ ಹಾದಿ - ದಾಸವಾಣಿ)

**ಟಿ.ವಿ.ದರ್ಶನ** - ಟಿ.ವಿ.ದರ್ಶನವೆಂದರೆ ತರಲೆ ವಾದದ ದರ್ಶನ, ವಯಸ್ಸಿನ ನಿರ್ಬಂಧವಿಲ್ಲದೇ ಆಬಾಲ ವೃದ್ಧರು, ಕೇಚಿತ್ ಪಂಡಿತರು, ಗುರುಸ್ಥಾನೀಯರು ಇತ್ಯಾದಿಗಳು, ನೋಡಬಾರದ ದೃಶ್ಯವನ್ನು ನೋಡಿ, ಕೇಳಬಾರದನ್ನು ಕೇಳಿ, ಮಾಡಬಾರದ್ದನ್ನು ಮಾಡಿ, ಹೋಗಬಾರದ ಜಾಗಕ್ಕೆ ಹೋಗಿ ಆಗಬಾರದ್ದನ್ನು ಆಗ ಮಾಡಿಸಿಕೊಳ್ಳುವ ಸಾಕ್ಷಾತ್ ಕಲಿಪುರುಷನ ಅಪರೋಕ್ಷ ಜ್ಞಾನ. (ನರಕಾಧ್ಯನರ್ಥಗಳ ಪ್ರಾಪ್ತಿ).

## ಕಲಿಪುರುಷನ ಸನ್ನಿಧಾನವಾದ ಅಧಿಷ್ಠಾನಗಳು

ತಲೆ - ಭಗವದ್ ವಿರೋಧವಾದ ವಿಚಾರಗಳು
ಕಿವಿ - ಟೆಲಿಫೋನ್
ಕಣ್ಣು - ಎಲಕ್ಟ್ರಿಕ್ ಲೈಟುಗಳು
ಮೂಗು - ಈರುಳ್ಳಿ ದೂಷ್ಯವಾದ ವಸ್ತುಗಳ ವಾಸನೆ.
ಬಾಯಿ - ಮೈಕ್
ನಾಲಿಗೆ - ತಿನ್ನಬಾರದ ಪದಾರ್ಥಗಳು
ಹೃದಯ - ಮಧ್ಯಪಾನದ ಜಾಗ
ಹೊಟ್ಟೆ - ಹೋಟೆಲ್
ಕೈಗಳು - ಯಂತ್ರದಲ್ಲಿರುವ ಉದ್ದನೆಯ ಚಲಿಸವ ಭಾಗಗಳು
ಕಾಲುಗಳು - ವಾಹನದ ಚಕ್ರಗಳು
ಗುದ - ನಾಯಂಡಹಳ್ಳಿ ಹತ್ತಿರ ಹೋಗುವ ಬೆಂಗಳೂರಿನ ಮಹಾನಗರ ಗ್ರಾಮಸಾರದ ನದಿ.
ಪ್ರತಾಪ - ದೇಶದೇಶಾಂತದವರ ಸಂಪರ್ಕದಿಂದ ಆಗುವ ನಾನಾ ಅವ್ಯವಸ್ಥೆಯ ಪರಿಸ್ಥಿತಿ.
ಫಲ - ಮಹಾದುಃಖ

ಒಳಗಿನ ಅರಿಷಡ್ವರ್ಗಗಳನ್ನು ಅರಿಷಡ್ ಮಿತ್ರರನ್ನಾಗಿ ಮಾಡಿಕೊಳ್ಳಬಹುದು. ಆದರೆ ಹೊರಗಿನ ಅರಿಷಡ್ವರ್ಗಗಳನ್ನು ಮಿತ್ರರನ್ನಾಗಿ ಮಾಡಲು ಸಾಧ್ಯವಿಲ್ಲ. ಹೇಗೆಂದರೆ -

**ಕಾಮ** - ಒಳ್ಳೇ ದೇವತಾ ಸಂಬಂಧವಾದ ಆಸೆಗಳು

**ಕ್ರೋಧ** - ಭಗವದ್ ದ್ವೇಷಿಗಳ ಬಗ್ಗೆ ಅಧರ್ಮದ ಬಗ್ಗೆ ಕೋಪ ಮಾಡುವುದು ಇದು ದೇವರಿಗೆ ದೂಪವಾಗುತ್ತದೆ.

ಲೋಭ - ನಮ್ಮ ಪುಣ್ಯವು ಎಲ್ಲಿ ಹೋಗುತ್ತದೋ ಎಂಬ ಜಿಪುಣತನ.

**ಮೋಹ** - ಜಗನ್ಮೋಹನ ಸೌಂದರ್ಯ ಚೆಲುವನಾದ ಶ್ರೀಕೃಷ್ಣಪರಮಾತ್ಮನ ಮೂರ್ತಿಯಲ್ಲೇ ಯಾವಾಗಲೂ ಅವನ ದಾಸತ್ವೇನ ಮನಸ್ಸಿಡುವುದು.

**ಮದ** - ಮದನ ಜನಕನಾದ ಮಾಧವನಲ್ಲಿ ನನಗೆ ಮನಸ್ಸು ಇದೆಯೆಲ್ಲಾ ಎಂದು ಮದ ಪಡುವುದು. ಆದರೆ ಇದು ಇನ್ನೊಬ್ಬ ಭಕ್ತರ ಬಗ್ಗೆ ಸ್ಪರ್ಧಾರೋಪವಾಗಿರಬಾರದು.

**ಮಾತ್ಸರ್ಯ** - ಭಗವದ್ವೇಷಿಗಳ ಬಗ್ಗೆ ಮತ್ತು ಅಧರ್ಮಿಗಳ ಬಗ್ಗೆ, ಅಧರ್ಮ ಮಾಡುವವರ ಬಗ್ಗೆ ಮಾತ್ಸರ್ಯ ಮಾಡುವುದು.

## ಅಮೇರಿಕಾ ಮುಂತಾದ ವಿದೇಶಗಳ ಪ್ರಯಾಣ

ಸಗರಚಕ್ರವರ್ತಿಗಳ ಕಾಲದಲ್ಲಿ ಸಾವಿರಾರು ಜನಗಳು ಮಾಡಿದ ಯಾವುದೋ ಒಂದು ತಪ್ಪಿಗಾಗಿ ಶಿಕ್ಷಾರ್ಹರಾದರು - ಅವರನ್ನು ಸಂಹಾರ ಮಾಡುವುದಾಗಿ ಸಗರಚಕ್ರವರ್ತಿಗಳು ಹೇಳಿದಾಗ, ವಸಿಷ್ಠರು - ಇವರಿಗೆ ಹಾಗೆ ಮಾಡುವುದು ಬೇಡ, ಶಿಕ್ಷಾ ರೂಪವಾದ ಯಾವುದಾದರೊಂದು ಚಿಹ್ನೆಯ ಮಾಡಿ ಬಹಿಷ್ಕೃತ ಜಾಗಗಳಿಗೆ ಕಳುಹಿಸುವುದಾಗಿ ಅಪ್ಪಣೆ ಮಾಡಿದರು. ಅದರಂತೆ ಕೆಲವರಿಗೆ ತಲೆ ಬೋಳಿಸಿ, ಗಡ್ಡ ಬಿಡಿಸಿ, ಪೈಜಾಮ ಹಾಕಿಸಿ, ಭರತ ಖಂಡದಿಂದ ಆಚೆಗೆ ಕಳುಹಿಸಿದರು. ಇವರೇ ಯವನರು ಅಥವಾ ಮುಸಲ್ಮಾನರಾದರು. ಇನ್ನಿತರರಿಗೆ ಜಟಾ ಜೂಟಗಳನ್ನು ಮಾಡಿದರು ಇವರು ಸಿಖ್ಖರಾದರು. ಇನ್ನೂ ಕೆಲವರಿಗೆ ಕ್ರಾಪ್ ಮಾಡಿಸಿ, ಪ್ಯಾಂಟ್, ಶರ್ಟ್ ಹಾಕಿ ಕಳುಹಿಸಿದರು ಇವರು ಮ್ಲೇಂಛರಾದರು. ಇದರಂತೆ ಇನ್ನೂ ಅನೇಕ ತರಹದ ಲಕ್ಷಣಗಳನ್ನು ಮಾಡಿ ಹೊರಗೆ ಕಳುಹಿಸಿದರು. ಅಂದರೆ ಭರತಖಂಡದಿಂದ ಆಚೆಗೆ ಹೋದವರೇ ಹೊರತು, ಹೊರಗಡೆಯಿಂದ ಭರತಖಂಡಕ್ಕೆ ಯಾರೂ ಬಂದವರಲ್ಲ. (ಶ್ರೀ ಮ॥ ಶಾ॥ ಸಂ॥ ಕಡ್ಡಿ ಶ್ರೀನಿವಾಸಾಚಾರ್ಯರು ಹೇಳಿದ್ದ ಆಪ್ತವಾಕ್ಯ ಪ್ರಮಾಣ)

ನಾಟಕವಾಡಬೇಕಾದರೆ ರಂಗಭೂಮಿಗೆ ಹೋಗಬೇಕು -ಆಟವಾಡಬೇಕಾದರೆ ಆಟದ ಮೈದಾನಕ್ಕೆ ಹೋಗಬೇಕು. ರೋಗ ಬಂದರೆ ಆಸ್ಪತ್ರೆಗೆ ಹೋಗಬೇಕು. ವ್ಯಾಜ್ಯ ಬಂದರೆ ನ್ಯಾಯ ಸ್ಥಾನಕ್ಕೆ ಹೋಗಬೇಕು ಅದರಂತೆ ನಮ್ಮ ಮನೆಯಲ್ಲಿ ಸ್ನಾನ ಮಾಡಬೇಕಾದರೆ ಬಚ್ಚಲ ಮನೆಗೆ ಹೋಗಬೇಕು, ಅಡಿಗೆ ಮಾಡಬೇಕಾದರೆ ಅಡಿಗೆ ಮನೆಗೆ ಹೋಗಬೇಕು, ಪೂಜೆ ಮಾಡಬೇಕಾದರೆ ದೇವರ ಮನೆಗೆ ಹೋಗಬೇಕು, ನಿದ್ದೆ ಮಾಡಬೇಕಾದರೆ ಮಲಗುವ ಕೋಣೆಗೆ ಹೋಗಬೇಕು. ಸತ್ತು ಹೋದರೆ ಸ್ಮಶಾನಕ್ಕೆ ಹೋಗಬೇಕು. ಇದರಂತೆ ಸಾಧನ ಮಾಡಬೇಕಾದರೆ ಒಂದು ಕರ್ಮ ಭೂಮಿಯೆಂದು ಇದೆ. ಅಲ್ಲಿಗೇ ಹೋಗಬೇಕಾಗುತ್ತದೆ. ಇದನ್ನು ವ್ಯತ್ಯಾಸ ಮಾಡಿದರೆ ಅವ್ಯವಸ್ಥೆಯಾಗುತ್ತದೆ. ಇದು ಎಲ್ಲರಿಗೂ ತಿಳಿದ ವಿಷಯವಾಗಿದೆ, ಅದಕ್ಕೆ ನಾವುಗಳು ಈಗ ವಾಸ ಮಾಡುವ ಸ್ಥಳ ಆಸೇತು ಹಿಮಾಚಲ ಪರ್ಯಂತ ಮಾನಸ ಸರೋವರದವರೆಗೆ ಇರುವ ಭೂಮಿಯನ್ನು ಕರ್ಮಭೂಮಿಯೆಂದು ತಿಳಿಸುತ್ತಾರೆ. ಇಲ್ಲಿನ ನದಿ, ಬೆಟ್ಟ, ಅಂಗ, ವಂಗ, ಕಳಿಂಗ ಮೊದಲಾದ ರಾಷ್ಟ್ರಗಳು ತತ್ತದ್ ಭಾಷೆಗಳು, ವರ್ಣಾಶ್ರಮ ಧರ್ಮಗಳು, ಧರ್ಮ ರಕ್ಷಕರಾದ ಸೂರ್ಯವಂಶ, ಚಂದ್ರವಂಶ ದೊರೆಗಳು ಮತ್ತು ಅವರ ಚರಿತ್ರೆಗಳು ಮುಂತಾದ್ದೆಲ್ಲಾ ಮತ್ಸ್ಯ ಪುರಾಣದ ಮಹಾಸಂಕಲ್ಪ ಎಂಬ ಭಾಗದಲ್ಲಿ ವರ್ಣಿತವಾಗಿದೆ. ಇದನ್ನೆಲ್ಲಾ ಬರೆದವರು ಶ್ರೀ ವೇದವ್ಯಾಸದೇವರು. ಎಂದರೆ ಇದು ಕರ್ಮಭೂಮಿಯೆಂದು ತಿಳಿಸಿದ್ದಾರೆ. ಅಂದರೆ ಸಾಧನೆ ಮಾಡುವವರು ಇಲ್ಲಿಯೇ ತಮ್ಮ ಸಾಧನ ಕಾರ್ಯವನ್ನು ಮಾಡಬೇಕು. ಇದರಲ್ಲಿ ಎರಡು ಭಾಗವಿದೆ. 'ಆರ್ಯಾವರ್ತಃ ಪುಣ್ಯಭೂಮಿಃ' ಎಂದರೆ

ಹಿಮಾಲಯ ಪರ್ವತದಿಂದ, ವಿಂಧ್ಯ ಪರ್ವತದವರೆಗೆ ಇರುವುದು ಪುಣ್ಯ ಭೂಮಿ ನಂತರ ವಿಂಧ್ಯ ಪರ್ವತದಿಂದ ಕನ್ಯಾಕುಮಾರಿಯವರೆಗೆ ಇರುವುದು ದಂಡಕಾರಣ್ಯವೆಂದು ಪ್ರಸಿದ್ಧವಾದ ಕರ್ಮಭೂಮಿ ಎಂದು ಹೇಳಲ್ಪಟ್ಟಿದೆ. ಇಂತಹ ಪವಿತ್ರ ಭೂಮಿಯಲ್ಲಿ ಭಗವಂತನ ಅವತಾರಗಳು ಮತ್ತು ಅನೇಕ ಋಷಿಗಳು, ಭಗವದ್ ಭಕ್ತರು ಮುಂತಾದವರು ಹಾಗೂ ಹಿರಣ್ಯಕಷುಪು, ರಾವಣ, ಮುಂತಾದ ದೈತ್ಯರುಗಳ ವರ್ಣನೆಗಳು ಸೇರಿದೆ. ವೈಕುಂಠ ಲೋಕಕ್ಕೆ ಹೋಗುವಂತಹ ಸಾಧಕರು, ಅಂಧಃ ತಮಸ್ಸಿಗೆ ಹೋಗುವಂತಹ ದೈತ್ಯರುಗಳು ಸಹ ಇಲ್ಲಿ ಬಂದೇ ಸಾಧನ ಮಾಡಿಕೊಂಡು ತಮ್ಮ ಗತಿ ಹೊಂದಬೇಕು ಎಂದು ಅರ್ಥವಾಯಿತು. ಯಾವ ಪುರಾಣಗಳಲ್ಲೂ ಸಹ ಅಮೇರಿಕಾ, ಲಂಡನ್, ಚೈನಾ, ಜಪಾನ್, ಮುಂತಾದ ಖಂಡಗಳನ್ನಾಗಲೀ ಅಲ್ಲಿಯ ಬೆಟ್ಟ, ನದಿ, ಮಿಸಿಸಿಪ್ಪಿ ನದಿ, ತೇಮ್ಸ್ ನದಿ, ಲಂಡನ್ ಪಟ್ಟಣ, ನ್ಯೂಯಾರ್ಕ್ ಪಟ್ಟಣಗಳನ್ನು ವರ್ಣಿಸಿಲ್ಲ. ಅವುಗಳೆಲ್ಲ ಸಾಧಕರಿಗೆ, ಬೇಕಾಗಿಲ್ಲವಾದ್ದರಿಂದಲೇ ಬಹಿಷ್ಕೃತವಾದುದೆಂದು ನಿಶ್ಚಯಿಸಿ ದೀಪಾಂತರಗಳು ಎಂಬ ಒಂದು ಶಬ್ದದಿಂದ ಹೇಳಿರುತ್ತಾರೆ. ಆದ್ದರಿಂದ ಬಹಿಷ್ಕೃತ ಜಾಗ ಎಂದು ಅಭಿಪ್ರಾಯವಾಯಿತು.

ಶ್ರೀಮದಾಚಾರ್ಯರು, ಶ್ರೀರಾಘವೇಂದ್ರಸ್ವಾಮಿಗಳವರು ಮುಂತಾದ ಯೋಗಿಗಳು ವಿಮಾನ ಸಹಾಯವಿಲ್ಲದೇ ತಮ್ಮ ಯೋಗಬಲದಿಂದ ಅಲ್ಲೆಲ್ಲಾ ಹೋಗಬಹುದಾಗಿತ್ತು. ಹಾಗೆಯೇ ಪರಮತೀಯರು ಸಹ ಹೋಗಬಹುದಾಗಿತ್ತು. ಆದರೆ ಯಾರೂ ಸಹ ಸೀಮೋಲ್ಲಂಘನ ಮಾಡಲಿಲ್ಲ. ಇದರಿಂದ 'ದುಷ್ಟ ದೇಶೇ ಚಿರಾವಾಸ' ಎಂಬ ದೋಷಬರುತ್ತದೆ ಎಂಬುದು ಅಭಿಪ್ರಾಯದಿಂದ ದೊಡ್ಡವರು ಯಾರೂ ಹೋಗಲಿಲ್ಲ. ಅದನ್ನು ಉಲ್ಲಂಘಿಸಿ ನಾವು ಹೋಗುವುದೆಂದರೆ ನಾವು ಅವರಿಗಿಂತ ಉತ್ತಮರಲ್ಲ ಎಂಬುದು ಖಂಡಿತವಾದ ವಿಚಾರ ಸರಿಯಷ್ಟೆ.?

ಕಕ್ಕಸ್‌ನಲ್ಲಿ ಬಹಳ ಒಳ್ಳೆಯ ಬಿಳಿ ಬಣ್ಣದ, ಹೊಳೆಯುವ ಕಲ್ಲುಗಳಿಂದ ನಿರ್ಮಿತವಾದ ಗೋಡೆ ಚೆನ್ನಾಗಿದೆ ಊದುಕಡ್ಡಿ ಹಚ್ಚಿದೆ ತಾವು ದಯವಿಟ್ಟು ಬಂದಿಲ್ಲಿ ಊಟ ಮಾಡಿ ಎಂದು ಯಾರಿಗೆ ಹೇಳಿದರೂ ಕೂಡ ಎಂತಹ ದುರಾಚಾರಿಯೂ ಸಹ ಒಪ್ಪುವುದಿಲ್ಲ. ಯಾಕೆಂದರೆ ಅದರ ಹೆಸರು ಕಕ್ಕಸ್ಸು ಎಂದು ಇರುವುದರಿಂದ ಊಟ ಮಾಡುವ ಜಾಗಕ್ಕೆ ಬಹಿಷ್ಕೃತ ಎಂದು ಅಭಿಪ್ರಾಯ. ದೇವರ ಪೂಜೆ, ಭೋಜನ ಮಾಡುವವರು ಬಹಿಷ್ಕೃತ ಕಕ್ಕಸ್‌ನಲ್ಲಿ ಆ ಕೆಲಸವನ್ನು ಮಾಡುವುದಕ್ಕೆ ಆಗುವುದಿಲ್ಲವಾದ್ದರಿಂದ ದೇವರ ಮನೆಗೇ ಹೋಗಬೇಕು, ಅದರಂತೆ ಸಾಧನೆ ಮಾಡುವವರು ಬಹಿಷ್ಕೃತ ಜಾಗಕ್ಕೆ ಹೋಗುವಂತಿಲ್ಲ. ಇದಕ್ಕಾಗಿ ಪವಿತ್ರವಾದ ಕರ್ಮಭೂಮಿಯಲ್ಲಿಯೇ ಇರಬೇಕು. ಇದನ್ನು ಬಿಟ್ಟುಹೋಗುವಂತಿಲ್ಲ. 'ದುಷ್ಟದೇಶೇ ಚಿರಾವಾಸ' ಎಂದರೆ ದುಷ್ಟ ಜನರ ಸಂಪರ್ಕದಿಂದ ಬ್ರಾಹ್ಮಣ್ಯ ನಾಶವಾಗುವುದರಿಂದ ಇದು ದೂಷ್ಯವಾಗಿದೆ. ಬೆಂಗಳೂರಿನಲ್ಲಿರುವ ನಮ್ಮ ಮನೆಯ ವಿಳಾಸವನ್ನು ತುಮಕೂರಿನಲ್ಲಿರುವ ಮನೆಗೆ ಹೇಳವುದಕ್ಕಾಗುತ್ತದೆಯೇ? ಅದರಂತೆಯೇ ನಮ್ಮ ದೇಶದ ಸಂಕಲ್ಪ ಅಮೇರಿಕಾ ದೇಶಕ್ಕೆ ಹೇಳಲು ಬರುವುದಿಲ್ಲ. ವಿಳಾಸವೇ ತಪ್ಪಾದ ಮೇಲೆ ಕಾರ್ಯಗಳು ಹೇಗೆ ಸರಿಯಾಗಿ ಮಾಡಲು ಸಾಧ್ಯ. ಇಲ್ಲಿಯ ದುಡ್ಡು ಆ ದೇಶಕ್ಕಾಗುವುದಿಲ್ಲ, ಅಲ್ಲಿಯ ದುಡ್ಡು ಈ ದೇಶಕ್ಕಾಗುವುದಿಲ್ಲ ಅದಕ್ಕೆ 'ಅನ್ಯಮಿಂದ್ರಂ ಕರಿಷ್ಯಾಮಿ' ಎಂದರೆ ಇನ್ನೊಬ್ಬ ಹೊಸ ಇಂದ್ರನನ್ನೇ ಸೃಷ್ಟಿ ಮಾಡುತ್ತೇನೆಂದಂತಾಯಿತು. ಆದರೆ ಇದು ಅಧಿಕೃತವಾದುದಲ್ಲ, ವ್ಯರ್ಥವಾದ ಕೆಲಸ. ಅದಕ್ಕೆ ಆ ದೇಶಕ್ಕೆ ಸಂಬಂಧಪಟ್ಟ ಹೊಸ ಸಂಕಲ್ಪ ಸೃಷ್ಟಿ ಮಾಡಬೇಕಾಗುತ್ತದೆ. (ಅಮೇರಿಕಾ ಖಂಡೇ - ಹೂಣಸಂವತ್ಸರೇ, ಸಪ್ಟೆಂಬರ್ ಮಾಸೇ ಪ್ರಥಮೇ ದಿವಸೇ ಬೆಳಿಗ್ಗೆ ಏಳು ಗಂಟೆ ಸಮಯೇ, ಅನಿಷ್ಟ ಸಿದ್ಧಿದ್ವಾರ, ಕಲೀಶ್ವರ ಪ್ರೀತ್ಯರ್ಥಂ ಮಿಸಿಸಿಪ್ಪಿ ಸ್ನಾನಮಹಂ ಕರೀಷ್ಯೇ) ಎಂದು ಹೇಳಬೇಕಾಗುತ್ತದೆ. ಇದು ಆಟಕ್ಕೆ ಉಂಟು ಲೆಕ್ಕಕ್ಕಿಲ್ಲ ಎಂಬ ಗುಂಪಿಗೆ ಸೇರಿತು. ಇದರಿಂದ ಏನೂ ಪ್ರಯೋಜನವಿಲ್ಲ, ಸಾರಾಸಾರಾ ವಿವೇಕ ತಿಳಿದಂತಹ ಧರ್ಮಸ್ಥಾಪನೆ ಮಾಡಬೇಕಾದವರೇ ಸೀಮೋಲ್ಲಂಘನ ಮಾಡಿದ ಮೇಲೆ ಸಾಮಾನ್ಯ ಜನರು ಸೀಮೋಲ್ಲಂಘನೆ ಮಾಡುವುದರಲ್ಲಿ ವಿಶೇಷವೇನೂ ಇಲ್ಲ. ಶಾಶ್ವತ ಸುಖಪ್ರದವಾದ ಪರಲೋಕದ ಜ್ಞಾನವೇ ಇಲ್ಲದೇ, ಕೆಲವೇ ದಿವಸ ಬದುಕಿರುವ ಈ ಲೋಕದ ಹಣ ಸಂಪಾದನೆಯ ಸುಖಕ್ಕಾಗಿ, ಉತ್ತಮವಾದ ಜನ್ಮ ಮತ್ತು ಭೂಮಿಯನ್ನು ತ್ಯಾಗ ಮಾಡಿ,

ಬಹಿಷ್ಕೃತವಾದ ಜಾಗದಲ್ಲಿ ವಾಸಮಾಡುವುದು ಸರಿಯೇ ಯೋಚನೆ ಮಾಡಿ, ಇದು ಚಾರ್ವಾಕರ ಮತವಾಯಿತು. ಇದು ಕ್ಷೇಮಕರವಲ್ಲ. ಮುಮುಕ್ಷುಗಳಾದ ಸಾಧಕರಾದ ನಮ್ಮ ಜನಗಳು ಅಮೇರಿಕಾಗೆ ಹೋದದ್ದರಿಂದ, ಅಲ್ಲಿನ ಮ್ಲೇಂಚರು ನಮ್ಮ ಜುಟ್ಟು, ಜನಿವಾರ, ನಾಮ, ಮುದ್ರೆ, ಪಂಚೆಗಳನ್ನು ಧರಿಸಿ, ತಮ್ಮ ಪ್ಯಾಂಟ್, ಕೋಟುಗಳನ್ನು ನಮಗೆ ಕೊಟ್ಟು, ಹೆಂಗಸರು ಫ್ರಾಕ್, ಲಂಗಗಳನ್ನು ಬಿಸಾಡಿ ಸೀರೆ ಉಟ್ಟಿಕೊಂಡು, ಬಳೆ ಕುಂಕುಮಗಳನ್ನು ಧರಿಸಿ ಇಲ್ಲಿಗೆ ಬಂದು ಎಲ್ಲಿ ನದಿ ಇದೆ, ದೇವಸ್ಥಾನವಿದೆ, ಎಲ್ಲಿ ಸಜ್ಜನರಿದ್ದಾರೆ ಎಂದು ಹುಡುಕುತ್ತಾ, ಹೆಂಡ, ಮಾಂಸ ಸೇವನೆಗಳನ್ನು ಬಿಟ್ಟು ಇದರ ಜೊತೆಗೆ ಈರುಳ್ಳಿ, ಬದನೆಕಾಯಿಗಳನ್ನು ಬಿಟ್ಟು ಏಕಾದಶೀ ಉಪವಾಸಗಳನ್ನು ಮಾಡಿ 'ಹರೇಕೃಷ್ಣ ಹರೇರಾಮ' ಎಂದು ಕೊಂಡಾಡುತ್ತಾ ನರ್ತನ ಮಾಡುತ್ತಿದ್ದಾರೆ. ಇವರ್‍ಯಾರು ಹಣ ಸಂಪಾದನೆಗಾಗಿ ಇಲ್ಲಿಗೆ ಬಂದವರಲ್ಲ. ಇಲ್ಲಿ ವಿಚಿತ್ರವೇನೆಂದರೆ ಬ್ರಾಹ್ಮಣರು ತಾವು ಮಾಡಬೇಕಾದ ಸಕಲ ಆಚಾರಗಳನ್ನು ತ್ಯಜಿಸಿ, ಪರಧರ್ಮವಾದ ಮ್ಲೇಂಚರ ಆಚರಣೆಗಳನ್ನು ಮಾಡುವುದು, ಇವರಿಗೆ ಪರಧರ್ಮ. ಮ್ಲೇಂಚರು ಬ್ರಾಹ್ಮಣರಂತೆ ಆಚಾರ ಮಾಡುವುದು ಅವರಿಗೆ ಸ್ವಧರ್ಮವಲ್ಲ, ಪರಧರ್ಮ. ಆದ್ದರಿಂದ ಬ್ರಾಹ್ಮಣರು ಬಿಟ್ಟು ಕೆಟ್ಟರು, ಮ್ಲೇಂಚರು ಕಟ್ಟಿಕೊಂಡು ಕೆಟ್ಟರು. ಇದಕ್ಕೆಲ್ಲಾ ವ್ಯಕ್ತಿಗಳೇ ಸ್ವತಂತ್ರ ಕರ್ತರಲ್ಲ. ಕಲಿಪುರುಷನ ಲೀಲಾ ವಿಲಾಸವೇ ಇದಕ್ಕೆ ಮೂಲ. ಇದೇ ಕಲಿಯುಗ ಮಹಾತ್ಮೆ. ಯೋಚನೆ ಮಾಡಿ ನೋಡಿ, ಯಾವುದು ಸರಿ? ಯಾವುದು ತಪ್ಪು? ನಿಮಗೇ ಬಿಟ್ಟಿದೆ.

## ಇಂಥವರಿಗೆ ಸಾಧನಾಮಾರ್ಗ ಹೇಗೆ?

**"ಪ್ರಾಣಾಪತ್ತಿನಲ್ಲಾದರೂ ಮಧ್ವಮತವ ಬಿಡದಿರಿ"** - (ದಾಸವಾಣಿ). ಅದರಂತೆ ಕುಲಗೆಟ್ಟು ಹಾಳಾಗಿ ಹೋಗಿದ್ದರೂ ಮಧ್ವಮತದೀಕ್ಷೆ ಇದ್ದರೆ ಸಾಧನಕ್ಕೆ ಅವಕಾಶವಿದೆ. ಸೀಮೋಲ್ಲಂಘನ ಮೋಕ್ಷಕ್ಕೆ ಬಾಧಕವಾದುದಲ್ಲ. ತಾತ್ಕಾಲಿಕ ನರಕ ಪ್ರಾಪ್ತಿ. ನಿಜವಾದ ಪಶ್ಚಾತ್ತಾಪ ಪಡುವುದೇ ಸರಿಯಾದ ಪ್ರಾಯಶ್ಚಿತ್ತ ಎಂಬುದು ಶ್ರೀಅಕ್ಷೋಭ್ಯತೀರ್ಥರ ಕಾಲದಲ್ಲಿ ನಡೆದುಬಂದ ಪ್ರಸಂಗದಲ್ಲಿ ಕಂಡುಬಂದಿದೆ. ಆದ್ದರಿಂದ ನಿಜವಾಗಿ ನಾವು ಮಾಡಿದ ತಪ್ಪು ಎಂದು ತಿಳಿದುಕೊಂಡು ಪಶ್ಚಾತ್ತಾಪ ಪಟ್ಟವರು ಶ್ರೀಮಳಖೇಡದಲ್ಲಿ ಇರುವ ಶ್ರೀಟೀಕಾರಾಯರ ಮತ್ತು ಶ್ರೀ ಶ್ರೀ ಅಕ್ಷೋಭ್ಯತೀರ್ಥರ ಮುಂದೆ ಹೋಗಿ ತಾವು ಮಾಡಿದ ತಪ್ಪನ್ನು ಸಾಚಾನಾಗಿ ಒಪ್ಪಿಕೊಂಡು ಕ್ಷಮೆ ಮಾಡಬೇಕು ಎಂದು ಬೇಡಿಕೊಳ್ಳಿ. ಅನಂತರ ತಿಳಿದವರಿಂದ ತಾತ್ಕಾಲಿಕ ಪ್ರಾಯಶ್ಚಿತ್ತ ಮಾಡಿಕೊಂಡು ನಿಮ್ಮ ಆಹ್ನಿಕ ಮಾಡಿಕೊಳ್ಳಿ.

## ನೀವು ಮಾಡಬಾರದ ಕೆಲಸಗಳು (ಇದೇ ನಿಮಗೆ ಪ್ರಾಯಶ್ಚಿತ್ತ)

ನೀವು ಯಾರಿಗೂ ತೀರ್ಥ, ಮಂತ್ರಾಕ್ಷತೆ ಕೊಡಬಾರದು, ಮನೆಯಲ್ಲಿಯೂ ಸಹ ಪಂಕ್ತಿ ಭೋಜನ ಮಾಡಬಾರದು. ಶ್ರಾದ್ಧದಲ್ಲಿ ಕರ್ತೃ ಆಗಬಾರದು. ಬೇರೆಯವರ ಕಡೆಯಿಂದ ಶ್ರಾದ್ಧ ಮಾಡಿಸಬೇಕು. ಪವಮಾನ ಹೋಮ, ಮದುವೆ, ಮುಂಜಿ, ಮುಂತಾದ ಸಮಯದಲ್ಲಿ ಹಸೆಮಣೆಯ ಮೇಲೆ ಯಜಮಾನನಾಗಿ ಕೂಡಬಾರದು. ವೇದವ್ಯಾಸ ಪೀಠದ (ವೇದಿಕೆ) ಮೇಲೆ ಕುಳಿತು ಪಾಠಹೇಳಬಾರದು, ಉಪನ್ಯಾಸ ಮಾಡಬಾರದು, ಉಪದೇಶ ಮಾಡಬಾರದು. ಕೇವಲ ಹರಿನಾಮಸ್ಮರಣೆಯಿಂದ ಸಾಧನೆ ಮಾಡಿಕೊಳ್ಳಬಹುದು.

## ಸಾಧನ ಮಾಡಿಕೊಳ್ಳಬಹುದಾದ ವಿಚಾರ

ಬ್ರಾಹ್ಮಣರ ಸಮೂಹದಲ್ಲಿ ಕುಳಿತು ಪಾಠ, ಪುರಾಣಶ್ರವಣ, ಉಪನ್ಯಾಸಗಳಿಂದ ಜ್ಞಾನ ಸಂಗ್ರಹ ಮಾಡಬಹುದು. ದಾನ ಮಾಡಬೇಕೆಂಬ ಇಚ್ಛೆ ಇದ್ದರೆ ಬೇರೆಯವರ ಕಡೆಯಿಂದ ದಾನ ಮಾಡಿಸಬೇಕು. ವಿಶೇಷವಾಗಿ ಜ್ಞಾನಕಾರ್ಯಕ್ಕೆ ದ್ರವ್ಯ ದಾನ ಮಾಡಿ, ಶ್ರೀಹರಿಯಕೃಪೆಗೆ ಪಾತ್ರರಾಗಬಹುದು. ಮೇಲಿನ ಅಭಿಪ್ರಾಯ ನಿಜವಾಗಿ ಪಶ್ಚಾತ್ತಾಪಪಟ್ಟವರಿಗೆ ಮಾತ್ರ ಹಾಗಲ್ಲದೇ ತಾವು ಮಾಡಿದ್ದೇ ಸರಿ ಎಂದು ಸಾಧಿಸುವವರಿಗೆ ಮುಂದಿನ ಜನ್ಮದಲ್ಲಿ ಹೊರದೇಶದಲ್ಲೇ ಜಾನ್ ಮತ್ತು ಡೇವಿಡ್ ಜನ್ಮಗಳು ಸಿದ್ಧವಾಗಿರುತ್ತದೆ. ಯಾವಾಗ ಮಧ್ವಮತದ ಜನ್ಮ?

# ಸದಾಚಾರ ವಿಭಾಗ

ಮಕ್ಕಳಿಗೆ ೫ ವರ್ಷ ವಯಸ್ಸಿನ ಪರ್ಯಂತ ಮಾನ-ಅವಮಾನಗಳ ಜ್ಞಾನ ಇರುವುದಿಲ್ಲವಾದ್ದರಿಂದ ಬೌದ್ಧಾವತಾರದ ಅನುಕರಣೆಯಂತೆ ಬರಿ ಬೆತ್ತಲೆ ತಿರುಗಾಡುತ್ತಿರುತ್ತಾರೆ. ಅವರಿಗೆ ದೋಷವಿಲ್ಲ. ಅಲ್ಲಿ ಬೌದ್ಧಾವತಾರದ ಚಿಂತನೆ ಮಾಡುವುದು, ಮಕ್ಕಳ ಸೌಂದರ್ಯ ದೃಷ್ಟಿ ದೋಷ ಪರಿಹಾರಕ್ಕಾಗಿ ಕರಿ ಉಡುದಾರವನ್ನು (ಕಟಿಸೂತ್ರ) ಕಟ್ಟಿರುತ್ತಾರೆ. ಇದು ಹಳೆಯ ಸಂಪ್ರದಾಯ.

೬ನೇ ವರ್ಷ ಪ್ರಾರಂಭವಾದ ಮೇಲೆ ಸೊಂಟದಿಂದ ಕೆಳಗೆ ಒಂದು ವಸ್ತ್ರವನ್ನು ಉಡಿಸಬೇಕು, ಇದೇ ಸದಾಚಾರದ ಪ್ರಾರಂಭ, ೮ನೇ ವರ್ಷಕ್ಕೆ ಉಪನಯನ ಮಾಡುವಾಗ ತಾಯಿ ಮಗನಿಗೆ ಕಟಿಸೂತ್ರಕ್ಕೆ ಕೌಪೀನ (ಲಂಗೋಟಿ) ಧಾರಣ ಮಾಡಬೇಕು - ಬ್ರಹ್ಮಚಾರಿ ಯಾವ ಕಾಲಕ್ಕೂ ಕೌಪೀನ ಧರಿಸದೇ ಸಂಚಾರ ಮಾಡಿದರೆ ತಾಯಿ-ತಂದೆ ಕೊಂದ ಪಾಪಕ್ಕೆ ಗುರಿಯಾಗುತ್ತಾನೆ. ಕೌಪೀನ ಧರಿಸದೇ ಸ್ನಾನ ಸಂಧ್ಯಾವಂದನಾ, ಪಾಠ, ಊಟ ಮಾಡುವುದು, ತುಳಸೀ ಬಿಡಿಸುವುದು ಮುಂತಾದ್ದು ಮಾಡುವಂತಿಲ್ಲ. ಲಂಗೋಟಿಯೇ ಬ್ರಹ್ಮಚರ್ಯದ ಅನಾಥರಕ್ಷಕ. ಲಂಗೋಟಿ ಬಲು ಒಳ್ಳೆಯದಣ್ಣ ದಾಸವಾಣಿ. ಹನುಮಂತದೇವರು, ನಾರದರು "ಲಂಗೋಟಿ ಧರಿಸಿದ್ದಾರೆ. ಶಾಲೆಗೆ ಹೋಗುವಾಗ ಲಂಗೋಟಿಯ ಮೇಲೆ ಅದರಣ್ಣ ಕಾಚ ಧರಿಸಿಕೊಂಡು ಹೋಗಿ, ಮನೆಗೆ ಹೋಗಿಬಂದ ಮೇಲೆ ಕಾಚ ತೆಗೆದುಬಿಡುವುದು. ಶಾಲೆಯಲ್ಲಿರುವಾಗ ಆಕಸ್ಮಾತ್ ಲಂಗೋಟಿ ಸಡಿಲವಾಗಿ ಚಡ್ಡಿ ಸಂದಿಯಿಂದ ಇಳಿಕಿದಾಗ ಬೇರೆ ಹುಡುಗರು ಕೀಟಲೆ ಮಾಡಿ ತೊಂದರೆ ಮಾಡುತ್ತಾರೆ. ಆಪತ್ತಿನ ರಕ್ಷಣೆಗಾಗಿ ಕಾಚ ಧರಿಸುವುದು ಅಷ್ಟೇ. ಕಾಚ ಧರಿಸಿಕೊಂಡು ಯಾವ ಕರ್ಮಗಳನ್ನು ಮಾಡಬಾರದು. ಬ್ರಹ್ಮಚಾರಿಯು ಲಂಗೋಟಿಯಿಲ್ಲದೇ ಕಚ್ಚೆ ಪಂಚೆ ಧರಿಸಿ, ಕರ್ಮ ಮಾಡಿದರೆ ಅದು ತೂತಿನ ಪಾತ್ರೆಯಲ್ಲಿ ನೀರು ಹಾಕಿದಂತೆ ಸೋರಿಹೋಗುತ್ತದೆ. ಫಲ ಸಿಗುವುದಿಲ್ಲ. ಇಪ್ಪತ್ತು ವರುಷದ ನಂತರ ಮದುವೆಯಾಗುವ ವಯಸ್ಸಾದ್ದರಿಂದ ಸ್ನಾತಕ ಬ್ರಹ್ಮಚಾರಿಯೆಂದು ಕರೆಸಿಕೊಳ್ಳುತ್ತಾರೆ. ಅವರಿಗೆ ಕಚ್ಚೆ ಹಾಕಬಹುದು ಎಂದು ಅವಕಾಶವಿದೆ ಎಂದು ಕೆಲವರ ಅಭಿಪ್ರಾಯ. ವಿಚಾರ ಮಾಡಬೇಕಾದ್ದು. ಸ್ಮಾರ್ತರು, ಅಯ್ಯಂಗಾರರುಗಳಲ್ಲಿ ಮದುವೆಯಾಗುವವರೆಗೂ ಸಹ ಕೌಪೀನ ಧರಿಸಿ ದಟ್ಟಿ ಉಡುತ್ತಾರೆಯೇ ಹೊರತು ಕಚ್ಚೆ ಪಂಚೆ ಉಡುವುದಿಲ್ಲ. ಮಾಧ್ವರಲ್ಲಿ ವಿಶೇಷವಾಗಿ ಮಠಗಳಲ್ಲಿ ಸ್ವಾಮಿಗಳು, ಪಂಡಿತರು, ಎಲ್ಲಾ ತಿಳಿದವರು ಸಹ ಬ್ರಹ್ಮಚಾರಿಗಳು ಕಚ್ಚೆ ಹಾಕಿಕೊಳ್ಳಲು ಅವಕಾಶ ಕೊಟ್ಟಿದ್ದಾರೆ ಅಂದಮೇಲೆ ಕಲಿಪುರುಷನ ಮಹಿಮೆ ಹೇಗಿದೆ ಎಂದು ಊಹಿಸಬಹುದು. ಭವಿಷ್ಯೋತ್ತರ ಪುರುಣಾದ ಶ್ರೀನಿವಾಸ ಕಲ್ಯಾಣದ ಪುರಾಣದಲ್ಲಿ ಬಕುಳಾದೇವಿಯು ಶುಕಾಚಾರ್ಯರಿಗೆ "ಕಲಿಯುಗದಲ್ಲಿ ಬ್ರಾಹ್ಮಣರು ಧರ್ಮ ತಿಳಿದಿದ್ದರೂ ಸಹ ಹೇಳುವುದಿಲ್ಲ, ಮೌನವಾಗಿರುತ್ತಾರೆ" ಎಂದು ಹೇಳಿದ್ದಾರೆ. ಇದು ವೇದವ್ಯಾಸ ದೇವರ ಮಾತು.

ಉಪನಯನದ ಕಾಲದಲ್ಲಿ ತಾಯಿಯು ಮಗನಿಗೆ ಲಂಗೋಟಿ ಧಾರಣ ಮಾಡಬೇಕು. ಅಮ್ಮ ಹಾಕಿದ ಲಂಗೋಟಿ ಬಂಧನ, ಅಮ್ಮನ ಸೊಸೆ ಬಂದು, ಬಂಧ ವಿಮೋಚನವಾಯಿತು. ಇಬ್ಬರೂ ಸ್ತ್ರೀಯರೇ ಅಲ್ಲೇ ವಿಶೇಷವಿರುವುದು. ಅಂದರೆ ಮದುವೆ ಹಿಂದಿನ ದಿವಸ ಆ ಬ್ರಹ್ಮಚಾರಿಯು ಸ್ನಾತಕ ಬ್ರಹ್ಮಚಾರಿ ಎನಿಸಿಕೊಳ್ಳುತ್ತಾನೆ. ಆದ್ದರಿಂದ ಅವನಿಗೆ ಕೌಪೀನ ವಿಸರ್ಜನೆ. ಕಚ್ಚೆಪಂಚೆ ಧಾರಣ.

ಗೃಹಸ್ಥನಾದಮೇಲೆ ಸ್ನಾನ ಮಾಡುವುದರಿಂದ ಹಿಡಿದು ಯಾವ ಕರ್ಮ ಮಾಡುವಾಗಲೂ ಸಹ ಲಂಗೋಟಿ ಹಾಕಿಕೊಳ್ಳಬಾರದು, ಅದು ಅವನಿಗೆ ಪರಧರ್ಮವಾಯಿತು. ಲಂಗೋಟಿ ಧರಿಸಿದರೆ ಮಾತೃಗಮನ ದೋಷ ಬರುತ್ತದೆ, ದಟ್ಟಿ ಪಂಚೆ ಉಡಬಾರದು, ಮದುವೆಯಾದ ಮೇಲೆ

ಗಂಡಸರಾಗಲೀ ಅಥವಾ ಹೆಂಗಸರಾಗಲೀ ಕಚ್ಚೆ ಇಲ್ಲದೇ ಹೊಸಲು ದಾಟಿದರೆ ವ್ಯಭಿಚಾರ ದೋಷ ಬರುತ್ತದೆ. ದಟ್ಟಿ ಉಡುವ ಅಭ್ಯಾಸವಿದ್ದರೆ ಒಳಗಡೆ ಕಚ್ಚೆ ಹಾಕಿದ ಮಡಿಪಂಚೆ ಉಟ್ಟಿಕೊಂಡು ಮೇಲೆ ದಟ್ಟಿ ಉಟ್ಟಿಕೊಳ್ಳಬಹುದು. ಇದು ಸ್ವಲ್ಪ ಧರ್ಮ ಉಳಿಸಿಕೊಂಡಂತಾಯಿತು. ಇದು ಪೂರ್ಣವಾಗಿ ಸರಿಯಾದುದಲ್ಲ.

## ಹೆಂಗಸರ ಉಡುಪು

ಹೆಣ್ಣು ಮಕ್ಕಳ ಎದೆ ಭಾಗ, ತೊಡೆಗಳ ಸಂದಿ, ಎರಡು ಸಹ ಪರರ ಕಣ್ಣಿಗೆ ಬೀಳಬಾರದು, ಇದರ ದರುಶನದಿಂದ ನಾನಾತರದ ಪಾಪಸಂಪಾದನೆಗಳು ಆಗುತ್ತದೆ. ಅದಕ್ಕೆ ಹೆಣ್ಣು ಮಕ್ಕಳಿಗೆ ಸೀರೆ ಉಡಬೇಕು. ಎಂದು ನಿಯಮ ಮಾಡಿದ್ದಾರೆ. ಜುಬ್ಬ ಪೈಜಾಮ ಹಾಕಬಾರದು, ೮ ವರ್ಷ ಆದ ಕೂಡಲೇ ಹೆಣ್ಣು ಮಕ್ಕಳಿಗೆ ಲಂಗ, ಕುಪ್ಪಸ ಧರಿಸಿ, ಅದರ ಮೇಲೆ ದಾವಣಿ ಎಂದು ಸರಗಿನ ಪರ್ಯಾವಾಗಿ ಹಾಕಿ, ಆಚ್ಛಾಧನ ಮಾಡಿಕೊಳ್ಳುವ ಸಂತ್ಸಂಪ್ರದಾಯ ಹಿಂದೆ ಇತ್ತು. ಹೆಂಗಸರು ಒಳಗಚ್ಚೆ ಮತ್ತು ಮೇಲುಕಚ್ಚೆ ಹಾಕುವ ಸಂಪ್ರದಾಯಗಳಿವೆ. ಒಟ್ಟಿನಲ್ಲಿ ಕಚ್ಚೆ ಇರಬೇಕು. ಇದು ಅವರ ಧರ್ಮ, ಅಯ್ಯರ್ ಮತ್ತು ಅಯ್ಯಂಗಾರ್‌ಗಳಲ್ಲಿ ಹೆಂಗಸರು ಸೀರೆ ಉಡುವ ಕ್ರಮ ವ್ಯತ್ಯಾಸವಾದರೂ ಒಳಗೆ ಕಚ್ಚೆ ಇರುತ್ತದೆ. ಮಾಧ್ವರಲ್ಲಿ ಮೇಲು ಕಚ್ಚೆ ಸಂಪ್ರದಾಯ. ಆದರೆ ೯ ಗಜದ ಸೀರೆಯು ಈಗ ೬ ಗಜದ ಸೀರೆ ಮತ್ತು ಮೂರು ಗಜದ ಒಳಲಂಗ ಒಟ್ಟು ೯ ಗಜವಾಯಿತು. ೬+೩ ಎಂದು ಬದಲಾವಣೆಯಾಯಿತು. ಅದು ಈಗ ಹೋಗಿ ಜುಬ್ಬ, ಪೈಜಾಮ, ಉತ್ತರಿಯ ಬಂದಿದೆ. ಇದು ಹಿಂದು ಧರ್ಮವಲ್ಲ, ಮುಸಲ್ಮಾನರ ಸಂಪ್ರದಾಯ. (ಇದರಿಂದ ಸೀರೆ ವ್ಯಾಪಾರಸ್ಥರಿಗೆ ಬಹಳ ನಷ್ಟವಾಗಿದೆ).

ಇನ್ನೂ ಕೆಲವು ಸೀಮೋಲ್ಲಿಂಘನೆಯರು, ತಾವು ಗಂಡಸ್ತನ ಬಯಸಲು ಹೋಗಿ ಪ್ಯಾಂಟು, ಷರ್ಟು ಹಾಕಿ ಹದ್ದು ಮೀರಿ ನಡೆಯುತ್ತಿದ್ದಾರೆ. ಲಂಗ ಬದಲಾಯಿಸಿದರೆ ಲಿಂಗ ಬದಲಾಯಿಸಲು ಸಾಧ್ಯವಿಲ್ಲ. ಪುರುಷತ್ವ ಎನ್ನುವುದು ಪುರುಷನ ಧರ್ಮ, ಸ್ತ್ರೀತ್ವ ಎನ್ನುವುದು ಸ್ತ್ರೀ ಧರ್ಮ. ಗಂಡಸ್ತನ ಬಯಸುವುದಕ್ಕೆ ಹೋಗಿ ಗಂಡು ಎಂಬ ಶಬ್ದ ಮಾಯವಾಗಿ, 'ಸ್ತನಶೇಷೋಬಭೂವ ಆಯಿತು'. ಅಂದರೆ ಗಂಡು ಅಲ್ಲ ಹೆಣ್ಣು ಅಲ್ಲ ತ್ರಿಶಂಕು ಸ್ವರ್ಗವಾಯಿತು. ನಿಧಾನವಾಗಿ, ಸಾವಧಾನವಾಗಿ ಯೋಚನೆ ಮಾಡಿನೋಡಿ ನಿಮಗೇ ಗೊತ್ತಾಗುತ್ತದೆ. ಸರಿಯೋ ತಪ್ಪು ಎಂದು.

ಶ್ರೀವಿಷ್ಣುಸಹಸ್ರನಾಮಸ್ತೋತ್ರದಲ್ಲಿ ಶ್ರೀವೇದವ್ಯಾಸರ ಅಪ್ಪಣೆ "ಸರ್ವಾಗಮಾನಾಮಾಚಾರಃ ಪ್ರಥಮಂ ಪರಿಕಲ್ಪತೇ ಆಚಾರಃ ಪ್ರಥಮೋ ಧರ್ಮೋ ಧರ್ಮಸ್ಯ ಪ್ರಭುರಚ್ಯುತಃ" ಸರ್ವಾಗಮಗಳಲ್ಲಿ ಆಚಾರವು ಪ್ರಥಮವೆಂದೂ ಪರಿಕಲ್ಪಿತವಾಗಿದೆ (ನಿಶ್ಚಯಿಲ್ಪಟ್ಟಿದೆ). ಅದಕ್ಕೆ ಪ್ರಭು ನಾಶರಹಿತನಾದ ಅಚ್ಯುತನು. ಓಟದ ಪಂದ್ಯದಲ್ಲಿ ಗೆರೆ ಹಾಕಿರುತ್ತಾರೆ. ಪಕ್ಕದ ಗೆರೆಯೊಳಗೆ ಕಾಲು ಇಡಬಾರದು ಎಂಬುದು ಅದರ ನಿಯಮ. ಕಾಲು ಇಟ್ಟರೆ ಆಟದಿಂದ ಬಹಿಷ್ಕಾರ ಹಾಕುತ್ತಾರೆ. ಇದಕ್ಕೇ ಇಷ್ಟು ನಿಯಮ ಇರುವಾಗ ವರ್ಣಾಶ್ರಮ ಧರ್ಮದ ಗೆರೆ ದಾಟಿದರೆ ಬಹಿಷ್ಕಾರ ಹಾಕುವುದರಲ್ಲಿ ಅನುಚಿತವೇನೂ ಇಲ್ಲ. ಆದ್ದರಿಂದ ಐಹಿಕ, ಪಾರತ್ರಿಕ ಉಭಯ ಭಯಪ್ರದವಾದ ಪರಧರ್ಮಕ್ಕೆ ಹೋಗದೆ ಸ್ವೋಚಿತವಾದ ಸ್ವಧರ್ಮದಲ್ಲಿ ನಡೆದುಕೊಂಡು ಹೋಗುವುದೇ ನಾಶರಹಿತವಾದ ಅಚ್ಯುತನ ಪ್ರೀತಿ ಸಂಪಾದಿಸುವ ಕ್ರಮ. ಅಚ್ಯುತ ಒಲಿದ ಮೇಲೆ ಶಾಶ್ವತ ಸುಖ ಪ್ರಾಪ್ತಿ.

**ಚುಟುಕೇಶ್ವರ**

ಪ್ಯಾಂಟುದರಿಸಿದರೇನು ಶಿವ, ಷರಟು ತೊಟ್ಟರೇನು ಶಿವ,
ಲಂಗ ಬದಲಾದರೇನು ಶಿವ, ಲಿಂಗಬದಲೇ ಶಿವ, ಶಿವ.

# ಮಧ್ವಮತದ ಮಹಿಮೆ

ಎಲ್ಲಾ ಮಾಧ್ವರಿಗೂ ನಿರ್ದುಃಖಾನಂದಭರಿತವಾದ ಮೋಕ್ಷವಾಗುವುದೆಂಬ ನಿಯಮವಿಲ್ಲ. ಮಧ್ವಮತದವರಿಗೇ ನಿರ್ದುಃಖಾನಂದಭರಿತವಾದ ಮೋಕ್ಷ ಖಂಡಿತ. (ಇದನ್ನು ಸರಿಯಾಗಿ ಅರ್ಥಮಾಡಿಕೊಳ್ಳಿ)

ಹುಟ್ಟಿನಿಂದ ಮಾಧ್ವನಾಗಿರಬಹುದು, ಆದರೆ ಆಚಾರ್ಯ ಮಧ್ವರ ಸಿದ್ಧಾಂತವನ್ನು ಉದಾಸೀನ ಅಥವಾ ವಿರೋಧಿಸಿದರೆ ಅವರು ಹೇಗೆ ಮಧ್ವಮತದವರು ಆಗುತ್ತಾರೆ, ಬೇವಿನಕಾಯನ್ನು ಸಕ್ಕರೆ ಪಾಕದಲ್ಲಿ ಅದ್ದಿದಂತೆ, ಒಳಗೆ ಅಮಾಧ್ವ, ಹೊರಗೆ ಮಾಧ್ವ. ಆದ್ದರಿಂದ ಇವರಿಗೆ ನಿರ್ದುಃಖಾನಂದ ಭರಿತವಾದ ಮೋಕ್ಷ ಹೇಗೆ ಸಿಕ್ಕೀತು? ಯೋಚನೆ ಮಾಡಿನೋಡಿ.

ಯಾವುದೇ ಮತ ಕುಲದಲ್ಲಿ ಹುಟ್ಟಿರಬಹುದು ಅವರಿಗೆ ಮಧ್ವ ಸಿದ್ಧಾಂತದಲ್ಲಿ ದೀಕ್ಷೆ ಇದ್ದರೆ ಅವರಿಗೇ ನಿರ್ದುಃಖಾನಂದಭರಿತವಾದ ಮೋಕ್ಷ ಖಂಡಿತ. ಅವರು ಒಳಗೆ ಮಾಧ್ವರು, ಮೇಲೆ ಬೇರೆ ದೇಹ. ಇವರು ವರ್ಣಾಶ್ರಮಗಳ ನಿಯಮಗಳನ್ನು ಉಲ್ಲಂಘಿಸದೆ ನಡೆದುಕೊಳ್ಳುತ್ತಾರೆ ಇದೇ ಸಾತ್ವಿಕರ ಲಕ್ಷಣ. ಅವರ ಅಧಿಕಾರಕ್ಕೆ ತಕ್ಕಂತೆ (ಯೋಗ್ಯತೆ) ಗೌರವ ಕೊಡಬೇಕು. - ಇದನ್ನು ವ್ಯಾಸರಾಜರು ಮತ್ತು ಕನಕದಾಸರ ಜೀವನದಲ್ಲಿ ಕಾಣಬಹುದು.

ಮಾಧ್ವರು ಜಗಳಗಂಟಿಗಳು ಮತ್ತು ಸಂಕುಚಿತ ಸ್ವಭಾವದವರು ಎಂದು ಕೆಲವರ ಆಗ್ರಹ, ಮೇಲ್ಕಂಡ ವಿಚಾರ ಮಾಡಿದಾಗ ಅವರು ಸಂಕುಚಿತ ಸ್ವಭಾವದವರೇ ಅಥವಾ ವಿಶಾಲ ಮನೋಭಾವ ಉಳ್ಳವರೇ ಯೋಚಿಸಿ ನೋಡಿ. ಮಧ್ವಮತಕ್ಕೆ ಜನರ ಗುಂಪು ಬೇಕಿಲ್ಲ, ಕೇವಲ ಸಾತ್ವಿಕರು ಮಾತ್ರ ಬೇಕು. "ನಮ್ಮ ಶಾಸ್ತ್ರ, ಸಂತೆಯಲ್ಲಿ ಮಾರುವುದಲ್ಲ" - "ಕಂಡಕಂಡಲ್ಲಿ ಮಾರಮಣನ ಕಥೆ ಪೇಳುವಗೆ ಘೋರ ನರಕ ತಪ್ಪದು". - ಇದು ವಿಜಯರಾಯರ ವಾಣಿ.

"ಗುಹ್ಯತಮಂ ಶಾಸ್ತ್ರಂ ಇದಮುಕ್ತ ಮಯಾಽನಘ" ಶ್ರೀ ಕೃಷ್ಣ ಭಗವಂತನು ಭಗವದ್ಗೀತೆಯಲ್ಲಿ ಹೇಳಿರುತ್ತಾನೆ - ಇಂತಹ ಶಾಸ್ತ್ರಗಳನ್ನು ಅಧಿಕಾರಿ, ಅನಧಿಕಾರಿಗಳ ಭೇದ ತಿಳಿಯದೇ, ಎಲ್ಲರಿಗೂ ಉಪದೇಶ ಮಾಡಬಾರದು. ಅಂದರೆ ಕೇವಲ ಅಧಿಕಾರಿಗಳಿಗೆ ಮಾತ್ರವೇ ತಿಳಿಸಬೇಕೆಂಬ ತಾತ್ಪರ್ಯವಾಯಿತು. ಇದು ಹರಿವಾಯುಗಳ ಅನುಗ್ರಹಕ್ಕೆ ಸಮ್ಮತ.

ಪ್ರಪಂಚದಲ್ಲೆಲ್ಲಾ ಮಧ್ವಮತವನ್ನು ಹರಡುವುದಕ್ಕೆ ಹೊರಟಿದ್ದಾರೆ, ಅದರ ಬದಲು ಮಧ್ವಮತದವರಿಗೆ ಇದನ್ನು ಹೇಳಿ ಮಧ್ವದೀಕ್ಷೆ ಬರುವಂತೆ ಮಾಡಿದರೆ ಹರಿವಾಯುಗಳ ಅನುಗ್ರಹಕ್ಕೆ ಪಾತ್ರರಾಗುತ್ತಾರೆ.

# ಮತಗಳ ತುಲನಾತ್ಮಕ ಅಧ್ಯಯನ

| ನಂ. | ಮತ | ಪ್ರವರ್ತಕ | ತತ್ವ | ವೇದಪ್ರಾಮಾಣ್ಯ | ಬ್ರಹ್ಮಲಕ್ಷಣ | ಪಂಚಭೇದ ತಾರತಮ್ಯ | ಸೃಷ್ಟಿ ಲಯ | ಸಾಧನೆ ಆಚಾರ | ಮೋಕ್ಷ ಸ್ವರೂಪ |
|---|---|---|---|---|---|---|---|---|---|
| 1 | ಚಾರ್ವಾಕ | ಬೃಹಸ್ಪತಿ | 1) ಜಡಭೂತದಿಂದ ಭಿನ್ನವಾದ ಚೈತನ್ಯವೇ ಇಲ್ಲ<br>2) ಅರ್ಥಕಾಮಗಳೇ ಪುರುಷಾರ್ಥಗಳು<br>3) ಪರಲೋಕವೆಂಬುದೇ ಇಲ್ಲ<br>4) ಪ್ರತ್ಯಕ್ಷ ಮಾತ್ರ ಪ್ರಮಾಣ<br>5) ಆಕಾಶವೆಂಬ ಭೂತವೇ ಇಲ್ಲ ಆದ್ದರಿಂದ ಶಬ್ದವೂ ಪ್ರಮಾಣವಲ್ಲ | ಒಪ್ಪುವುದಿಲ್ಲ | ಬ್ರಹ್ಮನೇ ಇಲ್ಲ | ಚೇತನರನ್ನು ಒಪ್ಪಿಲ್ಲ ಜಡಗಳಲ್ಲಿ ಮಾತ್ರ ಭೇದ | ಹುಟ್ಟು ನಾಶಗಳಿಗೆ ಸ್ವಭಾವವೇ ಕಾರಣ | ಸುಖ ಜೀವನವೇ ಸಾಧನೆ | ಇದಕ್ಕೆ ಜಾಗವೇ ಇಲ್ಲ |
| 2 | ಬೌದ್ಧ (ಶೂನ್ಯ) | ಗೌತಮಬುದ್ಧ | 1) ಸರ್ವವೂ ಕ್ಷಣಿಕ<br>2) ಸರ್ವವೂ ಸ್ವಲಕ್ಷಣ<br>3) ಸರ್ವವೂ ದುಃಖ<br>4) ಸರ್ವವೂ ಶೂನ್ಯ | ಆಗಮ ಪ್ರಮಾಣವಲ್ಲ | ಶೂನ್ಯತ್ವ ಹೊರತಾಗಿ ಬೇರೆ ಬ್ರಹ್ಮನಿಲ್ಲ | ಕಾಲ್ಪನಿಕ | ಪ್ರಕೃತಿಯ ಸ್ವಭಾವ | ಪರಲೋಕಕ್ಕಾಗಿ ಸಾಧನೆ ಬೇಕಾಗಿಲ್ಲ | ನಿರ್ವಾಣವೇ ಮೋಕ್ಷ |
| 3 | ಜೈನ | ಜಿನೇಶ್ವರ ತೀರ್ಥಂಕರ ಅರ್ಹತ | 1) ವಸ್ತುವು ಸರ್ವಥಾ ಕ್ಷಣಿಕವಲ್ಲ<br>2) ವಸ್ತುವು ಅರ್ಥಕ್ರಿಯಾಕಾರಿಯಾದರೂ ಸತ್ಯವಲ್ಲ<br>3) ಜ್ಞಾತೃವಾದ ಜೀವನೇ ಆತ್ಮನು<br>4) ಸಂಶಯ, ವಿಪರ್ಯಯ, ಅನಧ್ಯವಸಾಯ ಮತ್ತು ಅನಿಶ್ಚಯ ಇಲ್ಲದ ಜ್ಞಾನವೇ ಪ್ರಮಾಣ<br>5) ಬೌದ್ಧರ ಕ್ಷಣಿಕವಾದ ಸ್ವವ್ಯಾಹಕನಾದದ್ದು<br>6) ಅಹಿಂಸೆಯೇ ಪರಮಧರ್ಮ | ಆಪ್ತನಾದ ಜಿನ ನ ವಾಕ್ಯಕ್ಕಿಂತ ಬೇರೆ ಯಾವ ಆಗಮವಿಲ್ಲ | ಪರಬ್ರಹ್ಮನೆಂಬುವನನ್ನು ಒಪ್ಪುವುದಿಲ್ಲ | ಒಪ್ಪುವುದಿಲ್ಲ. ಚೇತನಾಚೇತನ ಭೇದವನ್ನು ಒಪ್ಪುತ್ತಾರೆ. | ಸ್ವಾಭಾವಿಕ | ಅಹಿಂಸೆಯೇ ಸಾಧನೆ | ಸತತ ಊರ್ಧ್ವ ಗಮನ |
| 4 | ನೈಯಾಯಿಕ | ಅಕ್ಷಪಾದ | 1) ದ್ರವ್ಯಗಳು ನವವಿಧ<br>2) ಗುಣಗಳು 24 ವಿಧ<br>3) ಕರ್ಮಗಳು ಪಂಚವಿಧ<br>4) ಸಾಮಾನ್ಯವು 2 ವಿಧ<br>5) ವಿಶೇಷವು ಅನಂತ<br>6) ಸಮವಾಯ ಒಂದೇ ಬಗೆ<br>7) ಅಭಾವವು ಎರಡು ವಿಧ<br>ಎರಡೂ ಒಂದೇ ಬಗೆಯ ತತ್ತ್ವ ಹೊಂದಿರೆ | ಆಪ್ತನಾದ ಈಶ್ವರನಿಂದ ಹೇಳಲ್ಪಟ್ಟ ಶಬ್ದ ಮಾತ್ರ ಪ್ರಮಾಣ (ವೇದವು ಪೌರುಷೇಯ) | ಸೃಷ್ಟ್ಯಾದಿ ಎಲ್ಲಾ ಕ್ರಮಗಳನ್ನು ತಿಳಿದ ನಿಮಿತ್ತ ಕಾರಣನೇ ಈಶ್ವರ. ಆದರೂ ಅವನಿಗೆ ಶರೀರವಿಲ್ಲ. | ಜೀವಾತ್ಮರು ಅನೇಕ ಐಕ್ಯವು ಅಸಂಭವ | ಈಶ್ವರಾಧೀನ | ರಾಗದ್ವೇಷಾದಿ ದೋಷನಿವೃತ್ತಿಯೇ ಸಾಧನೆ ಷೋಡಶ ಪದಾರ್ಥ ಜ್ಞಾನ | ಸುಖದುಃಖ ರಾಹಿತ್ಯವಾದ ಅಪವರ್ಗಾವಸ್ಥೆ |
|  | ವೈಶೇಷಿಕ | ಉಲೂಕ್ಯ/ ಕಣಾದ |  |  |  |  |  |  | ಏಕವಿಂಶತಿ ದುಃಖ ಧ್ವಂಸ |
| 6 | ಸಾಂಖ್ಯ (ನಿರೀಶ್ವರ ಸಾಂಖ್ಯ) | ಕಪಿಲ (ಶ್ರೀವಿಷ್ಣು ವಿನಿಂದ ಬೇರೆಯಾದವನು | 1) ಪ್ರಪಂಚವು ದುಃಖಮಯ ಮತ್ತು ಚೇತನ ಅಚೇತನವೆಂಬ ಎರಡು ತತ್ವಗಳಿಂದ ಕೂಡಿದೆ<br>2) ಪ್ರಕೃತಿ, ಪ್ರಕೃತಿ ವಿಕೃತಿ, ವಿಕೃತಿ, ಪುರುಷ ಎಂಬ 4 ತತ್ವಗಳು ಒಟ್ಟು 25 ತತ್ವಗಳಾಗುವುವು<br>3) ಅನುಮಾನ ಶಬ್ದಗಳು ಪ್ರತ್ಯಕ್ಷಾಧೀನ<br>4) ಸೃಷ್ಟಿಯು ಪ್ರಕೃತಿಯ ಸ್ವತಃ ಪರಿಣಾಮರೂಪವಾದದ್ದು<br>5) ಸೃಷ್ಟಿಕರ್ತನೆಂಬ ಈಶ್ವರ ಸರ್ವಥ ಇಲ್ಲ<br>6) ಬಂಧವು ಪುರುಷನಿಗಿಲ್ಲ, ಅದಿರುವುದು ಪ್ರಕೃತಿಗೆ | ಅಪೌರುಷೇಯ, ಸ್ವತಃ ಪ್ರಮಾಣ | ಈಶ್ವರನೇ ಇಲ್ಲ | ಚೇತನಾಚೇತನ ಭೇದವನ್ನು ಒಪ್ಪುತ್ತಾರೆ | ಪ್ರಕೃತಿಯ ಸ್ವತಃ ಪರಿಣಾಮ | ಕಪಿಲನ ಸಾಂಖ್ಯ ಶಾಸ್ತ್ರಾಭ್ಯಾಸ | ಸಾತ್ವಿಕ ಗುಣ ಹೊಂದುವುದೇ ಮೋಕ್ಷ. ಪುರುಷನಿಗೆ ಬಂಧವೂ,ಮೋಕ್ಷವೂ ಇಲ್ಲ. ಪ್ರಕೃತಿಯು ತನ್ನ ವಿಲಾಸವನ್ನು ಪುರುಷನಿಗೆ ತೋರಿಸಿ ತಾನು ನಿವೃತ್ತವಾಗುತ್ತದೆ |

ಬಿಂಬಮೂರುತಿಯ ಹೃದಯದಲಿ ನಿಲಿಸಲು ಬೇಕು - ಡಂಭಕ ಭಕುತಿಯನು ಜರಿಯಬೇಕು

| ನಂ. | ಮತ | ಪ್ರವರ್ತಕ | ತತ್ವ | ವೇದಪ್ರಾಮಾಣ್ಯ | ಬ್ರಹ್ಮಲಕ್ಷಣ | ಪಂಚಭೇದ ತಾರತಮ್ಯ | ಸೃಷ್ಟಿ ಲಯ | ಸಾಧನೆ ಆಚಾರ | ಮೋಕ್ಷ ಸ್ವರೂಪ |
|---|---|---|---|---|---|---|---|---|---|
| 7 | ಯೋಗ ಸೇಶ್ವರ ಸಾಂಖ್ಯ | ಯೋಗಾಚಾರ್ಯ ಹಿರಣ್ಯಗರ್ಭ (ಅನಂತರ ಯಾಜ್ಞವಲ್ಕ್ಯ, ಪತಂಜಲಿ) | 1) ನೀರೀಶ್ವರ ಸಾಂಖ್ಯದಲ್ಲಿ ಹೇಳಿದ ಎಲ್ಲವನ್ನು ಒಪ್ಪುತ್ತಾರೆ. ಆದರೆ ಈಶ್ವರನನ್ನು ಒಪ್ಪಿದ್ದಾರೆ.<br>2) ಚಿತ್ತವೃತ್ತಿಯನ್ನು ನಿರೋಧಿಸುವುದೇ ಯೋಗ.<br>3) ಪ್ರತ್ಯಕ್ಷ, ಅನುಮಾನ, ಆಗಮವೆಂದು ಮೂರು ವಿಧ ಪ್ರಮಾಣಗಳು | ಯೋಗಶಾಸ್ತ್ರವೇ ಪ್ರಮಾಣ | ಗುಣಾತೀತ, ಶ್ರುತಿಸ್ಮೃತಿಸಿದ್ಧ, ಅವಿದ್ಯಾರಹಿತ, ಪಾಪಪುಣ್ಯ, ಕರ್ಮ ನಿರ್ಲೇಪ, ಪುರುಷರಿಂದ ಭಿನ್ನ | ಜೀವಬ್ರಹ್ಮ ಭಿನ್ನತ್ವ ಒಪ್ಪುತ್ತಾರೆ. | ಈಶ್ವರಾಧೀನ. ಪ್ರಕೃತಿಯಿಂದ ಆಗುವ ಸೃಷ್ಟಿಗೆ ಈಶ್ವರನು ಅನುಗ್ರಾಹಕ ಮಾತ್ರ | ಓಂಕಾರಜಪ, ಬ್ರಹ್ಮಚರ್ಯ, ಗುರುಸೇವಾ, ತಪಸ್ಸು, ಕರ್ಮಾಭಿಲಾಷೆ ತ್ಯಾಗ | ಚಿತ್ತವೃತ್ತಿ ಇಂದ ಇರುವಿಕೆ. |
| 8 | ಪೂರ್ವ ಮೀಮಾಂಸಾ (ಜೈಮಿನಿಯ ದರ್ಶನ) | ಜೈಮಿನಿ | 1) ಅನುಭವಕ್ಕೆ ಗೋಚರವಾದ ಪ್ರಪಂಚ ಸತ್ಯ<br>2) ಧರ್ಮ ಅಧರ್ಮಗಳು ಅಪೌರುಷೇಯವೇದದಿಂದ ಸಿದ್ಧಿಸುವುದು.<br>3) ಬೌದ್ಧರ ಅಸತ್ ಖ್ಯಾತಿವಾದ ಸರಿಯಲ್ಲ.<br>4) ಪ್ರತ್ಯಕ್ಷ, ಅನುಮಾನ, ಶಬ್ದ ಉಪಮಾನ, ಅರ್ಥಾಪತ್ತಿ ಎಂಬ 5 ಪ್ರಮಾಣಗಳುಂಟು.<br>5) ಆತ್ಮನು ಪ್ರತ್ಯಕ್ಷಸಿದ್ಧನು<br>6) ವ್ಯತಿರೇಕ ವ್ಯಾಪ್ತಿ ಒಪ್ಪುವುದಿಲ್ಲ<br>7) ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಶಕ್ತಿ, ಸಂಖ್ಯಾ ಮತ್ತು ಸಾದೃಶ್ಯವೆಂದು 9 ವಿಧ ಪದಾರ್ಥಗಳು | ಅಪೌರುಷೇಯ ಮತ್ತು ಪ್ರಮಾಣ (ಪರತಃ) | ಆತ್ಮನು ವಿಭು ಮತ್ತು ಶಾಶ್ವತ. ಪ್ರತಿ ಶರೀರದಲ್ಲೂ ಭಿನ್ನ. ಆತ್ಮನು ಮಾನಸ, ಪ್ರತ್ಯಕ್ಷನಲ್ಲ. ಈಶ್ವರನನ್ನು ಒಪ್ಪಿಲ್ಲ. | ಸಂಸಾರದಲ್ಲಿ ಜೀವಬ್ರಹ್ಮ ಭೇದವುಂಟು. | ಈಶ್ವರ ಕರ್ತೃಕ, ಸೃಷ್ಟಿ, ಪ್ರಳಯಗಳನ್ನು ಒಪ್ಪಿಲ್ಲ. | ಕರ್ಮಾಚರಣೆಯೇ ಸಾಧನೆ | ಸ್ವರ್ಗದಿಂದ ಬೇರೆಯಾದ ಮೋಕ್ಷವನ್ನು ಒಪ್ಪಿಲ್ಲ. ಸ್ವರ್ಗವು ದುಃಖಾಮಿಶ್ರಿತವಾದ ಸುಖರೂಪವಾದದ್ದು. |
| 8ಅ | ಪ್ರಭಾಕರ | ಪ್ರಭಾಕರ | | | | | | | |
| 8ಆ. | ಕುಮಾರಿಲ | ಕುಮಾರಿಲ | 1) ಶೃತಿಯೇ ಧರ್ಮಾಧರ್ಮಗಳಿಗೆ ಪ್ರಮಾಣ, ಪ್ರತ್ಯಕ್ಷವಲ್ಲ.<br>2) ಪ್ರತ್ಯಕ್ಷ, ಅನುಮಾನ, ಶಬ್ದ, ಉಪಮಾನ, ಅರ್ಥಾಪತ್ತಿ, ಅನುಪಲಬ್ದಿ ಎಂದು ಪ್ರಮಾಣಗಳು 6 ವಿಧ.<br>3) ದ್ರವ್ಯ, ಜಾತಿ, ಗುಣ, ಕ್ರಿಯಾ ಮತ್ತು ಅಭಾವ ಎಂಬ 5 ಬಗೆ ಪದಾರ್ಥವುಳ್ಳ ಪ್ರಪಂಚ ಅನಾದಿ ಮತ್ತು ಸತ್ಯ.<br>4) ಆತ್ಮನು ದ್ರವ್ಯರೂಪ, ಜ್ಞಾನಶಕ್ತಿ ಉಳ್ಳವನು ಆದರೆ ಜ್ಞಾನರೂಪನಲ್ಲ. | ಅವು ಅಪೌರುಷೇಯ ಮತ್ತು ಪ್ರಮಾಣ ಪರತಃ | ಆತ್ಮನು ಮಾನಸ, ಪ್ರತ್ಯಕ್ಷ ಗೋಚರ. ಆತ್ಮ ಸ್ವಪ್ರಕಾಶನಲ್ಲ. ಈಶ್ವರನನ್ನು ಒಪ್ಪಿಲ್ಲ. | ಸಂಸಾರದಲ್ಲಿ ಜೀವ ಬ್ರಹ್ಮ ಭೇದವುಂಟು. | ಆತ್ಮನ ವ್ಯಾಪಾರ. ಈಶ್ವರ ಕರ್ತೃಕ, ಸೃಷ್ಟಿ, ಪ್ರಳಯಗಳನ್ನು ಒಪ್ಪಿಲ್ಲ. | ಕರ್ಮಾಚರಣೆಯೇ ಸಾಧನೆ | ಸ್ವರ್ಗದಿಂದ ಬೇರೆಯಾದ ಮೋಕ್ಷವನ್ನು ಒಪ್ಪಿಲ್ಲ. ಸ್ವರ್ಗವು ದುಃಖಾಮಿಶ್ರಿತವಾದ ಸುಖರೂಪವಾದದ್ದು. |
| 9 | ಶೈವ<br>ಅ) ಪಾಶುಪತ<br>ಆ) ಶೈವ<br>ಇ) ಪ್ರತ್ಯಭಿಜ್ಞ<br>ಈ) ರಸೇಶ್ವರ | ನಕುಲೀಶ<br>ಮಾಹೇಶ್ವರ<br>ಮಾಹೇಶ್ವರ<br>ರಸೇಶ್ವರ | 1) ಪಶು ಎಂದರೆ ಜಗತ್ತು ಮತ್ತು ಜೀವಿಗಳು.<br>2) ವಿದ್ಯಾ ಎಂಬುದು ಪಶುವಿನ ಗುಣ<br>3) ಕಲಾ ಎಂಬುದು ಅಚೇತನರೂಪ.<br>4) ಪಾಶುಪತದಲ್ಲಿ ಈಶ್ವರನಿಗೆ ಜಗತ್ಕರ್ತೃತ್ವ ಉಂಟು. ಶೈವದಲ್ಲಿ ಅದನ್ನು ಒಪ್ಪುವುದಿಲ್ಲ. | 28 ಶೈವಾಗಮಗಳು ಮಾತ್ರ ಪ್ರಮಾಣ | ಮಹಾದೇವನಾದ ಶಿವನು ಸರ್ವೋತ್ತಮ, ಸ್ವತಂತ್ರ, ಸರ್ವಕರ್ತೃ. | ಇಲ್ಲ | ಈಶ್ವರಾಧೀನ | ಭಸ್ಮಸ್ನಾನ, ಭಸ್ಮ ಶಯನಾದಿ ಯೋಗಗಳು, ಜಪಧ್ಯಾನಾದಿಗಳೇ ಸಾಧನೆ | ಹಾಲಿನಲ್ಲಿ ಹಾಲು ಸೇರುವಂತೆ ಜೀವನು ಶಿವನಲ್ಲಿ ಸೇರುವುದೇ ಮೋಕ್ಷ |

| ನಂ. | ಮತ | ಪ್ರವರ್ತಕ | ತತ್ವ | ವೇದಪ್ರಾಮಾಣ್ಯ | ಬ್ರಹ್ಮಲಕ್ಷಣ | ಪಂಚಭೇದ ತಾರತಮ್ಯ | ಸೃಷ್ಟಿ ಲಯ | ಸಾಧನೆ ಆಚಾರ | ಮೋಕ್ಷ ಸ್ವರೂಪ |
|---|---|---|---|---|---|---|---|---|---|
| 10 | ಅದ್ವೈತ | ಶಂಕರಾಚಾರ್ಯ | 1) ಪರಬ್ರಹ್ಮನೊಬ್ಬನೇ ಸತ್ಯ, ಸ್ವಯಂಪ್ರಕಾಶ ಮತ್ತು ಅಖಂಡ.<br>2) ಪ್ರಪಂಚವು ಮಿಥ್ಯಾ, ಪ್ರತ್ಯಕ್ಷ, ಅನುಮಾನ, ಆಗಮ, ಉಪಮಾನ, ಅರ್ಥಾಪತ್ತಿ, ಅನುಪಲಬ್ಧ ಎಂಬ ಆರು ವ್ಯಾವಹಾರಿಕ ಪ್ರಮಾಣಗಳು.<br>3) ಜೀವನು ಬ್ರಹ್ಮನಿಂದ ಭಿನ್ನನಲ್ಲ, ಅಜ್ಞಾನಾವಸ್ಥೆಯಿಂದ ಹಾಗೆ ತಿಳಿದು ದುಃಖಕ್ಕೆ ಒಳಗಾಗುತ್ತಾನೆ.<br>4) ಮಹಾವಾಕ್ಯಗಳನ್ನುಳಿದು ಉಳಿದ ವೇದಗಳು ಪ್ರಮಾಣವಲ್ಲ.<br>5) ಶುದ್ಧಾಂತಃಕರಣ ಹೊಂದಿ ಬ್ರಹ್ಮಾಭಿನ್ನನಾಗುತ್ತಾನೆ. | ಪಂಚ ಮಹಾವಾಕ್ಯ ಮಾತ್ರ ಪ್ರಮಾಣ. ಉಳಿದವು ಅತತ್ವಾವೇದಕ ಪ್ರಮಾಣ | ಸ್ವಪ್ರಕಾಶ, ಅಖಂಡ, ನಿರ್ಗುಣ, ನಿರಾಕಾರ, ನಿರವಯವ ಶುದ್ಧ ಚೈತನ್ಯ ಸ್ವರೂಪ. | ಒಪ್ಪುವುದಿಲ್ಲ. | ಬ್ರಹ್ಮನ ಅಪಾರಮಾರ್ಥಿಕ ವ್ಯಾಪಾರ. ಮಾಯೆಯಿಂದ ಜಗತ್ತು ಕಲ್ಪಿತ. | ಅಹಂ ಬ್ರಹ್ಮಾಸ್ಮಿ ಉಪಾಸನೆಯೇ ಪ್ರಧಾನ. | ಜೀವಬ್ರಹ್ಮ ಐಕ್ಯವೇ ಮೋಕ್ಷ, ಸುಖ, ದುಃಖರಹಿತ, ಶುದ್ಧ ಅಖಂಡ ಸ್ವರೂಪ. |
| 11 | ವಿಶಿಷ್ಟಾದ್ವೈತ | ರಾಮಾನುಜಾ-ಚಾರ್ಯ | 1) ಪ್ರತ್ಯಕ್ಷ, ಅನುಮಾನ, ಆಗಮವೆಂದು 3 ಪ್ರಮಾಣಗಳು, ದ್ರವ್ಯ ಮತ್ತು ಅದ್ರವ್ಯವೆಂದು 2 ಪ್ರಮೇಯಗಳು<br>2) ಜೀವನು ಬದ್ಧ, ಮುಕ್ತ ಮತ್ತು ನಿತ್ಯನೆಂದು 3 ವಿಧ.<br>3) ಬ್ರಹ್ಮನು ಪರ, ವ್ಯೂಹ, ವಿಭವ, ಅಂತರ್ಯಾಮಿ, ಮತ್ತೆ ಅರ್ಚಾವತಾರ ಎಂದು 5 ವಿಧ.<br>4) ಜಗತ್ತು ಈಶ್ವರಾಧೀನ ಮತ್ತು ಶರೀರಭೂತ ಹಾಗೂ ಸತ್ಯ.<br>5) ಈಶ್ವರನು ಜಗತ್ತಿಗೆ ಉಪಾದಾನ ಹಾಗೂ ನಿಮಿತ್ತ ಕಾರಣನು. | ವೇದ ಪ್ರಮಾಣ ಒಪ್ಪುತ್ತಾರೆ. | ನಿರ್ಗುಣನಲ್ಲ, ಜ್ಞಾನಾನಂದಾತ್ಮನು, ಸೃಷ್ಟಿಕರ್ತ, ನಿರ್ದೋಷಿ | ಮೋಕ್ಷದಲ್ಲಿ ಭೇದವಿದ್ದರೂ ತಾರತಮ್ಯವಿಲ್ಲ. | ಸುಖಕ್ಕಾಗಿ ಈಶ್ವರನ ಲೀಲಾ | ಭಕ್ತಿ, ಪ್ರಪತ್ತಿಗಳೇ ಮೋಕ್ಷೋಪಾಯ -ಗಳು. | ಜೀವನಿಗೆ ತಾನು ಈಶ್ವರನ ಶೇಷ ಮತ್ತು ಪ್ರಕೃತಿಯಿಂದ ಭಿನ್ನ ಎಂಬ ತಿಳುವಳಿಕೆ ಉಂಟಾಗಿ ಶುದ್ಧನಾಗಿ ಪೂರ್ಣಾನಂದಾನುಭವ ಹೊಂದುವುದು. |
| 12 | ದ್ವೈತ | ಪೂರ್ಣಪ್ರಜ್ಞ ಆಚಾರ್ಯರು | 1) ಶ್ರೀಹರಿಯು ಸರ್ವೋತ್ತಮನು<br>2) ಜಗತ್ತು ತತ್ವಶಃ ಸತ್ಯ.<br>3) ಜೀವಜಡಗಳು ಬ್ರಹ್ಮನಿಂದ ಭಿನ್ನ ಮತ್ತು ಪರಸ್ಪರ ಭಿನ್ನ<br>4) ಜೀವಿಗಳು ಶ್ರೀಹರಿಯ ದಾಸರು<br>5) ಜೀವಿಗಳು ಅಸಂಖ್ಯಾತವಾದ ತಾರತಮ್ಯವುಳ್ಳವರು.<br>6) ಮುಕ್ತಿಯು ಸ್ವರೂಪಸುಖದ ಅನುಭವವು.<br>7) ನಿಷ್ಕಲ್ಮಶ ಭಕ್ತಿಯೇ ಮುಕ್ತಿಗೆ ಸಾಧನೆ.<br>8) ಪ್ರತ್ಯಕ್ಷ,ಅನುಮಾನ ಆಗಮ ಮೂಲಪ್ರಮಾಣಗಳು<br>9) ಶ್ರೀಹರಿಯು ಸಕಲ ವೇದಗಳಿಂದ ಪ್ರತಿಪಾದ್ಯನು. | ಅನಂತ ವೇದಗಳೂ ಪ್ರಮಾಣ | ಅನಂತ ಕಲ್ಯಾಣ ಗುಣಪೂರ್ಣ, ದೋಷದೂರ, ಸರ್ವಸ್ವತಂತ್ರ, ಸೃಷ್ಟ್ಯಾದಿ ಅಷ್ಟಕರ್ತೃ, ಸಕಲ ಜೀವೇಶ್ವರ, ಸಾದಾಗಮೈಕವೇದ್ಯ, ಅನಾದಿ, ನಿತ್ಯಪೂರ್ಣ, ಜೀವಜಡಅತ್ಯಂತ ವಿಲಕ್ಷಣ, ಅಪ್ರಾಕೃತ | ಜೀವ-ಬ್ರಹ್ಮ ಜೀವ-ಜೀವ ಜೀವ-ಜಡ ಜಡ-ಜಡ ಜಡ-ಬ್ರಹ್ಮ ಭೇದ ತಾರತಮ್ಯ ಸತ್ಯ | ಜೀವಿಯ ಸಾಧನೆಗಾಗಿ ಬ್ರಹ್ಮನ ಲೀಲೆ | ದಾಸೋಹಂ, ಉಪಾಸನೆ, ಸ್ನಾನ, ಸಂಧ್ಯಾ, ಜಪ, ಪೂಜಾ, ಪಾಠ, ಪ್ರವಚನ, ಹೋಮ, ವೇದಾಧ್ಯಯನ, ಇಂದ್ರಿಯನಿಗ್ರಹ, ತಾರತಮ್ಯೋಪಾಸನೆ, ಇತ್ಯಾದಿ. | ಸಂಸಾರ ಬಂಧನದಿಂದ ಲಿಂಗದೇಹಭಂಗರೂಪ ಸ್ವರೂಪಾನಂದ ಆವಿರ್ಭಾವ ರೂಪ ಶಾಶ್ವತ ಸುಖ ಹೊಂದಿ ಭಗವಂತನ ದಾಸರಾಗಿಯೇ ಉಳಿಯುವುದು. |

## ಆಧಾರ ಗ್ರಂಥಗಳು

1. ಸರ್ವಸಿದ್ಧಾಂತ ಸಾರಾಸಾರ ವಿವೇಚನ - ಶ್ರೀವಿಜಯೀಂದ್ರ ತೀರ್ಥರು, ಪ್ರಕಾಶನ - ಬೃಂದಾವನ ಆಫೀಸ್, ಮಂತ್ರಾಲಯ
2. ಸರ್ವದರ್ಶನ ಸಂಗ್ರಹ - ಸಾಯಣಮಾಧವಾಚಾರ್ಯ ಭಂಡಾರ್ಕರ್, ಓರಿಯಂಟಲ್ ರೀಸರ್ಚ್ ಇನ್ಸ್ಟಿಟ್ಯೂಟ್, ಪುಣೆ
3. ಭಾರತೀಯ ತತ್ವದರ್ಶನ ಸಂಗ್ರಹ - ಹೆಚ್.ಎನ್. ರಾಘವೇಂದ್ರಾಚಾರ್, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
4. ಭಾರತ ತತ್ವದರ್ಶನಗಳ ಸಮೀಕ್ಷಾ - ಡಾ. ಸಿ.ಆರ್. ವಿಜಯಸಿಂಹಾಚಾರ್, ಶ್ರೀಶ್ರೀಪಾದರಾಜ ಮಠ, ಮುಳಬಾಗಿಲು.

ಸಂಗ್ರಹಕಾರರು - ವಿದ್ಯಾಭೂಷಣ ಡಾ. ಸಿ.ಆರ್. ವಿಜಯಸಿಂಹಾಚಾರ್ಯ
ಸಂಶೋಧಕರು - ಶ್ರೀ 108 ಶ್ರೀವಿಶ್ವನಂದನತೀರ್ಥರು
ಪ್ರಕಾಶಕರು - ಸುದರ್ಶನ ಕಲಾಮಂದಿರ, ಚಾಮರಾಜಪೇಟೆ, ಬೆಂಗಳೂರು-18

अन्ययोषास्का ये तु तमोन्ध यारु त्यासंशयम ततो धिकमिवन्त्यन्कं यन्ति तेधामत्रिन्दकाः ।
तस्याद्यायास्वरूपंत तारायणमतामथ । अयत्यर्दस्य निन्दा च ये विदुस्सह सज्जनाः ॥

ಮೇಲ್ಕಂಡ ವಿಚಾರಗಳನ್ನು ಒದಗಿಸಿಕೊಟ್ಟು, ಸಹಕರಿಸಿದ ಶ್ರೀ ಡಾ॥ ಸಿ.ಆರ್.ವಿಜಯಸಿಂಹಾಚಾರ್ಯರಿಗೂ
ಮತ್ತು ಅವುಗಳನ್ನು ಒಂದು ಕ್ರಮವಾಗಿ ಪಟ್ಟಿಯ ರೂಪದಲ್ಲಿ ವಿತರಣೆ ಮಾಡಿದ
ಶ್ರೀ ೧೦೮ ಶ್ರೀವಿಶ್ವನಂದನತೀರ್ಥಶ್ರೀಪಾದಂಗಳವರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು.

- ಸಂಗ್ರಹಕಾರ
**ಎಸ್.ಜಿ.ದ್ವಾರಕಿ**

## ಪರಸ್ಪರ ವಿರುದ್ಧ ಸಿದ್ಧಾಂತಗಳುಳ್ಳ ಸಮ್ಮಿಶ್ರ ದರ್ಶನಗಳು ಸರಿಯಾದ ತತ್ತ್ವವನ್ನು ಯಾವ ದಿಕ್ಕಿನಲ್ಲಿ ಮತ್ತು ಎಷ್ಟು ದೂರ ಒಯ್ಯಲು ಸಾಧ್ಯ?



ಶ್ರೀ ಶಿಂಶುಮಾರಮೂರ್ತಿ

ಅಂತರಿಕ್ಷದ ನಕ್ಷತ್ರ ಮಂಡಲದ ಮಧ್ಯದಲ್ಲಿ ಶ್ರೀಹರಿಯು ದೊಡ್ಡದಾದ ಶಿಂಶುಮಾರ (ಚೇಳಿನ) ರೂಪತಾಳಿ ಕೊಂಡಿಯನ್ನು ಕೆಳಭಾಗ ಮಾಡಿ ಬಾಲವನ್ನು ಮೇಲಕ್ಕೆತ್ತಿ ನಿಂತಿರುತ್ತಾನೆ. ಬಾಲ ದೇಹದ ಸಂಗಮ ಜಾಗದಲ್ಲಿ ಧ್ರುವನಕ್ಷತ್ರವಿದೆ. ಅಲ್ಲಿ ಶ್ರೀ ಧ್ರುವರಾಯರು ಇದ್ದಾರೆ. ಅವರ ಸುತ್ತಲೂ ಎಲ್ಲಾ ಗ್ರಹಗಳು ಸಂಚಾರ ಮಾಡುತ್ತಾರೆ.




## ನನ್ನ ಹೃದಯ ಸರಿಯಾದ ತತ್ತ್ವಕ್ಕಾಗಿ ಜಿಜ್ಞಾಸ ಮಾಡುತ್ತಿದೆ.

# ಸಾತ್ವಿಕರ ಸಾಧನೆಯ ಸಿದ್ಧಿಗಾಗಿ ಸುದ್ದಿ

## ನಿರ್ದುಃಖಾನಂದಭರಿತವಾದ ಮೋಕ್ಷಕ್ಕೆ ಸಾತ್ವಿಕರೇ ಅಧಿಕಾರಿಗಳು

**अन्ध:तम: प्रविशन्ति येऽविद्यामुपासते ।**
**ಅಂಧಃತಮವ ಪ್ರವೇಶಿಪರು ಅವಿದ್ಯೋಪಾಸಕರು (ಮಿಥ್ಯಾ ಜ್ಞಾನ)**

**ततो भूयइव ते तमो य उ विद्यायाँ रता: ।**
**ಅದನು ಖಂಡಿಸದಿರ್ಪವರ್ ಅದಕೆ ಮಿಗಿಲೆನಿಪ ಘೋರನರಕವನ್ನೈದುವರ್**

- (ಈಶಾವಾಸ್ಯೋಪನಿಷತ್)

ದೇವ-ಜೀವ-ಜಡ ಇದರ ವಿಚಾರದಲ್ಲಿ ಅನೇಕ ಭಿನ್ನಾಭಿಪ್ರಾಯಗಳು ಇರುವಾಗ ಪ್ರಮಾಣಬದ್ಧವಾಗಿ ಯಾವ ತತ್ವ ಸರಿ ಎಂದು ಚರ್ಚೆ ಮಾಡಿ ತಿಳಿದುಕೊಳ್ಳುವುದೇ ಸಾತ್ವಿಕರ ಸಾಧನ ಮಾರ್ಗದ ಕರ್ತವ್ಯ. ಅದನ್ನು ತಿಳಿಸುವುದೇ ಈ ಗ್ರಂಥದ ಉದ್ದಿಶ್ಯ. ನಿಷ್ಪಕ್ಷಪಾತವಾಗಿ ವಿಚಾರ ಮಾಡಿ ನೋಡುವುದೇ ತುಲನಾತ್ಮಕ ಅಧ್ಯಯನ. ದಾರಿ ಹಲವು, ಗುರಿ ಒಂದೇ ಎಂದು ಕೆಲವರ ವಾದ. "ಗುರಿಗೆ ಒಬ್ಬೊಬ್ಬರು ಒಂದೊಂದು ತರಹ ಲಕ್ಷಣ ಹೇಳುತ್ತಿರುವಾಗ ಗುರಿ ಒಂದೇ ಹೇಗಾಗುತ್ತದೆ ಅಲ್ಲವೇ? ಸಾಧಕ ಬಾಧಕಗಳ ವಿಚಾರ ಮಾಡಿ, ಬಾಧಕವಿಲ್ಲದೇ ಸಾಧಕ ಮಾತ್ರ ಇರುವ ದಾರಿಯನ್ನು ಹಿಡಿದು ನಿರ್ದುಃಖಾನಂದ ಭರಿತವಾದ ಗುರಿಯನ್ನು ತಲುಪಬೇಕು.

ಸ್ಥಳ ಪರಿಚಯ ಇಲ್ಲದ ಹೊಸ ಊರಿನಲ್ಲಿ ಕತ್ತಲೆಯಲ್ಲಿ ವಿಳಾಸ ಸರಿಯಾಗಿ ಗೊತ್ತಿಲ್ಲದೇ ಮನೆ ಹುಡುಕಿಕೊಂಡು ಹೋದಾಗ, ದಾರಿಯಲ್ಲಿ ನಾಯಿ ಅಟ್ಟಿಸಿಕೊಂಡು ಬಂದಾಗ, ಪಕ್ಕದ ಚರಂಡಿಯಲ್ಲಿ ಕಾಲಿಟ್ಟು ಬಿದ್ದು, ಹುಡುಕುತ್ತಿದ್ದ ಮನೆಯು ಸಿಗದೇ ಕಷ್ಟಕ್ಕೆ ಒಳಗಾಗಬೇಕಾಗುತ್ತದೆ. ಬೆಳಕಿನಲ್ಲಿ ಸರಿಯಾಗಿ ವಿಳಾಸ ತಿಳಿದುಕೊಂಡು ಹೋದರೆ ನೀವು ಹುಡುಕುತ್ತಿರುವ ಮನೆ ಸಿಗುತ್ತದೆ. ಇದರಂತೆ ಭಗವಂತನ ವಿಚಾರ ಸರಿಯಾಗಿ ತಿಳಿದುಕೊಳ್ಳದೇ ಹೋದರೆ ದುರ್ಗತಿ ಹೊಂದಬೇಕಾಗುತ್ತದೆ. ಆದ್ದರಿಂದ ಜಿಜ್ಞಾಸ ಸರಿಯಾಗಿ ಮಾಡಬೇಕಾದ್ದು ಕರ್ತವ್ಯವಷ್ಟೆ. ಇದರಿಂದಲೇ ಹಲವು ಮತಗಳ ತುಲನಾತ್ಮಕ ಅಧ್ಯಯನ ಮಾಡಿ ತಪ್ಪು ಮತ್ತು ಸರಿ ಹಾದಿ ಯಾವುದೆಂದು ಪ್ರಮಾಣ ಆಧಾರದ ಮೇಲೆ ನಿಶ್ಚಯ ಮಾಡುವುದು ಸಾತ್ವಿಕರ ಕರ್ತವ್ಯ. ಅದಕ್ಕೆ ಮತಗಳ ತುಲನಾತ್ಮಕ ಅಧ್ಯಯನ ಎಂಬ ಮುಂದಿನ ಪ್ರಕರಣದಲ್ಲಿ ತಿಳಿದುಕೊಳ್ಳಬಹುದು.

## ಖಂಡನ-ಮಂಡನ

ಖಂಡನ ಎಂದರೆ ಕೆಲವರಿಗೆ ಇದು ಮಾಡಬಾರದ ಕೆಲಸ ಅಂತ ತಿಳುವಳಿಕೆ ಇರುತ್ತದೆ. ಅದು ಸರಿಯಾದ ಅಭಿಪ್ರಾಯವಲ್ಲ. ಖಂಡನ ಎಂದರೆ ತಪ್ಪುಗಳನ್ನು ತೋರಿಸುವುದು ಎಂದು ಅಭಿಪ್ರಾಯ. ಆದರೆ ಇದರಲ್ಲಿ ಕೆಲವು ವಿಚಾರಗಳು ಇವೆ. ಆಕ್ಷೇಪ ಅಥವಾ ಆಕ್ಷೇಪಣೆಗಳಿಂದ ಖಂಡನೆ ಮಾಡಲು ಪ್ರಾರಂಭವಾಗುತ್ತದೆ. ಅಂದರೆ ನೀವು ಹೇಳುವುದು ಸರಿಯಲ್ಲ ಎಂಬ ಅಭಿಪ್ರಾಯ. ಇದಕ್ಕೆ ಪೂರ್ವಪಕ್ಷ ಎಂದು ಹೆಸರು. ಆಮೇಲೆ ಚರ್ಚೆ ಪ್ರಾರಂಭವಾಗುತ್ತದೆ. ಪೂರ್ವಪಕ್ಷದಲ್ಲಿರುವ ಭಾದಕ ದೋಷಗಳನ್ನು ಪ್ರಮಾಣಬದ್ಧವಾಗಿ ತೋರಿಸಿ, ಅದನ್ನು ತಪ್ಪು ಎಂದು ಸಾಧಿಸುವುದೇ ಖಂಡನೆ. ನಾವು ಹೇಳುವುದು ಸಾಧಕ ಸರಿಯಾಗಿದೆ ಎಂದು ಹೇಳುವುದಕ್ಕೆ ಮಂಡನ ಎಂದು ಹೆಸರು. ಇದರಲ್ಲಿ ತಪ್ಪೇನಿಲ್ಲವಷ್ಟೆ. ವಾದ ವಿವಾದ ಮಾಡುವ ಪಂಡಿತರಾಗಲೀ, ಕುಸ್ತಿ ಮಾಡುವ ಪೈಲ್ವಾನರುಗಳಾಗಲೀ, ಮದುವೆ ಮಾಡುವ ಬೀಗರಾಗಲೀ, ಸಮವಾದ ಮಟ್ಟದಲ್ಲಿರುವವರು ಆಗಿರಬೇಕು. ಒಬ್ಬರು ಹೆಚ್ಚಿಗೆ, ಮತ್ತೊಬ್ಬರು ಕಡಿಮೆಯಾದರೆ ಅದು ಶೋಭಿಸುವುದಿಲ್ಲ ಮತ್ತು ವ್ಯವಹಾರ ಸರಿಯಾಗಿ ಆಗುವುದಿಲ್ಲ. ಖಂಡನ-ಮಂಡನ ಇಲ್ಲದ ಜಗತ್ತೇ ಇಲ್ಲ. ವಾದ ವಿವಾದ ಮಾಡುವಾಗ ಇಬ್ಬರ ಪಕ್ಷವನ್ನು ಸರಿಯಾಗಿ ತಿಳಿದುಕೊಂಡ ಮೂರನೆಯ ಮಧ್ಯಸ್ಥ ಪುರುಷ ಇರಬೇಕು. ಇವರಿಗೆ 'ಪ್ರಾಷ್ನಿಕ' ಎಂದು ಹೆಸರು. ಇದು ಚರ್ಚೆಯ ನಿಯಮ.

**ಚರ್ಚೆಯಲ್ಲಿ ೩ ಪ್ರಕಾರಗಳಿವೆ.**

೧) **ವಾದ** - ಎಂದರೆ ಕೇವಲ ಸರಿಯಾದ ತತ್ವವಿಚಾರ ಮಾಡಿ ಅದರಲ್ಲಿ ಯಾವುದು ಸರಿಯೋ, ಅದನ್ನು ಒಪ್ಪಿಕೊಳ್ಳುವುದು. ಇದರಲ್ಲಿ ಯಾವುದೇ ವಿಧವಾದ ದ್ವೇಷ ಅಸೂಯೆಗಳಾಗಲೀ, ಪಕ್ಷಪಾತವಾಗಲೀ ಇರುವುದಿಲ್ಲ. ಯಾವುದು ಸರಿಯೋ, ಅದನ್ನು ಅಂಗೀಕರಿಸುವುದು.

೨) **ಜಲ್ಪ** - ಎಂದರೆ ಎದುರು ಪಕ್ಷವನ್ನು ಹೇಗಾದರೂ ಮಾಡಿ ನಿರುತ್ತರರನ್ನಾಗಿ ಮಾಡಿ, ಬಾಯಿಮುಚ್ಚುವಂತೆ ಮಾಡುವುದು. ಇದರಲ್ಲಿ ತತ್ವ ನಿಶ್ಚಯವಿಲ್ಲ. ಕೇವಲ ನಿರುತ್ತರರನ್ನಾಗಿ ಮಾಡುವುದೇ ಅಭಿಪ್ರಾಯ.

೩) **ವಿತಂಡ** - ಎಂದರೆ ಇದು ಒಂದು ತರಹ ತರ್ಕದಿಂದ ಮಾಡತಕ್ಕ ಚರ್ಚೆ. ಇದಕ್ಕೆ ಯಾವ ನಿಯಮವೂ ಇಲ್ಲ. ಮನಸ್ಸಿಗೆ ಬಂದಂತೆ ಮಾತಾಡಿ ಗೆಲ್ಲುವುದು.

ಸಾತ್ತ್ವಿಕರ ಪಕ್ಷದಿಂದ ಇಲ್ಲಿ ಖಂಡನೆ ಮಾಡಿದೆ. ಸಾತ್ವಿಕತನವು ಒಳಗಿನ ಜೀವನ ಧರ್ಮವೇ ಹೊರತು, ಮೇಲಿನ ಶರೀರದ ಧರ್ಮವಲ್ಲ. ಸಾತ್ವಿಕರು ಯಾವ ಜಾತಿ, ಧರ್ಮ, ಲಿಂಗಗಳಲ್ಲಿ ಬೇಕಾದರೂ ಈಗ ಇರಬಹುದು. ಆದರೆ ಎಂದಾದರೂ ಒಂದು ದಿನ ನಿರ್ದುಃಖಾನಂದಭರಿತವಾದ ಸುಖಸ್ವರೂಪದ ಶಾಶ್ವತಮೋಕ್ಷಕ್ಕೆ ಅರ್ಹರು. ಈ ತರಹ ಮೋಕ್ಷ ಸ್ವರೂಪವನ್ನು ತಿಳಿಸಿದವರು ಶ್ರೀಮನ್ಮಧ್ವಾಚಾರ್ಯರು ಒಬ್ಬರೇ ಹೊರತು, ಬೇರಾರೂ ಹೇಳಿಲ್ಲ. ಇಂತಹ ಮೋಕ್ಷ ಬೇಕಾದವರು ಶ್ರೀಮನ್ಮಧ್ವಾಚಾರ್ಯರನ್ನು ಅನುಸರಿಸಿ, ಅವರು ಹೇಳಿದ ಹಾಗೆ ಕೇಳಬೇಕು. ಹಾಗೆ ಮಾಡದಿದ್ದರೆ ಅವರು ಹೇಳುವ ಮೋಕ್ಷ ಹೇಗೆ ಸಿಗಲು ಸಾಧ್ಯ? ಎಲ್ಲಾ ಮತಗಳು ಯಾವಾಗಲೂ ಅನಾದಿಯಿಂದ ಇರುವುದೇ ಹೊರತು, ಹೊಸದಾಗಿ ಬಂದದ್ದಲ್ಲ, ಒಂದೊಂದು ಕಾಲದಲ್ಲಿ ಒಬ್ಬೊಬ್ಬರು ಹುಟ್ಟಿ ಅದನ್ನು ಪ್ರಚಾರ ಮಾಡುತ್ತಾರೆ. ಆಗ ಅದರ ಅನುಯಾಯಿಗಳು ಕೆಲವರು ಅದನ್ನು ಅನುಸರಿಸುತ್ತಾರೆ. ಆದ್ದರಿಂದ ಯಾವಾಗಲೂ ಭಿನ್ನ ಭಿನ್ನ ಮತಗಳು ಎಂದರೆ ಅಭಿಪ್ರಾಯಗಳು ಇರುವುದೇ ಸತ್ಯ ಎಂಬುದೇ ಶ್ರೀಮನ್ಮಧ್ವಾಚಾರ್ಯರ ಮತ. ಯಾವ ಮತಗಳೂ ಇರಬಾರದು ಎಂದಾಗಲೀ ಅಥವಾ ಎಲ್ಲರೂ ಮಧ್ವಮತಕ್ಕೇ ಬರಬೇಕು ಎಂದಾಗಲೀ ಅಭಿಪ್ರಾಯವಲ್ಲ. ಯಾರು ಯಾವ ಮತಕ್ಕೆ

ಬೇಕಾದರೂ ಹೋಗಬಹುದು. ಒಂದು ದೋಣಿಯಲ್ಲಿ ಒಂದು ಕಾಲು, ಇನ್ನೊಂದು ದೋಣಿಯಲ್ಲಿ ಇನ್ನೊಂದು ಕಾಲು ಇಟ್ಟು ಪ್ರಯಾಣ ಮಾಡಿದರೆ ದೋಣಿ ಮಗುಚಿ ನೀರಿನ ಪಾಲಾಗಬೇಕಾಗುತ್ತದೆ. ಆದ್ದರಿಂದ ಯಾವುದಾದರೂ ಒಂದು ದೋಣಿಯಲ್ಲಿ ಕುಳಿತುಕೊಂಡು ಹೋಗಬೇಕು. ಆದರೆ ಯಾವ ದೋಣಿಯಲ್ಲಿ ಕುಳಿತುಕೊಂಡರೆ ಎಲ್ಲಿಗೆ ಹೋಗುತ್ತದೆ ಎಂಬುದನ್ನು ಮೊದಲು ತಿಳಿದುಕೊಂಡು ನಾವು ಎಲ್ಲಿಗೆ ಹೋಗಬೇಕೋ ಆ ದೋಣಿಯಲ್ಲಿ ಕುಳಿತುಕೊಂಡು ಹೋದರೇ ನಮ್ಮ ಗುರಿ ತಲುಪುತ್ತೇವೆ. ಅದರಂತೆ ಎಲ್ಲಾ ಮತಗಳನ್ನು ತುಲನಾತ್ಮಕವಾಗಿ ಅಧ್ಯಯನ ಮಾಡಿ, ಶ್ರೀಹರಿಯೇ ಸರ್ವೋತ್ತಮ, ವಾಯವೇ ಜೀವೋತ್ತಮ, ಪಂಚಭೇದತಾರತಮ್ಯ ಜಗತ್ಸತ್ಯ ಎಂಬ ಅಭಿಪ್ರಾಯದಲ್ಲಿ ನಂಬಿಕೆ ದೃಢವಾಗಿ ಬಂದರೆ ಮತ್ತು ಇದರ ಜೊತೆಗೆ ಶ್ರೀಮನ್ಮಧ್ವಾಚಾರ್ಯರ ಮತಕ್ಕೆ ವಿರೋಧವಾದ ಮತಗಳ ತತ್ವಗಳು ಶಾಶ್ವತ ನಿರ್ದುಃಖಾನಂದಭರಿತವಾದ ಮೋಕ್ಷಕ್ಕೆ ದಾರಿಯನ್ನು ತೋರಿಸುವುದಿಲ್ಲ ಎಂದು ನಿಶ್ಚಯ ಮಾಡಿಕೊಂಡು ಇತ್ತ ಬರಬೇಕು. ಇದೂ ಸರಿ, ಅದೂ ಸರಿ ಎಂದು ಡೋಲಾಯಮನವಾದ ಮನಸ್ಸಿದ್ದರೆ ಅವರಿಗೆ ಇಲ್ಲಿ ಪ್ರವೇಶವಿಲ್ಲ. ಶ್ರೀಮನ್ಮಧ್ವಾಚಾರ್ಯರು ವರ್ಣಾಶ್ರಮ ಧರ್ಮಗಳನ್ನು ಹೇಳುವವರು, ಅನುಸರಿಸುವವರು, ಆದ್ದರಿಂದ ಇಲ್ಲಿ ಯಾರು ಬೇಕಾದರೂ ಇದನ್ನು ಒಪ್ಪಿಕೊಂಡು ಬರಬಹುದು. ಆದರೆ ಅವರಿಗೆ ವರ್ಣಾಶ್ರಮ ಧರ್ಮಕ್ಕೆ ಅನುಸರಿಸಿ, ಗೌರವ ಮಾಡಲಾಗುತ್ತದೆ. ಮಧ್ವಮತಕ್ಕೆ ಜನರ ಗುಂಪು ಬೇಕಿಲ್ಲ. ಕೇವಲ ಸಾತ್ವಿಕರು ಮಾತ್ರ ಬೇಕು.

## ಅನುವಾದ - ದ್ವೈತ ಮತ

**'ಬ್ರಹ್ಮಸತ್ಯಂ ಜಗತ್ಸತ್ಯಂ ಜೀವೋಬ್ರಹ್ಮೈವ ನ - ಅಪರಃ'** ಬ್ರಹ್ಮಸತ್ಯ - ಜಗತ್ಸತ್ಯ - ಜೀವನೇ ಬ್ರಹ್ಮನಲ್ಲ. ಅವನು ಬೇರೇನೇ ಎಂದು ಅಭಿಪ್ರಾಯ. ಈಶ-ಜೀವ-ಜಡ ಅನಾದಿ ನಿತ್ಯ ಪದಾರ್ಥಗಳು. ಈಶ ಸ್ವತಂತ್ರ, ಜೀವ-ಜಡಗಳು ಅಸ್ವತಂತ್ರಗಳು, ಈಶ್ವರನ ಅಧೀನವಾದವುಗಳು. ಜೀವ-ಈಶ ಭೇದ, ಜೀವ-ಜೀವ ಭೇದ, ಜೀವ-ಜಡ ಭೇದ, ಜಡ-ಜಡ ಭೇದ, ಜಡ-ಈಶ ಭೇದ - ಈ ಪಂಚಭೇದಗಳು ಸತ್ಯ. ಈಶನ ಲಕ್ಷಣ - ದುಃಖರಹಿತ, ಸುಖಪೂರ್ಣ, ಸರ್ವಜ್ಞ, ಸರ್ವದೋಷರಹಿತ, ಸರ್ವೋತ್ತಮ ಜಗತ್‌ಸೃಷ್ಟ್ಯಾದಿಕರ್ತ, ಇತ್ಯಾದಿಗಳು.

**ಜೀವನ ಲಕ್ಷಣ - ಸುಖದುಃಖಸಹಿತವಾದವು.**
**ಜಡದ ಲಕ್ಷಣ - ಸುಖದುಃಖರಹಿತವಾದದು.**

ಜೀವರಲ್ಲಿ ಮೂರು ಪ್ರಕಾರ ಉಂಟು. ಸಾತ್ತ್ವಿಕ ಜೀವರು- ಯಥಾರ್ಥ ಜ್ಞಾನವುಳ್ಳವರು, ನಿರ್ದುಃಖಾನಂದಭರಿತವಾದ ಶಾಶ್ವತ ಮೋಕ್ಷಕ್ಕೆ ಅರ್ಹರು; ರಾಜಸ ಜೀವರು - ಸಂಶಯ ಜ್ಞಾನವುಳ್ಳವರು, ಸುಖದುಃಖಮಿಶ್ರವಾದ ನಿತ್ಯಸಂಸಾರವೇ ಇವರಿಗೆ ಮೋಕ್ಷ ; ತಾಮಸ ಜೀವರು - ಅಯಥಾರ್ಥಜ್ಞಾನವುಳ್ಳವರು. ಒಳ್ಳೆಯದನ್ನು ದ್ವೇಷ ಮಾಡುವವರು. ಇವರಿಗೆ ಕೇವಲ ದುಃಖಭರಿತವಾದ ಶಾಶ್ವತ ನರಕ.

ಜೀವರು ಅವರ ಸ್ವಭಾವವು ಅಭಿನ್ನವಾದುದು. ಆದುದರಿಂದ ತಾಮಸರನ್ನು ಸಾತ್ವಿಕರನ್ನಾಗಿ ಆಗಲಿ, ಸಾತ್ವಿಕರನ್ನು ತಾಮಸರನ್ನಾಗಲೀ ಮಾಡಲಾಗುವುದಿಲ್ಲ. ಉದಾ : ಉಪ್ಪಿನಲ್ಲಿ ಕ್ಷಾರಗುಣವು, ಸಕ್ಕರೆಯಲ್ಲಿ ಸಿಹಿ ಗುಣವು, ಬೇವಿನಕಾಯಿಯಲ್ಲಿ ಕಹಿಯು, ಹುಣಿಸೆಹಣ್ಣಿನಲ್ಲಿ ಹುಳಿಯು ಇದ್ದಂತೆ ಅದು ಅದರಿಂದ ಅಭಿನ್ನವಾದುದು.

ಪ್ರಮಾಣಗಳು : ಋಗ್-ಯಜು-ಸಾಮ-ಅಥರ್ವಣ - ನಾಲ್ಕು ವೇದಗಳು, ಮೂಲ ರಾಮಾಯಣ, ಮಹಾಭಾರತ, ಇತಿಹಾಸಗಳು, ಪಂಚರಾತ್ರಾಗಮ, ಇವು ಪ್ರಮಾಣ ಮೂಲಗಳು.

ಈ ಕೆಳಕಂಡ ಮತಗಳ ಪೂರ್ವಪಕ್ಷ ಅನುವಾದಗಳು ತುಲನಾತ್ಮಕ ಪಟ್ಟಿಯಲ್ಲಿ ತೋರಿಸಿದೆ. ಇಲ್ಲಿ ಕೇವಲ ಖಂಡನ-ಮಂಡನವನ್ನು ಮಾತ್ರ ಹೇಳಿದೆ

## ಚಾರ್ವಾಕ ಮತ (ನಾಸ್ತಿಕ ಮತ)

ಚಾರ್ವಾಕ್ ಎಂದರೆ - ನಯವಾದ ಮಾತುಳ್ಳವರು ಎಂದರ್ಥ. ಆದರೆ ಇದು ಪ್ರಿಯವಾಗಿದೆಯೇ ಹೊರತು, ಹಿತವಾಗಿಲ್ಲ. ಸೋಮಾರಿಗಳಿಗೆ ಪ್ರಾತಃಕಾಲದಲ್ಲಿ ಇನ್ನೂ ಏಳಬೇಡಿ, ಮಲಗಿ, ಈಗಲೇ ಏಕೆ ಏಳುತ್ತೀರಿ ಎಂದು ಹೇಳುವುದು ಪ್ರಿಯವೇ ಹೊರತು ಹಿತವಲ್ಲ. ಎಂದರೆ ಅವರಿಗೆ ಒಳ್ಳೆಯದನ್ನು ಬಯಸುವಂಥದ್ದಲ್ಲ. ಇಂದ್ರಿಯಗಳಿಗೆ ಗೋಚರವಾಗದಿರುವ ದೇವರು ಪಾಪ-ಪುಣ್ಯ, ಸ್ವರ್ಗ-ನರಕ ಯಾವುದೂ ಇಲ್ಲ. ಇವೆಲ್ಲವೂ ಅತೀಂದ್ರಿಯಗಳಾದ್ದರಿಂದ ಇಂದ್ರಿಯ ಗೋಚರವಾಗುವುದಿಲ್ಲ. ಆದ್ದರಿಂದ ಇವುಗಳನ್ನು ನಂಬಬೇಕಾಗಿಲ್ಲ. ಜೀವ-ದೇಹ ಒಂದೇ, ಬೇರೆ ಅಲ್ಲ. ಅದು ಸ್ವಾಭಾವಿಕವಾಗಿ ಹುಟ್ಟುತ್ತದೆ. ಸತ್ತುಹೋದ ಮೇಲೆ ಜೀವವು ಸತ್ತುಹೋಗುತ್ತದೆ. ಆದ್ದರಿಂದ ಬದುಕಿರುವಾಗಲೇ ಸಾಲ ಮಾಡಿ ತುಪ್ಪ ತಿಂದು ಸುಖಪಡುವುದೇ ಮುಖ್ಯವಾದ ಅಭಿಪ್ರಾಯ. ಬೇರೆ ಮೋಕ್ಷವೆಂಬುದೇ ಇಲ್ಲ.

ಸತ್ತಮೇಲೆ ಪ್ರಾಣಿಯ ಶರೀರದಲ್ಲಿ ವ್ಯತ್ಯಾಸ ಕಂಡುಬರುತ್ತದೆ, ಯಾವುದೋ ಒಂದು ವಸ್ತು ದೇಹದಿಂದ ಹೊರಗೆ ಹೋಗಿದೆ ಎಂದು ಅನುಭವವಾಗುತ್ತದೆ. ಕಣ್ಣಿಗೆ ಕಾಣಿಸದಿರುವ ಕೆಲವು ಸೂಕ್ಷ್ಮ ಪದಾರ್ಥಗಳು ಸೂಕ್ಷ್ಮದರ್ಶಕ ಯಂತ್ರದಲ್ಲಿ ನೋಡಿದಾಗ ನಮಗೆ ಕಾಣಿಸುತ್ತದೆ. ಆದ್ದರಿಂದ ಇಂದ್ರಿಯ ಗೋಚರವಾಗದಿರುವ ಮಾತ್ರಕ್ಕೆ ಅದನ್ನು ಇಲ್ಲವೆಂದು ಹೇಳಲು ಸಾಧ್ಯವಿಲ್ಲ. ಹುತ್ತ ಎಂದರೆ ಹುತ್ತದಲ್ಲಿ ಹಾವು ಇರುತ್ತದೆಂದು ಸಾಮಾನ್ಯ ನಿಯಮ. ಹಾವು ಇರಬಹುದು ಅಥವಾ ಇಲ್ಲದಿರಬಹುದು. ಹಾವು ಇಲ್ಲದಿದ್ದರೆ ನಮಗೆ ಭಯವಿಲ್ಲ, ಇದ್ದರೇ ನಮಗೆ ಕಚ್ಚುತ್ತದೆ, ಹಾವು ಇರಲಿ ಅಥವಾ ಇಲ್ಲದಿರಲಿ ಹುತ್ತದಿಂದ ದೂರವಾಗುವುದು ಕ್ಷೇಮ. ಇದರಂತೆ ಅತೀಂದ್ರಿಯವಾದ ದೇವರು ಪುಣ್ಯ-ಪಾಪ, ಸ್ವರ್ಗ-ನರಕ ಇದೆ ಎಂತಲೂ ಅಥವಾ ಇಲ್ಲವೆಂತಲೂ ತರ್ಕದಿಂದ ಸ್ಥಾಪನೆ ಮಾಡಲು ಬರುತ್ತದೆ. ಹಾಗೆಂದ ಮಾತ್ರಕ್ಕೆ ಅದು ಇರುವುದಾಗಲೀ ಅಥವಾ ಇಲ್ಲದಿರುವುದಾಗಲೀ ಬದಲಾಯಿಸಲು ಸಾಧ್ಯವಿಲ್ಲ. ಆದ್ದರಿಂದ ಮನಸ್ಸಿಗೆ ಬಂದಂತೆ ನಡೆದುಕೊಂಡು ಹೋದರೆ ಪ್ರಬಲರು, ದುರ್ಬಲರನ್ನು ನಾಶಮಾಡಿ ಪರಸ್ಪರ ಹಿಂಸೆಗಳನ್ನು ಮಾಡಿಕೊಂಡು ಜಗತ್ತಿಗೆ ಅಶಾಂತಿ ತರುತ್ತಾರೆ. ಆದ್ದರಿಂದ ದೇವರು ಪುಣ್ಯ-ಪಾಪ ಇದೆ ಎಂದು ತಿಳಿದುಕೊಂಡು ಹೋಗುವುದೇ ಕ್ಷೇಮ. ಒಂದು ವೇಳೆ ಅತೀಂದ್ರಿಯವಾದ ವಿಚಾರಗಳು ಇಲ್ಲದಿದ್ದರೂ ಸಹ ನಾವು ಸರಿಯಾಗಿ ಬಾಳಿದರೆ ಅದರಿಂದ ನಷ್ಟವೇನೂ ಇಲ್ಲ. ಅಕಸ್ಮಾತ್ ಅತೀಂದ್ರಿಯವಾದ ದೇವರು ಪಾಪ-ಪುಣ್ಯ, ಸ್ವರ್ಗ-ನರಕ ಇವುಗಳು ಇದ್ದುಬಿಟ್ಟರೆ ಆಗ ನಾವು ತಪ್ಪಿತಸ್ಥರಾಗಿ ಶಿಕ್ಷೆಗೆ ಗುರಿಯಾಗಬೇಕಾಗುತ್ತದೆ. ಆದುದರಿಂದ ಅತೀಂದ್ರಯವಾದ ವಿಚಾರಗಳು ಸತ್ಯವಾದದ್ದು ಎಂದು ನಂಬಿಕೊಂಡು ಬಾಳಬೇಕು. ದೇವರೇ ಇಲ್ಲವೆಂದು ಹೇಳುವ ಮೇಲಿನ ಕಾರಣಗಳಿಂದ ನಿರ್ದುಃಖಾನಂದಭರಿತವಾದ ಶಾಶ್ವತಸುಖ ಈ ಮತದಲ್ಲಿ ಇಲ್ಲವಾದ್ದರಿಂದ ಸಾಧಕರಾದ ಸಾತ್ವಿಕರಿಗೆ ಈ ಮತವು ತ್ಯಾಗ ಮಾಡಬೇಕಾದದ್ದು ಸರಿಯಷ್ಟೆ.

## ಬೌದ್ಧಮತ

ವೇದಗಳಲ್ಲಿ ಹೇಳುವುದೆಲ್ಲಾ ನಡೆಯುವುದಿಲ್ಲವಾದ್ದರಿಂದ ವೇದ ಅಪ್ರಮಾಣ ಎಂದು ಪೂರ್ವಪಕ್ಷ. ವೇದಸತ್ಯ, ಅದಕ್ಕೆ ಅಧಿಕಾರಿ ಬೇಕು ಎಂದು ಶ್ರೀಮನ್ಮಧ್ವಾಚಾರ್ಯರು ಪ್ರತ್ಯಕ್ಷವಾಗಿ ತೋರಿಸಿದ್ದಾರೆ. ಆದ್ದರಿಂದ ವೇದ ಪ್ರಮಾಣವೆಂದು ಸಾಧಿಸಿದಂತಾಯಿತು. ಶೂನ್ಯ ತತ್ವ ಎಂದರೆ ಯಾವ ಧರ್ಮಗಳು ಗುಣ, ಕಾರ್ಯಗಳು ಇಲ್ಲದೇ ಇರುವುದು ಎಂದು ಅಭಿಪ್ರಾಯ. ಇದನ್ನು ಬಿಟ್ಟು ಬೇರೆ ಯಾವುದು ಎರಡನೇ ವಸ್ತು ಇಲ್ಲವೆಂದು ಹೇಳಿ, ಸಂವೃತಿ ಎಂಬುದು ಇದೆ ಎಂದರೆ,

ವ್ಯಾಹತವಾಯಿತು. ತಾನು ಹೇಳುವ ವಾಕ್ಯಕ್ಕೇ ತಾನೇ ವಿರುದ್ಧ ಅಭಿಪ್ರಾಯ ಹೇಳಿದಂತಾಯಿತು. ಆದ್ದರಿಂದ ಇದು ದೋಷವಾಗುತ್ತದೆ. ಶೂನ್ಯ ಬಿಟ್ಟು ಬೇರೆ ಏನೂ ಇಲ್ಲವೆಂದು ಹೇಳಿ, ಈಗ ಸಂವೃತಿ ಎಂಬುದು ಇದೆ ಎಂದು ಹೇಳಿದ ಮೇಲೆ ಶೂನ್ಯವನ್ನು ಬಿಟ್ಟು ಇನ್ನೊಂದು ವಸ್ತು ಬಂದಂತಾಯಿತು. ಇದರಿಂದ ಅವರು ಹೇಳುವ ವಾಕ್ಯಕ್ಕೇ ವಿರೋಧವಾಯಿತು. ಈ ಶೂನ್ಯಕ್ಕೆ ಸಂವೃತಿಯ ಸಂಪರ್ಕದಿಂದ ಜೀವ, ಜಡ ಎಂದು ಎರಡು ಭಾಗ ಆಗುತ್ತದೆ. ಆದರೆ ಇದು ಕಾಲ್ಪನಿಕ ಎಂದರೆ ಸುಳ್ಳು. ಇದು ಇದ್ದಹಾಗೆ ಕಾಣುತ್ತದೆ ಎಂದು ಅಭಿಪ್ರಾಯ ಮತ್ತು ಇದು ಕ್ಷಣಿಕ. ಈಗ ಇದ್ದು ಮರು ಕ್ಷಣದಲ್ಲಿ ಇರುವುದಿಲ್ಲ ಎಂದು ಆಯಿತು. ಪರಲೋಕವೇ ಇಲ್ಲವಾದ್ದರಿಂದ ಪರಲೋಕದ ಸಾಧನೆ ಬೇಕಾಗಿಲ್ಲ. ಎಂದರೆ ಶೂನ್ಯದಿಂದ ಹುಟ್ಟಿ ಇಲ್ಲದಂತೆ ತೋರಿಕೊಂಡು ಪುನಃ ಶೂನ್ಯದಲ್ಲಿ ಲಯವಾಗುವುದು. ಇದೇ ಕೊನೆಯ ಘಟ್ಟ. ಇದರಿಂದ ಏನು ಮಾಡಿದಂತಾಯಿತು. ಇದು ಇಂದ್ರಜಾಲ ವಿದ್ಯೆಯಂತಾಯಿತು. ದೇವರೇ ಇಲ್ಲವಾದುದು ಮತ್ತು ನಿರ್ದುಃಖಾನಂದ ಭರಿತವಾದ ಶಾಶ್ವತಮೋಕ್ಷ ಈ ಮತದಲ್ಲಿಲ್ಲವಾದ್ದರಿಂದ ಸಾಧಕರಾದ ಸಾತ್ವಿಕರಿಂದ ತ್ಯಾಗಮಾಡಬೇಕಾದದ್ದು ಸರಿಯಷ್ಟೆ.

## ಜೈನ ಮತ

ಅಪೌರುಷೇಯವಾದ ವೇದ ಪ್ರಮಾಣವಲ್ಲ, ಜಿನವಾಕ್ಯವೇ ಪ್ರಮಾಣ, ಎಂದು ಪೂರ್ವಪಕ್ಷ. ವೇದವು ಪುರುಷಕೃತವಲ್ಲವಾದ್ದರಿಂದ ಇದು ನಿರ್ದೋಷವೆಂದು ಹೇಳಿದಂತಾಯಿತು. ಪೌರುಷೇಯ ಗ್ರಂಥಗಳು ಪುರುಷನ ಗುಣದೋಷಗಳ ಭಾವದಿಂದ ಕೂಡಿರುವುದರಿಂದ ದೋಷಯುಕ್ತವಾಗಿರುತ್ತದೆ. ಆದ್ದರಿಂದ ಅಪೌರುಷೇಯವಾದ ವೇದದಂತೆ ಪ್ರಮಾಣವಾಗುವುದಿಲ್ಲ. ಚೇತನ ಮತ್ತು ಅಚೇತನ ಬೇಧವು ಒಪ್ಪಿದರೂ ಸಹ ಚೇತನ ಚೇತನರಲ್ಲಿ ಪ್ರತ್ಯಕ್ಷವಾಗಿ ಅನುಭವವಾಗುತ್ತಿರುವ ಅವಾಂತರ ಭೇದಗಳನ್ನು ಒಪ್ಪುವುದಿಲ್ಲವೆಂದರೆ ಸತ್ಯಕ್ಕೆ ದೂರವಾಗುತ್ತದೆ. ಅಥವಾ ಹಠ ಎಂದು ಹೇಳಬೇಕಾಗುತ್ತದೆ. ಜಗತ್ತಿನ ಸೃಷ್ಟಿ ಸ್ಥಿತಿ, ಲಯಗಳು ಸ್ವಾಭಾವಿಕವಾದ್ದರಿಂದ ಅದಕ್ಕಾಗಿ ಈಶ್ವರನ ಅವಶ್ಯಕತೆ ಇಲ್ಲವಾದ್ದರಿಂದ ಈಶ್ವರನು ಬೇಕಿಲ್ಲವೆಂದು ಹೇಳಿದ ಮೇಲೆ ದೇವರು ಇಲ್ಲವೆಂದು ಹೇಳಿದಂತಾಯಿತು. ಜಗತ್ತು ಜಡವಾದ್ದರಿಂದ ಅದಕ್ಕೆ ಸ್ವತಃ ಪ್ರವೃತ್ತಿ ಇಲ್ಲವಾದ್ದರಿಂದ ಚೇತನ ಸಂಬಂಧವಾಗದ ಹೊರತು ಏನೂ ಮಾಡಲಾರದು. ಆದ್ದರಿಂದ ಚೇತನನ ಅವಶ್ಯಕತೆ ಖಂಡಿತ ಇದೆ. ಚಿತ್ರವಿಚಿತ್ರಗಳಿಂದ ಕೂಡಿದ ಈ ಜಗತ್ತನ್ನು ಸೃಷ್ಟಿಸಬೇಕಾದರೆ ಸಾಮಾನ್ಯ ಚೇತನನಿಗೆ ಸಾಧ್ಯವಿಲ್ಲ. ಆದ್ದರಿಂದ ಸರ್ವಜ್ಞನು, ಸರ್ವಶಕ್ತನು, ದೋಷರಹಿತನೂ ಆದ ಪರಮ ಚೇತನನ ಅವಶ್ಯಕತೆ ಬೇಕೇಬೇಕು. ಜೀವನು ಸಂಸಾರದಿಂದ ಬಿಡುಗಡೆಮಾಡಿಕೊಳ್ಳಲು ತಾನೇ ಸಮರ್ಥನಾದ್ದರಿಂದ ಈಶ್ವರನ ಕೃಪೆ ಬೇಕಿಲ್ಲ ಎಂದು ಪೂರ್ವಪಕ್ಷ. ಇದಕ್ಕೆ ಇವರು ಕೊಡುವ ದೃಷ್ಟಾಂತ ಹೀಗಿದೆ. ಕುರುಡನ ಮೇಲೆ ಕುಂಟ ಕುಳಿತುಕೊಂಡು, ಕುರುಡನಿಗೆ ದಾರಿ ಹೇಳತ್ತಾ ಕುರುಡ ನಡೆದುಕೊಂಡು ಬೇರೆ ಊರಿಗೆ ಹೋದರು. ಆದರೆ ಇದರಲ್ಲಿ ವಿಚಾರವಿದೆ. ಕುರುಡನಿಗೆ ಕಾಣಿಸುವುದಿಲ್ಲವಾದ್ದರಿಂದ ಅವನು ನಿಸ್ಸಹಾಯಕನಾಗಿ ಜಾಗ ಬಿಟ್ಟುಹೋಗುವಂತಿಲ್ಲ, ಕುಂಟನು ನಡೆಯಲು ಸ್ವತಃ ಸಮರ್ಥನಲ್ಲವಾದ್ದರಿಂದ ಅವನು ನಿಸ್ಸಹಾಯಕನಾಗಿ ಸಂಚಾರ ಮಾಡಲಾರ. 'ಕುರುಡೋಪರಿ ಕುಂಟೋತ್ಸವ' ಅಂದರೆ ಕುಂಟೋತ್ಸವ ಮಾಡಿ ಊರಿಗೆ ಹೋಗುವಂತೆ ಮಾಡಬಹುದು ಎಂದು ಹೇಳಿದಂತಾಯಿತು. ಆದರೆ ಕುಂಟ, ಕುರುಡರಿಂದ ಭಿನ್ನನಾದ ಇನ್ನೊಬ್ಬ ಸಮರ್ಥನಾದ ಪುರುಷನು ಇವರಿಬ್ಬರನ್ನು ಒಟ್ಟಿಗೆ ಸೇರಿಸಿ ಕುರುಡನ ಮೇಲೆ ಕುಂಟನನ್ನು ಕೂಡಿಸಿ ಮುಂದಕ್ಕೆ ಹೋಗಿರಿ ಎಂದು ಹೇಳಬಹುದು. ಆದ್ದರಿಂದ ಕುಂಟ-ಕುರುಡರ ಸಮ್ಮೇಳನ ಮಾಡುವುದಕ್ಕೆ ಇನ್ನೊಬ್ಬ ಪುರುಷ ಬೇಕೆಬೇಕು. ಅದರಂತೆ ಜಡ-ಜೀವರಿಂದ ಮಿಳಿತವಾದ ಈ ಜಗತ್ತು ಸೃಷ್ಟಿಯಾಗಬೇಕಾದರೆ ಸರ್ವಸಮರ್ಥನಾದ ಈಶ್ವರನ ಸಹಾಯಬೇಕು. ಈಶ್ವರನ ಕೃಪೆ ಅತ್ಯಾವಶ್ಯಕ, ಎಂದು ಸ್ಥಾಪಿತವಾಯಿತು. ಅಹಿಂಸೆಯೇ ಸಾಧನೆ ಎಂದು ಪೂರ್ವಪಕ್ಷ. 'ಜೀವೋಜೀವಸ್ಯ ಜೀವನಂ' ಎಂದರೆ ಒಂದು ಜೀವದ ದೇಹ ಇನ್ನೊಂದು ಜೀವಕ್ಕೆ ಜೀವನೋಪಾಯವಾದ ಆಹಾರವಾಗಿದೆ. ಅಂದರೆ

ಜೀವ ಹತ್ಯೆ ಮಾಡಿ ಹಿಂಸೆ ಮಾಡುವುದು ವಿಧಿ ನಿಯಮ. ಊಟ ಮಾಡುವುದು ಕೂಡ ಹಿಂಸೆಯೇ ಆಯಿತು. ಜೀವ ಇಲ್ಲದ ವಸ್ತುವನ್ನು ತಿಂದುಬದುಕುವಂತೆ ಮಾಡಿಲ್ಲ. ಆದ್ದರಿಂದ ಅಹಿಂಸೆ ಎಂಬುದು ಎಲ್ಲಿ ಇದೆ? ಅಕ್ಕಿ ಇಲಿಗೆ ಆಹಾರವಾದರೆ. ಅಂತಹ ಇಲಿ ಬೆಕ್ಕಿಗೆ ಆಹಾರವಾಗಿದೆ. ಇದರಿಂದ ಇಲಿಗೆ ಹಿಂಸೆಯಾಯಿತು. ಹಾಗೆಯೇ ಧಾನ್ಯ ಪದಾರ್ಥಗಳು, ತರಕಾರಿಗಳು, ಎಲ್ಲದರಲ್ಲೂ ಸಹ ಜೀವ ಇದ್ದೇ ಇದೆ. ಅದನ್ನು ಹೆಚ್ಚಿ ಬೇಯಿಸಿ, ಕರೆದು, ಹುರಿದು, ಮಾಡುವುದೆಲ್ಲವೂ ಹಿಂಸೆಯೇ. ಅದಕ್ಕೆ ಬರುವ ದೋಷ ಪರಿಹಾರಕ್ಕಾಗಿಯೇ ವೈಶ್ವದೇವ ಎಂಬ ಸಂಸ್ಕಾರ ಇಟ್ಟಿದ್ದಾರೆ. ಇದರಿಂದ ಆ ದೋಷಪರಿಹಾರವಾಗುತ್ತದೆ. ವೈದೀ ಹಿಂಸೆಯು ಎಂದರೆ ವೇದೋಕ್ತವಾದ ಯಜ್ಞಯಾಗಾದಿಗಳು, ಭೋಜನಾದಿಗಳು ಪಾಪಸಾಧನವಲ್ಲ ಎಂದು ಶಾಸ್ತ್ರಗಳು ಸಿದ್ಧಮಾಡಿದೆ. ಆದ್ದರಿಂದ ಸಜ್ಜನರಿಗೆ ಹಿಂಸೆಯಾಗದಿರುವುದೇ ಅಹಿಂಸೆ. ದೇವರ ಕೃಪೆ ಬೇಕಿಲ್ಲ, ಜೀವನೇ ಸ್ವತಂತ್ರ ಎಂಬುದಾಗಿಯೂ, ಮೋಕ್ಷ ಎಂದರೆ ಸಂತತ ಊರ್ಧ್ವಗಮನ ಎಂದರೆ ನಿರಂತರವಾಗಿ ವಿಶ್ರಾಂತಿ ಇಲ್ಲದೇ ಮೇಲಕ್ಕೆ ಸಂಚಾರಮಾಡುತ್ತಲೇ ಇರುವುದು. ಅಂದರೆ ಕೊನೆ ಇಲ್ಲವಾದ್ದರಿಂದ ಅನವಸ್ತಾದೋಷ ಬರುತ್ತದೆ. ದೇವರೇ ಬೇಕಿಲ್ಲವೆಂದ ಈ ಮತದಲ್ಲಿ ನಿರ್ದುಃಖಾನಂದಭರಿತವಾದ ಶಾಶ್ವತ ಸುಖಪ್ರಾಪ್ತಿ ಇಲ್ಲವಾದ್ದರಿಂದ ಸಾಧಕರಾದ ಸಾತ್ವಿಕರಿಗೆ ಈ ಮತವು ಅನುಸರಿಸಲು ಯೋಗ್ಯವಲ್ಲ. ಆದ್ದರಿಂದ ತ್ಯಾಗಮಾಡಲೇಬೇಕು ಎಂಬುದು ನಿಶ್ಚಿತ.

## ನೈಯಾಯಿಕ ಮತ್ತು ವೈಶೇಷಿಕ ಮತ

ಎರಡು ಮತಗಳ ತತ್ವಗಳೂ ಹೊಂದಿಕೊಂಡಿದೆ, ಈಶ್ವರನು ಇದ್ದಾನೆ, ಅವನಿಂದ ಹೇಳಲ್ಪಟ್ಟ ಶಬ್ದವು ಮಾತ್ರ ಪ್ರಮಾಣ. ಅಂದರೆ ವೇದ ಪ್ರಮಾಣವೆಂದಾಯಿತು. ದೇವರು ನಾನು ವೇದ ಮಾಡಿದ್ದೇನೆ ಎಂದು ಹೇಳಲಿಲ್ಲ, ನನಗೆ ಗೊತ್ತಿದೆ ಎಂದು ಹೇಳಿದ್ದಾರೆ (ಭಗವದ್ಗೀತಾಪ್ರಮಾಣ). ಆದ್ದರಿಂದ ಪೌರುಷೇಯವಾಕ್ಯ ಪ್ರಮಾಣವಲ್ಲ, ಅಪೌರುಷೇಯವಾದ ವೇದವೇ ಪ್ರಮಾಣ ಎಂದು ಸ್ಥಾಪಿತವಾಯಿತು. ಜಗತ್ತಿನ ಸೃಷ್ಟಿ, ಸ್ಥಿತಿ ಲಯಗಳಿಗೆ, ಅವನು ನಿಮಿತ್ತಕಾರಣನಾದರೂ ಅವನಿಗೆ ಶರೀರವಿಲ್ಲ (ಆಕಾರವಿಲ್ಲ) ಎಂದು ಹೇಳಿದರೆ ದೇವರು ಇಲ್ಲವೆಂದೇ ಹೇಳಿದಂತಾಯಿತು. ಜೀವರು ಅನಂತರಾದ್ದರಿಂದ ಐಕ್ಯವು ಅಸಂಭವ ಎಂದು ಹೇಳಿ ಪ್ರತ್ಯಕ್ಷವಾಗಿ ಕಾಣುತ್ತಿರುವ ತಾರತಮ್ಯ ಒಪ್ಪುವುದಿಲ್ಲ ಮತ್ತು ರಾಗದ್ವೇಷಗಳನ್ನು ಬಿಡುವುದೇ ಸಾಧನ. ಸುಖ, ದುಃಖ ರಹಿತವಾದುದೇ ಮೋಕ್ಷ ಎಂದು ಇವರ ಅಭಿಪ್ರಾಯವಾಯಿತು. ಇದು ನಿರ್ಜೀವವಾದ ಜಡದ ಲಕ್ಷಣ, ದೇವರಿಗೆ ಆಕಾರವಿಲ್ಲವೆಂದರೆ ಹೇಳುವುದರಿಂದ ಮತ್ತು ನಿರ್ದುಃಖಾನಂದಭರಿತವಾದ ಶಾಶ್ವತ ಮೋಕ್ಷವು ಇಲ್ಲಿ ಇಲ್ಲವಾದ್ದರಿಂದ ಈ ಮತವು ಸಾತ್ವಿಕರಾದ ಸಾಧಕರಿಂದ ತ್ಯಾಗ ಮಾಡಬೇಕಾದದ್ದೇ ಸರಿ.

## ನಿರೀಶ್ವರ ಸಾಂಖ್ಯ ಮತ

ಅಪೌರುಷೇಯವಾದ ವೇದ ಸ್ವತಃ ಪ್ರಮಾಣ ಎಂದು ಒಪ್ಪಿ, ವೇದ ಪ್ರತಿಪಾದ್ಯನಾದ ಈಶ್ವರನೇ ಇಲ್ಲ ಎಂದರೆ ವ್ಯಾಹತವಾಗುತ್ತದೆ. ತನ್ನ ಮಾತಿಗೆ ತಾನೇ ವಿರೋಧ ಹೇಳಿದಂತಾಯಿತು. ಆದ್ದರಿಂದ ಇದು ಶ್ರುತ ಪರಿತ್ಯಾಗವಾಯಿತು ಎಂದರೆ ನಂಬಲಾಗುವುದಿಲ್ಲ, ಎಂದು ಹೇಳಿದಂತಾಯಿತು. ಪರ್ಯಾಯವಾಗಿ ವೇದ ಅಪ್ರಮಾಣ ದೇವರೇ ಇಲ್ಲವೆಂದು ಹೇಳಿದಂದಾಯಿತು. ಚೇತನ ಮತ್ತು ಅಚೇತನ ಭೇದ ಒಪ್ಪಿದರೂ ಸಹ ಚೇತನ ಸಹಾಯವಿಲ್ಲದೇ ಪ್ರಕೃತಿಯು ತಾನೇ ಜಗತ್ತಾಗಿ ಪರಿಣಾಮವಾಗಲು ಸ್ವತಂತ್ರವು ಎಂದು ಪೂರ್ವಪಕ್ಷ. ಅಂದರೆ ಕುಂಬಾರನಿಲ್ಲದೇ ಮಣ್ಣು ತಾನೇ ಗಡಿಗೆಯಾಯಿತು. ಅಥವಾ ಹಾಲು ಹೆಪ್ಪಾಕುವವರು ಇಲ್ಲದೇ ತಾನೇ ಮೊಸರಾಯಿತು ಎಂದರೆ ತಾನೇ ಪರಿಣಾಮಿ ಎಂದು ಹೇಳಿದಂತಾಯಿತು. ಅಂದರೆ ಜಗತ್ತಿನ ಸೃಷ್ಟಿ, ಸ್ಥಿತಿ ಲಯಗಳಿಗೆ ಈಶ್ವರ ಬೇಕಿಲ್ಲವೆಂದಾಯಿತು. ಸ್ವತಃ ಪ್ರವೃತ್ತಿ ಇಲ್ಲದ ಜಡ ಪ್ರಕೃತಿಯು, ಈಶ್ವರನ ಸಹಾಯವಿಲ್ಲದೇ ತಾನೇ ಪರಿಣಾಮಿ ಎಂದು ಹೇಳಿದಂತಾಯಿತು. ಇದಕ್ಕೆ ಪರಿಣಾಮವಾದವೆಂದು ಹೆಸರು. ಸಾತ್ವಿಕ ಸ್ವಭಾವ ಬೆಳೆಸಿಕೊಂಡರೂ ಸುಖದುಃಖಗಳನ್ನು ಕಳೆದುಕೊಳ್ಳುವುದೇ ಮೋಕ್ಷ ಎಂದು ಹೇಳಿದಂತಾಯಿತು.

ಇಂತಹ ಮೋಕ್ಷ ಯಾರಿಂದಲೂ ಅಪೇಕ್ಷಣೀಯವಲ್ಲ ಅಲ್ಲವೇ? ದೇವರೇ ಇಲ್ಲವೆಂಬ ಮೇಲಿನ ಕಾರಣಗಳಿಂದ, ನಿರ್ದುಃಖಾನಂದ ಭರಿತವಾದ ಶಾಶ್ವತ ಸುಖ ಇಲ್ಲಿ ಇಲ್ಲವಾದ್ದರಿಂದ ಸಾತ್ವಿಕರಿಗೆ ಈ ಮತವು ತ್ಯಾಜ್ಯವಾದುದು.

## ಸೇಶ್ವರ ಸಾಂಖ್ಯಮತ

ಬ್ರಹ್ಮನು ಗುಣಾತೀತ ಶೃತಿ ಸಿದ್ಧ - ಅಜ್ಞಾನವಿಲ್ಲ, ಪಾಪ-ಪುಣ್ಯ ನಿರ್ಲೇಪನಾಗಿರುವನು. ಯೋಗ ಶಾಸ್ತ್ರವೇ ಪ್ರಮಾಣ. ನಿರೀಶ್ವರ ಸಾಂಖ್ಯ ಮತ್ತು ಸೇಶ್ವರ ಸಾಂಖ್ಯ ಮತದಲ್ಲಿ ಎಲ್ಲಾ ಒಂದೇ ತರಹದ ಅಭಿಪ್ರಾಯವು ಇದ್ದರೂ ಸಹ ಸ್ವಲ್ಪ ಭೇದವಿದೆ. ಜೀವ ಬ್ರಹ್ಮ ಭೇದ ಒಪ್ಪುತ್ತಾನೆ. ಈಶ್ವರರನ್ನು ಒಪ್ಪಿದರೂ ಸಹ, ಜಡ ಪ್ರಕೃತಿಯು ಜಗತ್ತಾಗಿ ಪರಿಣಾಮವಾಗಲು ಈಶ್ವರನ ಸಹಾಯವು ಬೇಕು, ಎಂದು ಹೇಳುತ್ತಾನೆ. ಇದರಿಂದ ಜಡ ಪ್ರಕೃತಿಯು ಪ್ರಧಾನ - ಈಶ್ವರ ಅಪ್ರಧಾನವಾಯಿತು. ಒಟ್ಟಿನಲ್ಲಿ ಜಡವೇ ತಾನೇ ಪರಿಣಾಮವಾಗಲು ಈಶ್ವರನ ಅನುಗ್ರಹ ಒಪ್ಪಿದಂತಾಯಿತು. ಆದರೆ ಜಡವೇ ಪ್ರಧಾನ ಈಶ್ವರ ಸುಮ್ಮನೆ ಇರಲಿ ಎಂದು ಹೇಳಿದಂತಾಯಿತು. ಇದು ಸರಿಯಲ್ಲ. ಬಟ್ಟೆ, ನೂಲು, ಮಗ್ಗ, ಇವು ಜಡವಾದರೂ ಸಹ ಬಟ್ಟೆ ನೇಕಾರನ ಇಷ್ಟದಂತೆ ಬಟ್ಟೆ ಸೃಷ್ಟಿಯಾಗುತ್ತದೆ. ಅದರಂತೆ ಸೃಷ್ಟಿ, ಸ್ಥಿತಿ, ಲಯಗಳು ಈಶ್ವರನ ಅಧೀನದಲ್ಲೇ ನಡೆಯುತ್ತದೆ. ಆದ್ದರಿಂದ ಸ್ವತಃ ಪ್ರವೃತ್ತಿ ಇಲ್ಲದ ಜಡವು ಸ್ವತಂತ್ರವಾದ ಈಶ್ವರನ ಅಧೀನದಲ್ಲಿ ನಡೆಯುತ್ತಿದ್ದರೂ ಸಹ ಈಶ್ವರ ಸುಮ್ಮನೆ ಇದ್ದರೆ ಇರಲಿ, ಅವನ ಸಹಾಯ ಮುಖ್ಯವಲ್ಲ ಎಂದು ಹೇಳುವುದು. ಕರ್ಮಾಭಿಲಾಷೆಯ ತ್ಯಾಗ ಮಾಡುವುದೇ ಸಾಧನ, ಚಿತ್ತವೃತ್ತಿಯಿಂದ ಇರುವುದೇ ಮೋಕ್ಷ ಎಂದು ಹೇಳಿರುವುದರಿಂದ, ಇವು ವೇದಕ್ಕೆ ಸಮ್ಮತವಲ್ಲವಾದ್ದರಿಂದ ನಿರ್ದುಃಖಾನಂದ ಭರಿತವಾದ ಶಾಶ್ವತ ಸುಖ ಈ ಮತದಲ್ಲಿ ಇಲ್ಲವಾದ್ದರಿಂದ ಸಾಧಕರಾದ ಸಾತ್ವಿಕರಿಗೆ ಈ ಮತ ತ್ಯಾಗ ಮಾಡಬೇಕಾದುದೇ ಸರಿ.

## ಪೂರ್ವಮೀಮಾಂಸ

ಇದರಲ್ಲಿ ಜೈಮಿನೀ, ಪ್ರಭಾಕರ, (ಕುಮಾರಿಲಾಭಟ್ಟ), ಭಾಟ್ಟಶಾಸ್ತ್ರವೆಂದು ಮೂರು ಒಳ ಪ್ರಬೇಧಗಳಿವೆ. ವೇದಗಳು ಪೌರುಷೇಯ ಪರತಃ ಪ್ರಮಾಣ. ವೇದವನ್ನು ಪ್ರಮಾಣವೆಂದು ಒಪ್ಪಿ ಈಶ್ವರನನ್ನು ಒಪ್ಪುವುದಿಲ್ಲವೆಂದು ಹೇಳಿದರೆ ನೀವು ಬಹಳ ದೊಡ್ಡವರು ಸರಿ, ಆದರೆ ನಿಮ್ಮ ಮಾತು ನಂಬಲಾಗುವುದಿಲ್ಲ ಎಂದು ಹೇಳಿದಂತಾಯಿತು. ಇದರಿಂದ ವೇದವನ್ನು ಒಪ್ಪುವುದಿಲ್ಲವೆಂದು ಹೇಳಿದಂತಾಯಿತು. ಆತ್ಮನು ಮಾನಸ ಪ್ರತ್ಯಕ್ಷನಲ್ಲ, ಸಂಸಾರದಲ್ಲಿ ಜೀವ ಬ್ರಹ್ಮರಿಗೆ ಭೇದ ಅಂದರೆ ಮೋಕ್ಷದಲ್ಲಿ ಭೇದವಿಲ್ಲವೆಂದಾಯಿತು. ಇದು ಶಾಸ್ತ್ರಕ್ಕೆ ಸಮ್ಮತವಲ್ಲ. ಕರ್ಮಾಚರಣೆಯೇ ಸಾಧನ ಎಂದರೆ ಇದು ದೇವರಿಗೆ ಸಮ್ಮತವಾಗಲಾರದು, ಪ್ರೀತ್ಯರ್ಥವಾಗಲಾರದು. ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಈಶ್ವರ ಬೇಕಿಲ್ಲವೆಂದರೆ ಇದು ಪರಿಣಾಮವಾದವಾಯಿತು. ಇದು ಸರಿಯಲ್ಲವೆಂದು ಹಿಂದೆ ಖಂಡಿಸಿದೆ. ಸ್ವರ್ಗದಿಂದ ಬೇರೆ ಮೋಕ್ಷ ಒಪ್ಪುವುದಿಲ್ಲ. ಸ್ವರ್ಗವು ಕೇವಲ ದುಃಖವಿಲ್ಲದ ಸುಖ ಮಾತ್ರ ಇರುವ ಜಾಗವಲ್ಲ ಮತ್ತು ಇದು ಅಶಾಶ್ವತವಾದುದು. ಪುನಃ ಭೂಲೋಕಕ್ಕೆ ಬರಬೇಕಾಗುತ್ತದೆ. ಆದ್ದರಿಂದ ಸ್ವರ್ಗದ ಮೇಲೆ ಮೋಕ್ಷ ಸ್ಥಾನವಿಲ್ಲವೆಂದು ಹೇಳಿದಂತಾಯಿತು. ಮೇಲಿನ ಕಾರಣಗಳಿಂದ ನಿರ್ದುಃಖಾನಂದಭರಿತವಾದ ಶಾಶ್ವತ ಸುಖ ಈ ಮತದಲ್ಲಿ ಇಲ್ಲವಾದ್ದರಿಂದ ಸಾಧಕರಾದ ಸಾತ್ವಿಕರು ಇದನ್ನು ತ್ಯಾಗ ಮಾಡಬೇಕಾದದ್ದು ಸರಿ.

## ಶೈವ (ಪಾಶುಪತ, ಶೈವ, ಪ್ರತ್ಯಭಿಜ್ಞ ರಸೇಶ್ವರ)

ವೇದ ಅಪ್ರಮಾಣ, ಶಿವಾಗಮಗಳು ಪ್ರಮಾಣ - ಶೈವಾಗಮಗಳು ಪೌರುಷೇಯವಾದ್ದರಿಂದ ಅಪೌರುಷೇಯವಾದ ವೇದದಂತೆ ಪ್ರಮಾಣವಲ್ಲ. ಮಹಾದೇವನಾದ ಶಿವನು ಸರ್ವೋತ್ತಮ, ಸ್ವತಂತ್ರ,

ಸರ್ವಕರ್ತ ಎಂದರೆ ವಿಷ್ಣುವಿನ ವಿವಕ್ಷದಿಂದ ಶಿವನು ದೋಷವುಳ್ಳವನಾದ್ದರಿಂದ ಜಗತ್ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾಗಲಾರನು. ಭಸ್ಮಸ್ನಾನ, ಭಸ್ಮಧಾರಣ, ಶಯನಾದಿಯೋಗಗಳು, ಜಪ ಧ್ಯಾನಗಳೇ ಸಾಧನ. ಹಾಲಿನಲ್ಲಿ ಹಾಲು ಸೇರುವಂತೆ ಶಿವನಲ್ಲಿ ಐಕ್ಯವಾಗುವುದೇ ಮೋಕ್ಷ. ಜೀವ ಶಿವನಿಂದ ಭಿನ್ನನಲ್ಲ. ಶಿವನ ಭಾಗವೇ ಎಂದು ಅಭಿಪ್ರಾಯವಾಯಿತು. 'ಶಿವೋಹಂ' ಹೇಳಿದಂತಾಯಿತು. ಜೀವ ಬ್ರಹ್ಮರಿಗೆ ಅಬೇಧ ಹೇಳುವುದು ವೇದ ಶಾಸ್ತ್ರಗಳ ವಿರುದ್ಧವಾಯಿತು. ನಿರ್ದುಃಖಾನಂದ ಭರಿತವಾದ ಶಾಶ್ವತ ಸುಖ ಈ ಮತದಲ್ಲಿಲ್ಲವಾದ್ದರಿಂದ ಸಾಧಕರಾದ ಸಾತ್ವಿಕರಿಗೆ ಈ ಮತ ತ್ಯಾಗ ಮಾಡಬೇಕಾದದ್ದೇ ಸರಿ.

## ಅದ್ವೈತ ಮತ

**'ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥ ಕೋಟಿಭಿಃ ಬ್ರಹ್ಮಸತ್ಯಂ ಜಗನ್ಮಿಥ್ಯ ಜೀವೋಬ್ರಹ್ಮೈವ ನಾಪರಃ'** ಕೋಟಿ ಶ್ಲೋಕಗಳಲ್ಲಿ ಹೇಳಿದ ಅರ್ಥವನ್ನು ಅರ್ಧ ಶ್ಲೋಕದಲ್ಲಿ ಹೇಳುತ್ತಿದ್ದೇನೆ. - 'ಬ್ರಹ್ಮಸತ್ಯ, ಜಗತ್ ಸುಳ್ಳು, ಜೀವನೇ ಬ್ರಹ್ಮನು ಬೇರೆಯಲ್ಲ', ವೇದಗಳಲ್ಲಿ ಪಂಚಮಹಾವಾಕ್ಯಗಳು ಮಾತ್ರ ಪ್ರಮಾಣ, ಉಳಿದವು ಪ್ರಮಾಣಗಳಲ್ಲ 'ಅಹಂ ಬ್ರಹ್ಮಾಸ್ಮಿ' - ತತ್ವಮಸಿ, - 'ನೇಹ ನಾನಾಸ್ತಿ ಕಿಂಚನ-ಸರ್ವಂಖಲ್ವಿದಂ ಬ್ರಹ್ಮ'. ಯಾವ ಪದಕ್ಕೆ ಅರ್ಥ ಮಾಡುತ್ತೇವೋ ಅದರ ಹಿಂದೆ ಮುಂದೆ ಇರುವ ಪದವನ್ನು ನೋಡಿ ಅರ್ಥ ಮಾಡಬೇಕು ಇಲ್ಲದಿದ್ದರೆ ಅನರ್ಥವಾಗುತ್ತದೆ. ಸ್ವಾರ್ಥಕ್ಕಾಗಿ ಪದಾರ್ಥಕ್ಕೆ (ಪದದ ಅರ್ಥಕ್ಕೆ) ಅರ್ಥಾಂತರ ಮಾಡಿದರೆ ಅನ್ವರ್ಥವಾಗದೇ, ಅನರ್ಥವಾಗಿ ಸ್ವಾರ್ಥ ಸಿದ್ಧವಾಗದೇ ಪದಾರ್ಥಕ್ಕೆ ಅಪಾರ್ಥವಾಗುತ್ತದೆ.

ಅಹಂ ಬ್ರಹ್ಮಾಸ್ಮಿ - ನಾನು ಬ್ರಹ್ಮನಾಗಿದ್ದೇನೆ ಎಂಬ ಆಡುವ ಮಾತಿನ ಅರ್ಥ ನಾನೇ ಬ್ರಹ್ಮನಾಗಿದ್ದೇನೆ ಎಂದು ಅವರು ಅರ್ಥಮಾಡಿಕೊಳ್ಳುತ್ತಾರೆ. ಆದರೆ ಅದು 'ನಾನು ಬ್ರಹ್ಮನಾಗಿದ್ದೇನೆ' ಎಂದು ದೇವರು ಹೇಳಿಕೊಂಡದ್ದು, ಇದು ಜೀವರಿಗೆ ಹೇಗೆ ಅನ್ವಯಿಸುತ್ತದೆ? ಆದ್ದರಿಂದ ಇವರ ಅರ್ಥ ಸರಿಯಲ್ಲ. 'ತತ್ ತ್ವಂ ಅಸಿ' - ಅದು ನೀನು ಆಗಿದ್ದೀಯೇ? ಎಂದು ಅದರ ಅರ್ಥ ಎಂದರೆ ಬ್ರಹ್ಮನೇ ನೀನು ಆಗಿದ್ದೀಯೇ ಎಂದು ಅರ್ಥ ಮಾಡುತ್ತಾರೆ, ಆದರೆ 'ತತ್' ಎಂಬ ಶಬ್ದವು ತಂ ಅದನ್ನು, ತೇನ ಅದರಿಂದ, ತಸ್ಮೈ ಅದಕ್ಕೋಸ್ಕರ, ತಸ್ಮಾತ್ ಅದರ ದೆಸೆಯಿಂದ, ತಸ್ಯ ಅದರ, ತಸ್ಮಿನ್ ಅದರಲ್ಲಿ ಎಂದು ಏಳು ವಿಭಕ್ತಿಗಳಲ್ಲೂ ನಡೆಸುವುದಕ್ಕೆ ಬರುವಾಗ ಪ್ರಥಮಾ ವಿಭಕ್ತಿಯಲ್ಲೇ ಏಕೆ ಅರ್ಥ ಮಾಡಬೇಕು? ಬೇರೆ ವಿಭಕ್ತಿಗಳಲ್ಲಿ ಅರ್ಥ ಮಾಡಿದಾಗ ಜೀವ ಬ್ರಹ್ಮರಿಗೆ ಬೇಧ ಸ್ಥಾಪನೆಯಾಗುತ್ತದೆ. ಆದ್ದರಿಂದ ಇವರು ಮಾಡುವ ಅರ್ಥ ಸರಿಯಲ್ಲ.

'ನೇಹ ನಾನಾಸ್ತಿ ಕಿಂಚನ' ಎಂದರೆ 'ನ ಇಹ ನಾನಾ ಅಸ್ತಿ ಕಿಂಚನ' ಅದನ್ನು ಬಿಟ್ಟು ಎರಡನೆಯದೇ ಇಲ್ಲ ಎಂದು ಅವರು ಮಾಡುವ ಅರ್ಥ. ಬ್ರಹ್ಮನಿಗೆ ಸದೃಶವಾದ ಎರಡನೇ ವಸ್ತು ಯಾವುದು ಇಲ್ಲವೆಂಬುದು ಸರಿಯಾದ ಅರ್ಥ. ಇದರಿಂದ ಜೀವ ಬ್ರಹ್ಮರಿಗೆ ಭೇದ ಸ್ಥಾಪನೆಯಾಯಿತು. 'ಸರ್ವಂ ಖಲ್ವಿದಂ ಬ್ರಹ್ಮ' ಎಂದರೆ 'ಸರ್ವಂ ಖಲು ಇದಂ ಬ್ರಹ್ಮ' ಎಂದರೆ ಎಲ್ಲವೂ ಬ್ರಹ್ಮನೇ ಆಗಿದೆ ಅಂದರೆ ಅಖಂಡ. ಬೇರೆ ಏನೂ ಇಲ್ಲ ಎಂದು ತಿಳಿದುಕೊಳ್ಳುತ್ತಾರೆ. ಆದರೆ ಜಗತ್ತೆಲ್ಲವೂ ಬ್ರಹ್ಮನ ಅಧೀನವಾಗಿರುವುದರಿಂದ ಅದನ್ನು ಬ್ರಹ್ಮ ಎಂದು ಕೂಗುತ್ತಾರೆ. ಆದ್ದರಿಂದ ಜಗತ್ತೆಲ್ಲವೂ ಬ್ರಹ್ಮನೇ ಅಲ್ಲ, ಎಲ್ಲವೂ ಅವನ ಅಧೀನ. ಇದರಿಂದ ಜಡ ಮತ್ತು ಬ್ರಹ್ಮನ ಭೇದ ಸ್ಥಾಪನೆಯಾಯಿತು. ಉದಾ : ಮೊಸರು ಮಾರುವವಳು, ಮೊಸರು ಮೊಸರು ಎಂದು ಕೂಗಿಕೊಂಡು ಹೋಗುತ್ತಿರುತ್ತಾಳೆ, ಅವಳನ್ನು ಮೊಸರಮ್ಮ ಎಂದು ಕೂಗಿದರೆ ಅವಳೇ ಮೊಸರಾಗುತ್ತಾಳೇನು? ಮೊಸರು ಅವಳ ಅಧೀನವಾದ್ದರಿಂದ ಅವಳನ್ನು ಮೊಸರು ಎಂದು ಕೂಗುತ್ತೇವೆ. ಇದು ಸರಿಯಷ್ಟೇ. ಇದರಂತೇ ಎಲ್ಲವೂ ಬ್ರಹ್ಮವೆಂಬುವುದು

"ಏಕಮೇವಾದ್ವಿತೀಯಂ ಬ್ರಹ್ಮ" - ಇದು ಹಿಂದಿನಂತೆಯೇ ದೇವರು ಒಬ್ಬನೇ ಇರುವವನು, ಬೇರೆ ಏನೂ ಇಲ್ಲ ಎಂದು ಅವರ ಅರ್ಥ. ದೇವರಿಗೆ ಸಮಾನವಾದ ಎರಡನೇ ವಸ್ತು ಇಲ್ಲವೆಂಬುದು ಸರಿಯಾದ ಅರ್ಥ.

'ಯತೋವಾಚೋ ನಿವರ್ತಂತೇ ಅಪ್ರಾಪ್ಯ ಮನಸಾಸಃ' ಬ್ರಹ್ಮನನ್ನು ನೋಡಲು ಹೋದಾಗ ಅವನಲ್ಲಿ ಏನೂ ಇರಲಿಲ್ಲ, ಆದ್ದರಿಂದ ವಾಪಸ್ ಬಂದವು ಎಂದು ಅವರ ಅರ್ಥ. ಆದರೆ ಬ್ರಹ್ಮನನ್ನು ನೋಡಲು ಹೋದಾಗ ಅವನನ್ನು ಪೂರ್ಣವಾಗಿ ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ, ಆದ್ದರಿಂದ ವಾಪಸ್ಸು ಬಂದವು ಎಂದು ಸರಿಯಾದ ಅರ್ಥ.

"ಯತ್ರ ದ್ವೈತಂ ಇವ ಭವತಿ ತತ್ತ ಅದ್ವೈತಂ ಪರಮಾರ್ಥತಃ" - ಎಲ್ಲಿ ಭೇದಗಳು ಅಂತ ಕಂಡುಬರುತ್ತದೇ ಅಲ್ಲಿ ಅಭೇದವೆಂದೇ ಮುಖ್ಯವಾದ ಅರ್ಥ ಎಂದು ಅವರ ಅಭಿಪ್ರಾಯ. ಎಲ್ಲಿ ಭೇದವೆಂದು ಬರುತ್ತದೋ ಅಲ್ಲಿರುವ ಅಂತರ್ಯಾಮಿಯಾದ ಭಗವಂತನೇ ಅದ್ವೈತ. ಎಂದರೆ ಭಗವಂತನಿಗೆ ಸಮಾನವಾದ ಎರಡನೇ ವಸ್ತು ಇಲ್ಲದವನು ಎಂದು ಸರಿಯಾದ ಅರ್ಥ.

'ಬ್ರಹ್ಮಸತ್ಯ ಜಗತ್ ಮಿಥ್ಯ' ಜೀವಬ್ರಹ್ಮರಿಗೆ ಬೇಧವಿಲ್ಲ ಎಂಬುದು ಅವರ ತತ್ತ್ವ. ಬ್ರಹ್ಮನು ನಿರಾಕಾರಿ, ನಿರಯವಯಿ, ನಿರ್ಗುಣಿ, ನಿಷ್ಕ್ರಿಯಿ, ನಿರ್ಧಮಿಕ ಎಂದು ಹೇಳುತ್ತಾರೆ. ಅಂದರೆ ಯಾವ ವಿಶೇಷಣಗಳು ಗುಣವೂ ಇಲ್ಲವಾದ್ದರಿಂದ ನಿರ್ವಿಶೇಷನಾದನು. ಅವನ ಬಗ್ಗೆ ಏನಾದರೂ ಹೇಳೋಣವೆಂದರೆ ಅನಿರ್ವಾಚ್ಯ ಎಂದರೆ ಹೇಳಲು ಬಾರದವನು ಎಂದು ಅಭಿಪ್ರಾಯವಾಯಿತು. ಇದು ಬುದ್ಧನ ಶೂನ್ಯ ತತ್ವವನ್ನೇ ಅಂಗೀಕರಿಸಿ ಅದಕ್ಕೆ ಶೂನ್ಯ ಎಂದು ಹೆಸರು ಹೇಳುವ ಬದಲು ಬ್ರಹ್ಮ ಎಂಬ ವೈದಿಕ ಪದವನ್ನು ಹೇಳಿಕೊಂಡಂತಾಯಿತು. ಬೌದ್ಧನು ವೇದ ಅಪ್ರಮಾಣ ಎಂದು ಖಚಿತವಾಗಿ ಹೇಳಿದನು. ಅದರೆ ವೇದ ಪ್ರಮಾಣ ಎಂದು ಬಾಯಲ್ಲಿ ಹೇಳಿ, ಅದು ಸುಳ್ಳುಹೇಳುತ್ತದೆ ಎಂದ ಮೇಲೆ ತಾನು ಸಹ ಬೌದ್ಧನಂತೆ ವೇದ ಅಪ್ರಮಾಣ ಎಂದು ಹೇಳಿದಂತಾಯಿತು. ಇದು ಭಾರಿ ಮೋಸ, ಯೋಚಿಸಿನೋಡಿ. ಪಂಚಮಹಾವಾಕ್ಯಗಳನ್ನು ಮಾತ್ರ ನಿಜ ಹೇಳುವ ವೇದವು, ಬಾಕಿಯದನ್ನು ಸುಳ್ಳು ಹೇಳುತ್ತದೆ ಎಂದು ಇವರ ಅಭಿಪ್ರಾಯ. ಇಲ್ಲಿ ಹೆಚ್ಚಿಗೆ ಸುಳ್ಳನ್ನು ಹೇಳುವ ವೇದವು, ಪಂಚವಾಕ್ಯಗಳನ್ನು ಮಾತ್ರ ನಿಜ ಹೇಳಲು ಹೇಗೆ ಸಾಧ್ಯ? ಆದ್ದರಿಂದ ಆ ಐದು ವಾಕ್ಯಗಳು ಸುಳ್ಳೇ ಆಗಬೇಕು. ಒಟ್ಟಿನಲ್ಲಿ ವೇದ ಹೇಳುವುದೆಲ್ಲ ಸುಳ್ಳು. ಭೌದ್ಧನು ವೇದ ಸುಳ್ಳು ಎಂದು ನೇರವಾಗಿ ಹೇಳಿ ಸಾಚಾ ಆದ. ಅವನಿಗೆ ಪ್ರಕಟಬೌದ್ಧ ಎಂದು ಹೆಸರು. ಆದರೆ ಮಾಯಾವಾದಿಯು ವೇದವನ್ನು ಪ್ರಮಾಣ ಎಂದು ಒಪ್ಪುತ್ತೇನೆ ಎಂದು ಹೇಳಿ, ಆದರೆ ವೇದ ಸುಳ್ಳು ಹೇಳುತ್ತದೆ ಎಂದು ಹೇಳಿದರೆ ಈ ಮಾತಿಗೆ ಹೇಗೆ ಬೆಲೆ ಕೊಡಲು ಸಾಧ್ಯ? ಅದಕ್ಕೆ ಮಾಯಾವಾದಿಯನ್ನು ಪ್ರಚ್ಛನ್ನ ಬೌದ್ಧ ಎಂದು ಕರೆದರು.

ಬ್ರಹ್ಮನನ್ನು ಬಿಟ್ಟು ಬೇರೆ ಏನೂ ಇಲ್ಲ ಎಂದು ಹೇಳಿ ಅವಿದ್ಯಾ ಎಂಬ ಅಜ್ಞಾನ ಬ್ರಹ್ಮನಿಗೆ ಬಂದು, ಅಜ್ಞಾನದಿಂದ, ಜೀವ ಜಡ ಎಂಬ ಜಗತ್ತಾಗಿ ಪರಿಣಮಿಸಿದನು. ಇದೆಲ್ಲವೂ ವ್ಯಾವಹಾರಿಕ ಸತ್ಯ. ಎಂದರೆ ಸುಳ್ಳಾಗಿರುವ ಸತ್ಯ. ಮಂಕುಬೂದಿಯಂತೆ ಇಲ್ಲದ್ದು ಕಾಣಿಸುತ್ತದೆ ಎಂದು ಹೇಳಿದಂತಾಯಿತು. ಇಲ್ಲಿ ವಿಚಾರವಿದೆ - ಬ್ರಹ್ಮನನ್ನು ಬಿಟ್ಟು ಬೇರೆ ಏನೂ ಇಲ್ಲ ಎಂದು ಹೇಳಿದ ಮೇಲೆ, ಅಜ್ಞಾನ ಎಂಬುದು ಬಂದು ಬ್ರಹ್ಮನಿಗೆ ಆವರಿಸಿತು, ಅಂದರೆ ಬ್ರಹ್ಮ ಒಂದು, ಎರಡನೆಯದು ಅಜ್ಞಾನ. ಎಂದು ಎರಡು ಭಾಗವಾಯಿತು. ಇದರಿಂದ ಬ್ರಹ್ಮನನ್ನು ಬಿಟ್ಟು ಬೇರೆ ಏನೂ ಇಲ್ಲ ಎಂದು ತಾನೇ ಹೇಳುವ ವಾದಕ್ಕೆ ತಾವೇ ವಿರೋಧವನ್ನು ಹೇಳಿಕೊಂಡಂತಾಯಿತು. ಇದಕ್ಕೆ ವ್ಯಾಹತ ಎಂದು ಹೇಳುತ್ತಾರೆ. ಎಂದರೆ ನಾನು ಮೂಕನಾಗಿದ್ದೇನೆ ಎಂದು ಹೇಳಿಕೊಂಡಂತೆ. ಮೂಕನಾದ ಮೇಲೆ ಮಾತನಾಡುವುದು ಹೇಗೆ ಸಾಧ್ಯ? ಅಂದರೆ ಕಾರ್ಯಕ್ಕೂ, ಹೇಳುವ ವಾಕ್ಯಕ್ಕೂ ವಿರೋಧವಾಯಿತು. ಇದರಂತೆ ಬ್ರಹ್ಮ ಒಂದೇ ಇರುವುದು. ಬೇರೆ ಏನೂ ಇಲ್ಲ ಎಂದು ಹೇಳಿ - ಬ್ರಹ್ಮ, ಅಜ್ಞಾನ ಎಂದು ೨ ಹೇಳಿದ್ದರಿಂದ ಅದ್ವೈತ ಹಾನಿಯಾಯಿತು. ಬ್ರಹ್ಮನಿಗೆ ನಿರ್ಗುಣತ್ವ ಹೇಳಿ

ಅಜ್ಞಾನ ಬಂತು ಎಂದು ಹೇಳಿದರೆ - ಅಜ್ಞಾನ ಎಂಬುದು ಒಂದು ಗುಣವಾಯಿತು. ಇದರಿಂದ ನಿರ್ಗುಣಿಯಾದ ಬ್ರಹ್ಮನಿಗೆ ಅಜ್ಞಾನವೆಂಬ ಗುಣಧರ್ಮ ಬಂದಿದ್ದರಿಂದ ನಿರ್ಗುಣ ಎಂದು ಹೇಳಿದ ತತ್ವಕ್ಕೆ ವಿರೋಧವಾಗಿ ಯಥಾಪ್ರಕಾರ ಹೇಳಿದವನಿಗೆ ಬುದ್ಧಿಸರಿಯಿಲ್ಲ ಎಂದು ಅರ್ಥವಾಯಿತು. ಇದರಿಂದ ತಾನು ಹೇಳುವ ಮಾತಿಗೆ ತನ್ನ ಮಾತೇ ವಿರೋಧವಾದ್ದರಿಂದ ಇವರ ಅಭಿಪ್ರಾಯ ಸರಿಯಾದುದಲ್ಲ. ಅಂದರೆ ಈ ಮತದಲ್ಲಿ ಬ್ರಹ್ಮನಿಗೆ ಅಜ್ಞಾನ ಬರುವ ಸಾಧ್ಯವಿಲ್ಲವಾದ್ದರಿಂದ ಈ ಮತವು ಖಂಡನೀಯವಾದುದು. ಏನೂ ಇಲ್ಲದ್ದರಿಂದ ಬಂದು - ಪುನಃ ಏನೂ ಇಲ್ಲದಂತಾಗುವುದಕ್ಕೆ - ಏನೇನೋ ಏಕೆ ಮಾಡಬೇಕು. ವ್ಯರ್ಥವಾದ ಕೆಲಸವಾಗುತ್ತದೆ. ಆದ್ದರಿಂದ ಎಲ್ಲಾ ಇಂದ್ರಜಾಲ ವಿದ್ಯೆಯಂತೆ ಆಯಿತು ಮತ್ತು ಸದ್ಗತಿಯಿಲ್ಲದಂತಾಯಿತು. ಮೇಲಿನ ಕಾರಣಗಳಿಂದ ನಿರ್ದುಃಖಾನಂದ ಭರಿತವಾದ ಶಾಶ್ವತ ಸುಖ ಈ ಮತದಲ್ಲಿ ಇಲ್ಲವಾದ್ದರಿಂದ ಇದನ್ನು ಸಾಧಕರಾದ ಸಾತ್ವಿಕರಿಂದ ತ್ಯಾಗ ಮಾಡತಕ್ಕದ್ದೇ ಸರಿ.

## ವಿಶಿಷ್ಟಾದ್ವೈತ

ವೇದ ಪ್ರಮಾಣ ಒಪ್ಪುತ್ತಾರೆ - ದೇವರು ನಿರ್ಗುಣನಲ್ಲ ಜ್ಞಾನಾನಂದಮಯ, ನಿರ್ದೋಷಿ, ಜಗತ್ ಸೃಷ್ಟಿಕರ್ತ, ಜಗತ್ತಿನ ಸೃಷ್ಟ್ಯಾದಿಗಳು ಅವನ ಲೀಲಾ ಅಂದರೆ ಆಟವಾಯಿತು. ದೇವರ ಭಾಗವೇ ಜೀವ ಜಡಗಳು ಎಂದರೆ ಜೀವ+ಜಡ=ದೇವರು, ಪರಮಚೇತನ ಬೇರೇ ಇಲ್ಲ ಎಂದು ಹೇಳಿದಂತಾಯಿತು. ವಿಶೇಷ್ಯ, ವಿಶೇಷಣಗಳು ಸೇರಿದ್ದೇ ವಿಶಿಷ್ಟವಾಗುತ್ತದೆ. ಅಂದರೆ ಜೀವ, ಜಡಗಳು ವಿಶೇಷಣ, ವಿಶೇಷ್ಯಗಳು ಇವೆರಡು ಸೇರಿದ್ದೇ (ಅದೇ ಬ್ರಹ್ಮ) ವಿಶಿಷ್ಟವಾಯಿತು. ಕೈ, ಕಾಲು, ಮುಂತಾದವುಗಳೆಲ್ಲಾ ಅಂಗಗಳು ಇವೆಲ್ಲಾ ಸೇರಿದ್ದೇ ದೇಹವೆಂಬ ಅಂಗಿ. ಇಲ್ಲಿ ಸಂಸಾರದಲ್ಲಿ ಮಾತ್ರ ಭೇದ, ಮೋಕ್ಷದಲ್ಲಿ ಒಂದೇ ಅಂದರೆ, ಜೀವ ಬ್ರಹ್ಮರಿಗೆ, ಸಾಮ್ಯ ಹೇಳಿದಂತಾಯಿತು. ಜೀವರಲ್ಲಿ ಬದ್ಧರು ಮತ್ತು ಮುಕ್ತರು ಎಂದು ಎರಡು ಭಾಗ - ಗರುಡಶೇಷರು ಮುಕ್ತರು ಸಂಸಾರಕ್ಕೆ ಬಾರದೆ ಹಾಗೆಯೇ ಮುಕ್ತಿಗೆ ಹೋಗುತ್ತಾರೆ. ಬದ್ಧರು ಸಂಸಾರಕ್ಕೆ ಬಂದು ಸಾಧನ ಮಾಡಿ ಮೋಕ್ಷಕ್ಕೆ ಹೋಗಬೇಕು. ನಿತ್ಯಮುಕ್ತರಾದ ಲಕ್ಷ್ಮೀನಾರಾಯಣರನ್ನು ಬಿಟ್ಟು ಉಳಿದವರೆಲ್ಲರೂ ಬದ್ಧರೇ ಆಗಿರುವಾಗ ಗರುಡ ಶೇಷರು ಮಾತ್ರ ಹೇಗೆ ಮುಕ್ತರಾಗುತ್ತಾರೆ. ಜೀವರಲ್ಲಿ ತ್ರೈವಿಧ್ಯ ಮತ್ತು ತಾರತಮ್ಯಗಳು ಪ್ರತ್ಯಕ್ಷ ಅನುಭವ ಆಗುತ್ತಿದ್ದರೂ ಸಹ ಇದನ್ನು ಒಪ್ಪುವುದಿಲ್ಲವೆಂದರೆ ಸರಿಯೇ ಯೋಚಿಸಿ. ಅಂದರೆ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದವರು, ಹೊಂದದೇ ಇರುವವರು ಇಬ್ಬರಿಗೂ ಭೇದವಿಲ್ಲ ಎಂದು ಅರ್ಥವಾಗುತ್ತದೆ. ಅಥವಾ ದಡ್ಡನಿಗೂ, ಬುದ್ಧಿವಂತನಿಗೂ ಭೇದವಿಲ್ಲ ವೆಂದರೆ ಅದನ್ನು ಹೇಗೆ ಒಪ್ಪಲು ಸಾಧ್ಯ?

ಎಲ್ಲಾ ಪ್ರಾಣಿಗಳು ಬದುಕಬೇಕಾದರೆ ಅತಿ ಮುಖ್ಯವಾದ ಉಸಿರಾಟಕ್ಕೆ ಬೇಕಾದುದು ಗಾಳಿ, ಇದಕ್ಕೆ ಯಜಮಾನರಾದ ವಾಯರೂಪಿಯಾದ ಮುಖ್ಯಪ್ರಾಣದೇವರನ್ನು ಜೀವೋತ್ತಮ ಎಂದು ತಿಳಿಯದಿದ್ದಮೇಲೆ ಮುಖ್ಯವಾದ ಪ್ರಾಣನನ್ನು ಹೊರಗೆ ಹಾಕಿದ್ದರಿಂದ ಬದುಕಿದ್ದು ಸತ್ತಂತೆಯೇ ಸರಿ. ಇದು ಉಪನಿಷತ್ತಿನ ಆಧಾರ. ಮೋಕ್ಷದಲ್ಲಿ (ಲಕ್ಷ್ಮೀಗೆ ಗಂಡನಾಗುವುದು ಜಗತ್ತು ಸೃಷ್ಟಿ ಮಾಡುವುದು) ಇವೆರಡನ್ನು ಬಿಟ್ಟು ಉಳಿದ ಎಲ್ಲಾ ವಿಚಾರಗಳಲ್ಲೂ ದೇವರಿಗೆ ಸಮಾನ ಎಂದರೆ ಇದು ಹೇಗೆ ಒಪ್ಪುವುದಕ್ಕೆ ಸಾಧ್ಯ? ಕೆಲಸವಾಗುವ ತನಕ, ಕಾಲಿಗೆ ಬಿದ್ದು, ನಮಸ್ಕಾರ ಮಾಡಿ, ಸ್ತೋತ್ರ ಮಾಡಿ, ಕೆಲಸವಾದ ಮೇಲೆ ಹೆಗಲ ಮೇಲೆ ಕೈ ಹಾಕಿದಂತೆ ಆಯಿತು. ಲೋಕದಲ್ಲಿ ಒಂದು ಸಣ್ಣ ಉಪಕಾರ ಮಾಡಿದ್ದಕ್ಕೆ ವಂದನೆ ಎಂದು ಹೇಳುತ್ತಾರೆ. ಅಂತಹದರಲ್ಲಿ ದೇವರಿಂದ ಕೆಲಸವಾದ ಮೇಲೆ ನಿನಗೆ ನಾನು ಸಮಾನ ಎಂದರೆ ಒಪ್ಪಬಹುದೇ? ಜೀವೋತ್ತಮರಾದ ವಾಯುದೇವರ ಅನಂತರ 'ಹರವಿಷ್ಣುಭಕ್ತೋತ್ತಮ' ಎಂದು ಇರುವಾಗ ರುದ್ರದೇವರನ್ನು ದ್ವೇಷ ಮಾಡಿದರೆ ಶ್ರೀಹರಿಯ ಅನುಗ್ರಹ ಹೇಗೆ ಆಗುತ್ತದೆ. ಈ ಮೇಲಿನ ಕಾರಣಗಳಿಂದ ನಿರ್ದುಃಖಾನಂದಭರಿತವಾದ ಸುಖವಿಲ್ಲದ ಈ ಮತವು ಸಾಧಕರಾದ ಸಾತ್ವಿಕರಿಗೆ ಅನುಷ್ಠೇಯವಾದುದಲ್ಲ ತ್ಯಜಿಸುವುದೇ ಸರಿ.

ವಿರೋಧವೆಂಬ ದೋಷ ಬರುತ್ತದೆ. ದೇವರು ನಿರಾಕಾರ, ನಿರ್ಗುಣ, ನಿಷ್ಕ್ರಿಯ, ನಿರ್ಧರ್ಮಿಕ, ಸರ್ವತ್ರ ವ್ಯಾಪ್ತನಲ್ಲ, ಜ್ಯೋತಿ ಸ್ವರೂಪ ಎಂದು ಹೇಳಿದ್ದರಿಂದ - ನಿರಾಕಾರನಾದ ಮೇಲೆ ಜ್ಯೋತಿ ಸ್ವರೂಪ ಹೇಗೆ ಬರಲು ಸಾಧ್ಯ? ಆದ್ದರಿಂದ ಇದು ಅಸಂಗತವಾದದ್ದು. ಸಾತ್ವಿಕ, ರಾಜಸ, ತಾಮಸ, ಬೇಧವಿಲ್ಲ, ತಾಮಸರು ಬೇಕಾದರೆ ಸಾತ್ವೀಕರಾಗಬಹುದು. ಎಂದು ಇವರ ಅಭಿಪ್ರಾಯ ಎಂದರೆ ಕರಿ ನಾಯಿಯನ್ನು ಬಿಳಿ ನಾಯಿ ಮಾಡಿದಂತಾಗುತ್ತದೆ. ಇದು ಸಾಧ್ಯವಿಲ್ಲ. ಇದರಂತೆ ಈ ಮತದಲ್ಲಿ ಪೂರ್ವಾಪರವಿರೋಧವಾದದ್ದು, ವೇದಶಾಸ್ತ್ರಗಳಿಗೆ ವಿರೋಧವಾದದ್ದು ಮುಂತಾದ ಅವ್ಯವಸ್ಥಿತ ಅವಾಂತರಗಳ ತರಲೆ ತರಂಗಗಳ ಸುರಿಮಳೆ.

ಕೊನೆಯ ಸ್ಥಿತಿ - ನಿರಾಕಾರ, ಅಶರೀರ, ಅಭೋಕ್ತ, ವರ್ಣರಹಿತ ಮುಂತಾದ ಸ್ಥಿತಿ ಎಂದರೆ ಏನಿಲ್ಲದೇ ಶೂನ್ಯ ಎಂದಾಯಿತು. ಇದರಿಂದ ಯಾವ ಸುಖ ಹೊಂದಲೂ ಸಾಧ್ಯವಿಲ್ಲವೆಂದು ಆಯಿತು. ಜ್ಯೋತಿ ಸ್ವರೂಪ ಲೋಕದಲ್ಲಿ ವಾಸ ಎಂದರೆ ಅಲ್ಲಿ ಏನು ಸುಖ ಇದೆಯೆಂದಾಯಿತು? ಯಥಾಪ್ರಕಾರ ಶೂನ್ಯವಾದಿಗಳಾದ ಬೌದ್ಧರ ಮತವೇ ಆಯಿತು. ಶಾಸ್ತ್ರಗಳ ವಿರುದ್ಧವಾದ ವ್ಯಾಹತಗಳ ಸುರಿಮಳೆಯಿಂದ ಕೂಡಿರುವುದರಿಂದ ಕಲ್ಪಿತ ಕಾರಣಗಳ ಅಭಿಪ್ರಾಯಗಳಿರುವುದರಿಂದ ತುಂಬಾ ಗದ್ದಲ, ಜಗಳ ಆಗುತ್ತಿರುವ ಪ್ರದೇಶದಿಂದ ಹೇಗಾದರೂ ಮಾಡಿ ತಪ್ಪಿಸಿಕೊಂಡು ಹೊರಗೆ ಬರುವಂತೆ, ಬಿಡುಗಡೆ ಮಾರ್ಗ ಹೊಂದಬೇಕಾಗುತ್ತೆದೆ. ಆದುದರಿಂದ ನಿರ್ದುಃಖಾನಂದಭರಿತವಾದ ಶಾಶ್ವತ ಸುಖ ವೇದಬಾಹ್ಯವಾದ ಈ ಮತದಲ್ಲಿ ಇಲ್ಲವಾದ್ದರಿಂದ ಸಾಧಕರಾದ ಸಾತ್ತ್ವಿಕರಿಗೆ ಈ ಮತವು ಅನುಷ್ಠೇಯವಲ್ಲ.

## ರಾಮಕೃಷ್ಣಪರಮಹಂಸರ ಮತದ ಅನುವಾದ

ಮೂಲಪುರುಷ : ರಾಮಕೃಷ್ಣಪರಮಹಂಸ
ಪ್ರವರ್ತಕ : ವಿವೇಕಾನಂದ

**ತತ್ತ್ವ** : (ಅದ್ವೈತ ಮತದ ತತ್ತ್ವವೇ ಅಂಗೀಕೃತ) ಎಲ್ಲಾ ಮತಗಳ ತತ್ವಗಳು ಬೇರೆ ಬೇರೆ ಆಗಿದ್ದರೂ, ಗುರಿ ಒಂದೇ ಆದ್ದರಿಂದ ಖಂಡನ ಮಂಡನಗಳ ಅವಶ್ಯಕತೆಯೇ ಇಲ್ಲ.

ಬ್ರಾಹ್ಮಣ, ಹಸು, ಕತ್ತೆ, ಚಂಡಾಲ, ನಾಯಿ, ಗಜ ಮುಂತಾದವುಗಳ ಅಧಿಷ್ಠಾನಗಳಲ್ಲಿ ಬೇಧವಿಲ್ಲವೆಂದು, ಎಲ್ಲವನ್ನೂ ಒಂದೇ ಸಮನಾಗಿ ನೋಡಬೇಕೆಂದು ಇವರ ಅಭಿಪ್ರಾಯ. ಯಾವ ರೀತಿಯಿಂದ ಬೇಕಾದರೂ ನಡೆದುಕೊಳ್ಳಬಹುದು. ಒಟ್ಟಿನಲ್ಲಿ ಎಲ್ಲರೂ ಜಗಳವಾಡದೇ ಸ್ನೇಹಿತರಂತೆ ಇರುವುದು.

**ಖಂಡನ-ಮಂಡನ** : ಅದ್ವೈತ ಮತದ ತತ್ತ್ವವೇ ಇವರ ಅಭಿಪ್ರಾಯ, ಬೇರೆ ಏನೂ ಇಲ್ಲ. ಬೇರೆ ಬೇರೆ ಮತಗಳು ಹೇಳುವ ದಾರಿಗಳು ಬೇರೆ ಬೇರೆಯಾದರೂ ಗುರಿ ಒಂದೇ ಆದ್ದರಿಂದ ಖಂಡನ-ಮಂಡನಗಳು ಮಾಡಬೇಕಾದ ಅವಶ್ಯಕತೆ ಇಲ್ಲ. ಯಾರು ಹೇಗೇ ಬೇಕಾದರೂ ತಿಳಿದುಕೊಳ್ಳಲಿ, ಜಗತ್ತಿನಲ್ಲಿ ಜಗಳವಾಡದೇ ಸ್ನೇಹಿತರಂತೆ ಇರುವುದೇ ಇವರ ಮತ. ಗುರಿ ಒಂದೇ ಹೇಳಿದರೂ ಸಹ ಆ ಗುರಿಗೆ ಲಕ್ಷಣಗಳು ಬೇರೆ ಬೇರೆ ಹೇಳಿದ ಮೇಲೆ ಅದು ಒಂದೇ ಹೇಗಾಗುತ್ತದೆ. ಒಬ್ಬರು ಕತ್ತಲೆ ಗುರಿ ಎಂದು ಹೇಳಿದ್ದರೆ, ಇನ್ನೊಬ್ಬರು ಬೆಳಕೇ ಗುರಿ ಎಂದು ಹೇಳುತ್ತಾರೆ. ಆದ್ದರಿಂದ ಪರಸ್ಪರ ಭಿನ್ನಾಭಿಪ್ರಾಯಗಳು ಬರುತ್ತವೆ. ಹೀಗಿರುವಾಗ ಗುರಿ ಒಂದೇ ಎಂದು ಹೇಳುವುದು ಸರಿಯೇ ಅಥವಾ ತಪ್ಪೇ? ಯೋಚಿಸಿ. ಆಗ ಕತ್ತಲೆ ಸರಿಯೋ ಬೆಳಕು ಸರಿಯೋ ಎಂಬ ಜಿಜ್ಞಾಸ ಪ್ರಾರಂಭವಾಗುತ್ತದೆ. ಇದರ ಫಲವಾಗಿ ನಮಗೆ ಸರಿಯಾದ ಮಾರ್ಗ ಹುಡುಕಬೇಕೆಂಬ ಅಭಿಪ್ರಾಯ ಮೂಡುತ್ತದೆ. ಈಗ ಅಭಿಪ್ರಾಯ ಮೂಡುವುದು ಬೇಡ, ನಾವು ಹಾಗೇ ಇದ್ದುಬಿಡೋಣ ಎಂಬುದು ಸರಿಯೇ? ಯೋಚಿಸಿ. ಅನೇಕ ಕುರುಡರು ಸೇರಿ ಒಟ್ಟಿಗೆ ಹಳ್ಳಕ್ಕೆ ಬಿದ್ದಂತೆ ಆಗುತ್ತದೆ. ಕೆಟ್ಟದ್ದನ್ನು ತಪ್ಪಿಸಿಕೊಂಡು ಒಳ್ಳೆಯದಕ್ಕೇ ಹೋಗುವುದೇ ಸರಿಯಷ್ಟೇ. ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮ

**ಹೇಳುತ್ತಾನೆ.** 'ಪಂಡಿತನಾದ **ಬ್ರಾಹ್ಮಣನಲ್ಲಿ,** ಸ್ವಪಚನಾದ ಚಂಡಾಲನಲ್ಲಿ ಗೋವಿನಲ್ಲಿ, ಕತ್ತೆಯಲ್ಲಿ, **ನಾಯಿಯಲ್ಲಿ ಅಂತರ್ಯಾಮಿಯಾಗಿರುವ ಭಗವಂತನು** ಸಮಾನ ಎಂದು ತಿಳಿದುಕೊಳ್ಳುವುದು **ಸರಿಯಾದ** ಅಭಿಪ್ರಾಯ. ಇದಕ್ಕೆ ಇವರು ಮಾಡುವ ಅಭಿಪ್ರಾಯವೇನೆಂದರೆ, ಪಂಡಿತನಾದ ಬ್ರಾಹ್ಮಣನನ್ನು, ಸ್ವಪಚನನಾದ ಚಂಡಾಲನನ್ನು, ಗೋವನ್ನು, ಕತ್ತೆಯನ್ನು, ನಾಯಿಯನ್ನು ಸಮಾನಾಗಿ ಕಾಣಬೇಕು ಎಂದು ಅಭಿಪ್ರಾಯ ಮಾಡುತ್ತಾರೆ. ಇದು ಸರಿಯಾಗಿ ತೋರುತ್ತದೆಯೇ? ಕತ್ತೆಯನ್ನು ನಾಯಿ ಎಂದು ತಿಳಿದುಕೊಳ್ಳಲು ಸಾಧ್ಯವೇ? ಹಾಗೆಯೇ ಅಧಿಷ್ಠಾನಗಳಲ್ಲಿ ಬೇಧವುಂಟು. ಅದನ್ನು ಸಮಾನಾಗಿ ತಿಳಿದುಕೊಳ್ಳಬಾರದು, ಅದರಲ್ಲಿರುವ ದೇವರನ್ನು ಸಮಾನಾಗಿ ತಿಳಿದುಕೊಳ್ಳಬೇಕು. ಆದ್ದರಿಂದ ಸರಿಯಾದದ್ದು ಯಾವುದೋ ಅದನ್ನು ತಿಳಿದುಕೊಳ್ಳುವುದಕ್ಕೆ ಖಂಡನ-ಮಂಡನ ಮಾಡಲೇಬೇಕು. ಇದು ಬೇಡವೆಂದು ಈ ಮತದವರು ಹೇಳುವುದರಿಂದ ಅಸಂಗತ ಮತ್ತು ವೇದಬಾಹ್ಯವಾಯಿತು. ನಿರ್ದುಃಖಾನಂದಭರಿತವಾದ ಶಾಶ್ವತ ಸುಖ ಇದರಲ್ಲಿ ಇಲ್ಲವಾದ್ದರಿಂದ ಸಾಧಕರಾದ ಸಾತ್ವಿಕರಿಗೆ ಈ ಮತವನ್ನು ಆಚರಿಸುವುದು ಯುಕ್ತವಲ್ಲ.

### ಇಸ್ಲಾಂ ಮತ (ಮುಸಲ್ಮಾನ ಮತ)ದ ಅನುವಾದ

| | | |
|---|---|---|
| ದೇವರ ಹೆಸರು | : | ಅಲ್ಲಾ ಖುದಾ, ರಬ್, ರಹೀಂ, ರೆಹಮಾನ್ ಅಲ್ಲಾ ಹೋ ಅಕ್ಬರ್ (ದಯಾಮಯ, ದೇವರು ದೊಡ್ಡವನು) |
| ಪ್ರಮಾಣ ಗ್ರಂಥ | : | ಕುರಾನ್, (ಅರಬ್ಬೀ ಭಾಷೆ) |

**ತತ್ತ್ವ** - ದೇವರಿಗೆ ಆಕಾರವಿಲ್ಲ, ಮಹತೋಮಹೀಮ, ವಿಗ್ರಹ ಪೂಜೆ ಮಾಡಿದರೆ ಅಂಥ ದೊಡ್ಡ ದೇವರನ್ನು ಸಣ್ಣ ವಿಗ್ರಹದಲ್ಲಿ ಇಡುವುದರಿಂದ ದೇವರಿಗೆ ದ್ರೋಹ ಮಾಡಿದಂತಾಗುತ್ತದೆ. ಆದುದರಿಂದ ವಿಗ್ರಹ ಪೂಜೆ ಮಾಡಬಾರದು. ವಿಗ್ರಹ ಪೂಜೆ ಮಾಡುವವರಿಗೆ ಶಾಶ್ವತ ನರಕ, ಅದಕ್ಕೆ ಗೋಡೆಯ ಮುಂದೆ ಪ್ರಾರ್ಥನೆ ಮಾಡುವುದು. ಪುನರ್ಜನ್ಮವಿಲ್ಲ ಒಂದೇ ಜನ್ಮದಲ್ಲಿ ವೀರಸ್ವರ್ಗ ಪ್ರಾಪ್ತಿ. ಹೆಂಗಸರಿಗೆ, ಪ್ರಾಣಿಗಳಿಗೆ ಮೋಕ್ಷವಿಲ್ಲ.

**ಖಂಡನ-ಮಂಡನ** : ದೇವರಿಗೆ ಆಕಾರವಿಲ್ಲ, ದೇವರು ದೊಡ್ಡವನು, ದಯಾಮಯ ಎಂದು ಹೇಳಿ ಕ್ರೂರತನ ಜಾರಿಯಲ್ಲಿ ಇಟ್ಟುಕೊಂಡ ಮೇಲೆ ದಯಾಗುಣ ಎಲ್ಲಿ ಬಂತು? ದೇವರಿಗೆ ಆಕಾರವಿಲ್ಲವೆಂದು ಹೇಳಿ, ಗೋಡೆಯ ಮುಂದೆ ಪ್ರಾರ್ಥನೆ ಮಾಡಿದ ಮೇಲೆ ದೇವರಿಗೆ ಆಕಾರವಿದೆ ಎಂದು ಹೇಳಿದಂತಾಯಿತು. ದೇವರು ಬಹಳ ದೊಡ್ಡವನು ಅವನನ್ನು ಸಣ್ಣ ವಿಗ್ರಹದಲ್ಲಿ ಸೇರಿಸುವುದರಿಂದ ದೇವರಿಗೆ ಅವಮಾನಮಾಡಿದಂತಾಯಿತು. ಆದುದರಿಂದ ವಿಗ್ರಹಪೂಜೆ ಮಾಡಬಾರದು. ದೇವರು ಮಹತೋಮಹೀಮಾ ಹೇಗೋ ಹಾಗೆ ಅಣೋರಣೀಯನು ಆಗಿರುತ್ತಾನೆ. ಅಂದರೆ ಅತಿ ಸಣ್ಣ ಜಾಗದಲ್ಲಿ ಇರಬಲ್ಲ ಎಂದು ಆಯಿತು. ಹೀಗೆ ಹೇಳದಿದ್ದರೆ ದೇವರಿಗೆ ಸರ್ವಪ್ರವ್ಯಾಪ್ತ ಎಂಬ ಗುಣ ಹೋಗುತ್ತದೆ. ವಿಗ್ರಹವೇ ದೇವರು ಎಂದು ತಿಳಿದುಕೊಂಡದ್ದೇ ಮೊದಲನೇ ತಪ್ಪು. ವಿಗ್ರಹವೇ ದೇವರಲ್ಲ, ವಿಗ್ರಹದೊಳಗೆ ದೇವರು. ಮನೆಯಲ್ಲಿ ವಾಸಮಾಡುವವರೆಲ್ಲ ಮನೆಯೇ? ಮನೆಯ ಒಳಗೆ ವಾಸ ಮಾಡುತ್ತಾರೆಯೇ ಹೊರತು ಮನೆ ವಾಸಮಾಡುವುದಿಲ್ಲ. ಪುನರ್ಜನ್ಮ ಒಪ್ಪುವುದಿಲ್ಲ, ಆದರೆ ಜನ್ಮಾಂತರ ಇರುವುದು ಅದು ನಿಜ, ಹೆಂಗಸರಿಗೆ ಪ್ರಾಣಿಗಳಿಗೆ ಮೋಕ್ಷವಿಲ್ಲವೆಂದ ಮೇಲೆ ಅವರ ಗತಿಯೇನು? ಇದು ಒಪ್ಪಬಹುದೇ? ಒಂದೇ ಜನ್ಮದಲ್ಲಿ ವೀರಸ್ವರ್ಗ ಪ್ರಾಪ್ತಿ ಆದರೆ ಆ ಸ್ವರ್ಗದಲ್ಲಿ ಏನು ವಿಚಾರವೆಂಬುದು ಗೊತ್ತಿಲ್ಲ. ದೇವರಿಗೇ ಆಕಾರವಿಲ್ಲದಿದ್ದಮೇಲೆ ಅವನು ಕೊಡುವ ಮೋಕ್ಷ ಇನ್ನೆಂತಹುದು ಇರಬಹುದು. ದೇವರಿಗೆ ಆಕಾರವಿಲ್ಲ ಎಂದು ಹೇಳುವುದರಿಂದ ಮತ್ತು ನಿರ್ದುಃಖಾನಂದಭರಿತವಾದ ಶಾಶ್ವತ ಸುಖ ಈ ಮತದಲ್ಲಿ ಇಲ್ಲವಾದ್ದರಿಂದ ಸಾಧಕರಾದ ಸಾತ್ವಿಕರಿಗೆ ವೇದಬಾಹ್ಯವಾದ ಈ ಮತವು ಅನುಷ್ಠೇಯವಲ್ಲ.

## ಕ್ರೈಸ್ತ ಮತದ ಅನುವಾದ

**ಮೂಲ ಪುರುಷ** : ಜೀಸಸ್ ಕ್ರೈಸ್ಟ್, (ಏಸುಕ್ರಿಸ್ತ)
**ಆಧಾರ ಗ್ರಂಥ** : ಬೈಬಲ್(ಹಳೇ ಒಡಂಬಡಿಕೆ, ಹೊಸ ಒಡಂಬಡಿಕೆ)

ತತ್ತ್ವ : ದೇವರಿಗೆ ಆಕಾರವಿಲ್ಲ, ವಿಗ್ರಹ ಪೂಜೆ ಇಲ್ಲ. ಜೀವರಿಗೆ ಜನ್ಮಾಂತರವಿಲ್ಲ. ಒಂದೇ ಜನ್ಮ, ಪಾಪಪುಣ್ಯಗಳ ತೀರ್ಮಾನದ ಕೊನೆ ದಿವಸ ಶಾಶ್ವತ ನರಕ ಮತ್ತು ಸ್ವರ್ಗ ಪ್ರಾಪ್ತಿ. ದೇವರು ಜಗತ್ತನ್ನು ೬ ದಿನ ಸೃಷ್ಟಿ ಮಾಡಿದ್ದಕ್ಕೆ, ೭ನೇ ದಿವಸ ಆಯಾಸವಾಯಿತು. ಆ ದಿನ ಭಾನುವಾರ, ಆದುದರಿಂದ ಆವತ್ತು ವಿಶ್ರಾಂತಿ ದಿನ. ಜೀವರು ೬ ದಿವಸ ಮಾಡಿದ ಪಾಪಕ್ಕೆ ಚರ್ಚಿನಲ್ಲಿ ೭ನೇ ದಿವಸ ಪ್ರಾರ್ಥನೆ ಮಾಡಿದರೆ, ಮಾಡಿದ ಪಾಪವೆಲ್ಲಾ ನಾಶವಾಗುತ್ತದೆ.

**ಖಂಡನ-ಮಂಡನ** : ಇಸ್ಲಾಂ ಮತಕ್ಕೂ, ಕ್ರೈಸ್ತಮತಕ್ಕೂ ತತ್ತ್ವದಲ್ಲಿ ಏನೂ ವ್ಯತ್ಯಾಸವಿಲ್ಲ, ಹೆಸರು ಬೇರೆ, (ಇಬ್ರಾಹಿಂ, ಅಬ್ರಹಾಂ) ಎಂಬಂತೆ. ಮುಸಲ್ಮಾನರು ಗೋಡೆಗೆ ಪೂಜೆ ಮಾಡಿದರೆ, ಕ್ರೈಸ್ತರು ಶಿಲುಬೆಗೆ ಪೂಜೆ ಮಾಡುತ್ತಾರೆ. ಇಬ್ಬರು ದೇವರಿಗೆ ಆಕಾರವಿಲ್ಲವೆಂದು ಹೇಳಿದವರೇ, ದೇವರಿಗೆ ಆರು ದಿವಸ ಸೃಷ್ಟಿ ಮಾಡಿದ ಮೇಲೆ ಏಳನೇ ದಿವಸ ಆಯಾಸವಾಯಿತಂತೆ, ದೇವರಿಗೆ ಆಯಾಸ ಆಗುವುದಾದರೆ ದೇವರಿಗೆ ಸರ್ವಶಕ್ತಿತ್ವ ಹೋಗಿ, ದೋಷ ಬಂತು, ಇದರಿಂದ ದೈವತ್ವವೇ ನಾಶವಾಯಿತು. ಆರು ದಿವಸ ಮಾಡಿದ ಪಾಪ ಪರಿಹಾರಕ್ಕಾಗಿ ಏಳನೇ ದಿವಸ ಚರ್ಚನಲ್ಲಿ ಪ್ರಾರ್ಥನೆ ಮಾಡಿಬಿಟ್ಟರೆ ಪಾಪವೆಲ್ಲ ಹೋಗುತ್ತದೆ ಎಂದು ಹೇಳಿ, ಪುನಃ ಬಂದು ಅದೇ ಪಾಪ ಮಾಡುತ್ತಿದ್ದರೆ ಇದು ಹೇಗೆ ಸರಿಹೋಗುತ್ತದೆ. ಅಸಂಗತವಾದ ವಿಚಾರ. ಮತ್ತು ಒಂದೇ ಜನ್ಮ, ಪಾಪ-ಪುಣ್ಯಗಳನ್ನು ಕೊನೆಯ ದಿವಸ ಪರೀಕ್ಷೆ ಮಾಡಿ ತೀರ್ಮಾನ ಮಾಡುವುದು ಎಂದು ಹೇಳುತ್ತಾರೆ. ಈ ತರಹ ಪರಸ್ಪರ ಅಸಂಗತ, ವೇದಬಾಹ್ಯವಾದ ವಿಚಾರಗಳಿರುವುದರಿಂದ ನಿರ್ದುಃಖಾನಂದಭರಿತವಾದ ಶಾಶ್ವತ ಸುಖ ಇಲ್ಲಿ ಇಲ್ಲವಾದ್ದರಿಂದ ಸಾಧಕರಾದ ಸಾತ್ತ್ವಿಕರಿಗೆ ಇದು ಅನುಷ್ಠೇಯವಲ್ಲ.

## ಸಾಯಿಬಾಬಾ ಪಂಥದ ಅನುವಾದ

ಮೂಲಪುರುಷ : ಶಿರಡಿ ಸಾಯಿಬಾಬಾ
ಪ್ರವರ್ತಕ : ಪುಟ್ಟಪರ್ತಿ ಸಾಯಿಬಾಬಾ

**ತತ್ತ್ವ** : ಅದ್ವೈತ ಮತದ ತತ್ವವೇ ಇವರ ತತ್ವ. ತತ್ವಕ್ಕಿಂತಲೂ ಇಲ್ಲಿ ಆಸುರೀ, ಅತೀಂದ್ರಿಯ ಶಕ್ತಿಗಳ ವಶದಿಂದ ಜನಗಳಿಗೆ ಭಕ್ತಿಯನ್ನುಂಟುಮಾಡಿ ಅನುಗ್ರಹ ಮಾಡಿ, ತಮ್ಮ ವಶಮಾಡಿಕೊಳ್ಳುವುದೇ ಇವರ ಮುಖ್ಯವಾದ ವಿಚಾರವಾಗಿದೆ.

**ಖಂಡನ-ಮಂಡನ** : ಸಾಯಿಬಾಬಾ ಎಂದು ಹೆಸರು ಕೇಳಿದರೇ ಹಿತವಾಗುವುದಿಲ್ಲವೆಂದ ಮೇಲೆ ಇಲ್ಲಿ ಏನು ಸುಖ ಸಿಕ್ಕೀತು? ಅದ್ವೈತ ಮತದ ಅಭಿಪ್ರಾಯವೇ ಆಚರಣೆ, ಪಾರತ್ರಿಕ ಸುಖಕ್ಕಿಂತ ಐಹಿಕ ಸುಖವೇ ಮುಖ್ಯವಾದುದು. ಇದು ಚಾರ್ವಾಕನ ಮತ. ಅತೀಂದ್ರಿಯವಾದ ಆಸುರೀ ಶಕ್ತಿಗಳಿಂದ ಜನರನ್ನು ವಶಮಾಡಿಕೊಂಡು ಅನುಗ್ರಹ ಮಾಡಿ, ಕೊನೆಗೆ ಅನರ್ಥಕ್ಕೆ ಕಾರಣವಾಗುತ್ತದೆ. ಶ್ರೀರಾಘವೇಂದ್ರಸ್ವಾಮಿಗಳವರಂಥ ಸಾತ್ವಿಕ ಗುರುಗಳು ಅನುಗ್ರಹ ಮಾಡುವುದು ತಡ ಮಾಡಿದರೂ ಅಂತ್ಯ ಸುಖವನ್ನು ಕೊಡುವವರಾಗುತ್ತಾರೆ. ಆದ್ದರಿಂದ ತಾತ್ಕಾಲಿಕವಾಗಿ ಸಿಗುವ ಫಲಕ್ಕೆ ಮರುಳಾಗಿ ಶಾಶ್ವತ ಸುಖವನ್ನು ಕಳೆದುಕೊಳ್ಳಬಾರದು. ಆದುದರಿಂದ ವೇದಬಾಹ್ಯವಾದ ಈ ಪಂಥದಲ್ಲಿ ನಿರ್ದುಃಖಾನಂದಭರಿತವಾದ ಶಾಶ್ವತ ಸುಖದ ಸಮಾಚಾರವೇ ಇಲ್ಲವಾದ್ದರಿಂದ ಸಾಧಕರಾದ ಸಾತ್ತ್ವಿಕರಿಂದ ಅತ್ಯಾವಶ್ಯಕವಾಗಿ ತ್ಯಾಗಮಾಡಬೇಕಾದದ್ದು ಸರಿ.

**ಅಯ್ಯಪ್ಪನ ಪಂಥದ ಅನುವಾದ**

ಮೂಲಪುರುಷ : ಶಬರೀಮಲೈ ಅಯ್ಯಪ್ಪ, ಮೋಹಿನಿ ರೂಪಿಯಾದ ಹರಿಯಲ್ಲಿ, ಹರನಿಂದ ಜನಿಸಿದವನು ಅಯ್ಯಪ್ಪ ಎಂದು ಅಭಿಪ್ರಾಯ.

**ತತ್ವ** : ಇಲ್ಲಿ ತತ್ವದ ವಿಚಾರವೇ ಇಲ್ಲ, ಕೇವಲ ಭಕ್ತಿ ಪಂಥ, ಬಾಹ್ಯ ದೀಕ್ಷೆ, ಕರಿವಸ್ತ್ರಧಾರಣ, ರುದ್ರಾಕ್ಷಿ, ಭಸ್ಮಧಾರಣ, ಕೆಲವು ನಿಯಮಗಳು, ಕೇವಲ ಅಯ್ಯಪ್ಪನ ಭಜನೆಯೇ ಮುಖ್ಯವಾದ ಕಾರ್ಯಕ್ರಮ.

**ಖಂಡನ-ಮಂಡನ** : ಇಲ್ಲಿ ತತ್ವವಿಚಾರ ಏನೂ ಇಲ್ಲ? ಕೇವಲ ಅಯ್ಯಪ್ಪನ ಭಕ್ತಿ ಭಜನೆ ಒಂದೇ ಮುಖ್ಯ. ಮೋಹಿನೀ ರೂಪಿ ಹರಿಯಲ್ಲಿ, ಹರನಿಂದ ಅಯ್ಯಪ್ಪ ಹುಟ್ಟಿದವನು ಎಂದು ಇವರ ಅಭಿಪ್ರಾಯ. ಆದರೆ ಭಾಗವತ ಪುರಾಣದಲ್ಲಿ ಹೇಳಿರುವ ಪ್ರಕಾರ ಮೋಹಿನಿ ಮತ್ತು ರುದ್ರದೇವರ ಸಂಬಂಧದಲ್ಲಿ ರುದ್ರದೇವರ ವೀರ್ಯ ಸ್ಖಲನವಾಗಿ, ಭೂಮಿಮೇಲೆ ಬಿದ್ದು ಲಿಂಗಗಳು ಉದ್ಭವಿಸಿದವು ಎಂದು ಇದೆ. ಬೇರೆ ಯಾವುದಾದರೂ ತಾಮಸ ಪುರಾಣಗಳಲ್ಲಿ ಇವರು ಹೇಳಿರುವ ಕಥೆ ಇರಬಹುದು. ಅದು ನಮಗೆ ಬೇಡ. ಆದ್ದರಿಂದ ಇವರಿಂದ ಏನೂ ತೊಂದರೆ ಇಲ್ಲ. ಆದರೆ ನದಿತೀರದಲ್ಲಿ ಸ್ನಾನ ಮಾಡಿ ದೇವರು ಪೂಜೆ ಮಾಡುವ ಬ್ರಾಹ್ಮಣರಿಗೆ ಇವರಿಂದ ತೊಂದರೆಯಾಗುತ್ತದೆ ಅಷ್ಟೆ. ವೇದಬಾಹ್ಯವಾದುದರಿಂದ ಈ ಮತವು ಸಾಧಕರಾದ ಸಾತ್ವಿಕರಿಗೆ ಇದು ಅನುಷ್ಠೇಯವಲ್ಲ.

**ಹರೋಹರ ಪಂಥದ ಅನುವಾದ**

ಮೂಲಪುರುಷ : **ಸುಬ್ರಹ್ಮಣ್ಯ (ಪಳನಿ)**

ತತ್ವ : ಸುಬ್ರಹ್ಮಣ್ಯನೇ ಶ್ರೇಷ್ಠನೆಂದು ತಿಳಿದು ಅವನನ್ನು ಆರಾಧಿಸುವುದು. ಇದು ಸ್ಕಾಂದಮತವೆನಿಸಿಕೊಳ್ಳುತ್ತದೆ. ಹಳದಿ ವಸ್ತ್ರಧಾರಣ ಮಾಡಿಕೊಂಡು ವರುಷಕ್ಕೊಂದು ಸಾರಿ ಕಾವಡಿ ಧರಿಸಿ, ಸುಬ್ರಹ್ಮಣ್ಯನಿಗೆ ಫಲ ಸಮರ್ಪಣೆ ಮಾಡುವ ಒಂದು ಸಂಪ್ರದಾಯ.

**ಖಂಡನ-ಮಂಡನ** : ಸುಬ್ರಹ್ಮಣ್ಯನೇ ಸರ್ವೋತ್ತಮ ಎಂಬ ಸ್ಕಾಂದ ಮತ. ರುದ್ರದೇವರೇ ವಿಷ್ಣುವಿನ ವಿವಕ್ಷದಿಂದ ದೋಷಯುಕ್ತರಾದ್ದರಿಂದ ಸರ್ವೋತ್ತಮರು, ಜಗತ್ ಸೃಷ್ಟಿ ಕರ್ತರು ಆಗಲಾರರು, ಇವರೇ ಸೃಷ್ಟಿಕರ್ತರಾಗದಿದ್ದ ಮೇಲೆ ಇನ್ನು ಗಣಪತಿ, ಸ್ಕಂದ, ಸೂರ್ಯ ಮುಂತಾದವರು ಹೇಗೆ ಸರ್ವೋತ್ತಮರಾಗುತ್ತಾರೆ. ಆದ್ದರಿಂದ ವೇದಬಾಹ್ಯವಾದ ಈ ಪಂಥ ಸಾತ್ವಿಕರಾದ ಸಾಧಕರಿಂದ ಅನುಷ್ಠೇಯವಾದುದಲ್ಲ.

**ಹರೇಕೃಷ್ಣ ಪಂಥದ ಅನುವಾದ**

ಮೂಲಪುರುಷ : ಚೈತನ್ಯ ಪ್ರಭು, ಮಥುರಾ,
ಪ್ರವರ್ತಕ : ಭಕ್ತಿವೇದಾಂತ ಸ್ವಾಮಿ ಪ್ರಭೂಪಾದ,
ತತ್ತ್ವ : ದ್ವೈತ ಸಿದ್ಧಾಂತದ ಅನುಕರಣೆ,

'ಹರೇಕೃಷ್ಣ, ಹರೇಕೃಷ್ಣ, ಹರೇರಾಮ ಹರೇರಾಮ' ಎಂದು ವಿಶೇಷವಾಗಿ ಭಜನೆ ಮಾಡಿ, ಕೃಷ್ಣನೇ ಶ್ರೇಷ್ಠನೆಂದು ತಿಳಿದು ಪೂಜಿಸುವುದು, ಒಳ್ಳೆಯ ಗುಣಗಳನ್ನು ಸಂಪಾದಿಸಿಕೊಳ್ಳುವುದು ನಿಷೇಧ ಪದಾರ್ಥಗಳನ್ನು ತ್ಯಾಗ ಮಾಡುವುದು.

ದ್ವೈತಮತದ ಅನುಕರಣೆಯಾದರೂ ಸಹ ಜೀವೋತ್ತಮರಾದ ಶ್ರೀಮುಖ್ಯಪ್ರಾಣ ದೇವರ ಮೂಲಕ ಭಗವತ್ ಪೂಜಾ ಕಾರ್ಯಗಳು ಆಗದಿದ್ದ ಮೇಲೆ ಅದು ಸರಿಯಾಗಿ ಮಾಡಿದಂತೆ

ಆಗುವುದಿಲ್ಲ. ಊರಿಗೆ ಕಳಿಸುವ ಅಂಚೆ ಕಾಗದಗಳನ್ನು ಅಂಚೆ ಪೆಟ್ಟಿಗೆಯಲ್ಲೇ ಹಾಕಬೇಕು. ಬೇರೆ ಕಡೆ ಹಾಕುವಂತಿಲ್ಲ, ಹಾಗೆ ಶ್ರೀಭಾರತೀರಮಣಮುಖ್ಯಪ್ರಾಣದೇವರ ಮೂಲಕ ಮಾಡಿದ ಕಾರ್ಯವೇ ದೇವರಿಗೆ ಮುಟ್ಟುವುದು ಇಲ್ಲದಿದ್ದರೆ ಇಲ್ಲ, ಈ ಪಂಥದಲ್ಲಿ ಮುಖ್ಯಪ್ರಾಣದೇವರ ಮೂಲಕ ಎಂಬ ಅಭಿಪ್ರಾಯ ಇಲ್ಲವಾದ್ದರಿಂದ ಇದು ಅನುಸರಿಸುವುದಕ್ಕಾಗುವುದಿಲ್ಲ. ಹುಟ್ಟಿನಿಂದ ಮ್ಲೇಂಚರಾಗಿ ಬ್ರಾಹ್ಮಣರಂತೆ ಶಿಖಾ, ಯಜ್ಞೋಪವೀತ ಧರಿಸಿ, ಅನುಷ್ಠಾನ ಮಾಡುವುದು ಅವರಿಗೆ ಪರಧರ್ಮವಾಗುತ್ತದೆ. ಇದು ಭಗವದ್ಗೀತೆಗೆ ವಿರೋಧವಾಗುತ್ತದೆ, ಈ ದಾರಿ ಸರಿಯಾದ ಮಾರ್ಗವಲ್ಲ. ಇದರಲ್ಲಿ ವರ್ಣಸಾಂಖರ್ಯ ದೋಷವಿದೆ. ವೇದಬಾಹ್ಯವಾದ ಈ ಪಂಥದಲ್ಲಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಇಲ್ಲವಾಯಿತು. ನಿರ್ದುಃಖಾನಂದಭರಿತವಾದ ಶಾಶ್ವತ ಸುಖವಾಗುವುದಿಲ್ಲವಾದ್ದರಿಂದ ಸಾಧಕರಾದ ಸಾತ್ವಿಕರಿಗೆ ಈ ಪಂಥ ಅನುಷ್ಠೇಯವಾದುದಲ್ಲ.

**ವಿಜ್ಞಾನ ವಾದ** : ಕೇವಲ ಜಡ ಮತ್ತು ಚೇತನದ ಮೇಲೆ ಪ್ರಯೋಗ. ಇಲ್ಲಿ ಪರಮಚೇತನದ ವಿಚಾರವೇ ಇಲ್ಲ, ಹಲವು ಮಂದಿ ವಿಜ್ಞಾನಿಗಳು ಪ್ರಯೋಗಗಳನ್ನು ಮಾಡಿ ನೂತನ ಪದಾರ್ಥಗಳನ್ನು ಸೃಷ್ಟಿ ಮಾಡುವುದು. ಇದರಿಂದ ಸಾಧಕ, ಬಾಧಕಗಳು ಎರಡೂ ಇವೆ.

**ಖಂಡನ-ಮಂಡನ** : ಹಲವು ವಿಜ್ಞಾನಿಗಳ ಸಂಶೋಧನೆ ಫಲವಾಗಿ ಆಧುನಿಕ ಪದಾರ್ಥಗಳ ಸೃಷ್ಟಿ ಮಾಡಿ ಅದರಿಂದ ತಾತ್ಕಾಲಿಕ ಸುಖ ಸಿಕ್ಕಿದರೂ ಸಹ ಅಂತ್ಯದಲ್ಲಿ ದುಃಖವೇ ಖಂಡಿತ. ವೇಗವಾಗಿ ಸಂಚರಿಸುವ ವಾಹನಗಳನ್ನು ಕಂಡುಹಿಡಿದರು, ಇದರಿಂದ ಬಹಳ ಬೇಗ ಎಲ್ಲಿಗೆ ಬೇಕಾದರೂ ಹೋಗಬಹುದೆಂಬ ಸುಖವಿದ್ದರೂ ಸಹ ಅದರ ಹಿಂದೆಯೇ ಅಪಘಾತ, ಮರಣ ಮತ್ತು ದೇಶದೇಶಾಂತರದವರ ಸಂಪರ್ಕವಾಗಿ ನಾನಾತರಹ ಸಮಸ್ಯೆಗಳು, ರೋಗಗಳು, ಬರಲು ಕಾರಣವಾಗಿದೆ. ಇದಕ್ಕಾಗಿಯೇ ಪ್ರಾಚೀನರು ಈ ವಿಚಾರಗಳೆಲ್ಲವನ್ನು ತಿಳಿದುಕೊಂಡಿದ್ದರೂ ಸಹ ಇದು ಸಾಧಕರಿಗೆ ತೊಂದರೆ ಮಾಡುವ ಕಾರಣದಿಂದ ಇದನ್ನು ಅನುಸರಿಸಲಿಲ್ಲ.

ಆಟಂಬಾಂಬ್ ಒಂದು ಮಾರಕವಸ್ತು, ನಾಶಮಾಡುವುದೇ ಇದರ ಕಾರ್ಯ. ಇಲ್ಲಿ ವಿಚಾರವಿದೆ. ಆಟಂಬಾಂಬ್‌ನಿಂದ ನಾಶ ಮಾಡುವುದಕ್ಕೆ ಕಾರಣರು ಯಾರು? ಎಂದು ವಿಚಾರಮಾಡಿದಾಗ, ಕಂಡುಹಿಡಿದ ವಿಜ್ಞಾನಿಯೇ? ಅದನ್ನು ತಯಾರು ಮಾಡಿದ ಕಾರ್ಖಾನೆಯೇ? ತೆಗೆದುಕೊಂಡ ಹೋದ ಪುರುಷನೇ? ಅದನ್ನು ಪ್ರಯೋಗ ಮಾಡಿದ ವ್ಯಕ್ತಿಯೇ? ಸ್ವತಃ ಆಟಂಬಾಂಬ್ ನಾಶಮಾಡಿತೇ? - ಇದನ್ನು ವಿಚಾರ ಮಾಡಿದಾಗ ಅದಕ್ಕೆ ಕಾರಣರು ಯಾರು? ಎಂದು ಯೋಚನೆ ಮಾಡಿದರೆ ಭಗವದ್ಗೀತೆಯಲ್ಲಿ ಇದರ ಸಮಸ್ಯೆ ಬಗೆಹರಿಯುತ್ತದೆ. 'ತತ್ತೇಜೋ ವಿದ್ಧಿ ಮಾಮಕಂ' ಅಂದರೆ ಅದರಲ್ಲಿರುವ ಶಕ್ತಿ ನನ್ನದು ಎಂದು ಭಗವಂತ ಹೇಳಿಕೊಳ್ಳುತ್ತಿದ್ದಾನೆ. ಎಂದರೆ ತದ್ರೂಪ (ಆಟಂಬಾಂಬ್ ರೂಪ), ತನ್ನಾಮ (ಆಟಂಬಾಂಬ್ ಎಂಬ ಹೆಸರು), ತತ್ತೇಜ (ಆಟಂಬಾಂಬ್‌ನ ನಾಶಮಾಡುವ ಶಕ್ತಿ), ತದ್ಭಿನ್ನ ಅಂದರೆ ತಾನು ಮಾತ್ರ ಅದರಂತೆ ಇದ್ದುಕೊಂಡು ಅದರ ಸಂಪರ್ಕಇಲ್ಲದೇ ಇಷ್ಟು ಅಧಿಷ್ಠಾನಗಳಲ್ಲಿ ದೇವರು ವ್ಯಾಪಿಸಿಕೊಂಡು ನಾಶ ಎಂಬ ಕಾರ್ಯವನ್ನು ಮಾಡಿಸುತ್ತಾನೆ - ತಾನು ಮಾತ್ರ ಅದರಿಂದ ಭಿನ್ನನಾಗಿ ನಿರ್ಲಿಪ್ತನಾಗಿರುತ್ತಾನೆ ಎಂದು ತಿಳಿದರೆ ವಿಜ್ಞಾನವಾದ ನಾಸ್ತಿಕವಾದವನ್ನು ಕೊಡುವುದಿಲ್ಲ. ಇದು ಜಡ-ಚೇತನರ ವಿಚಾರ ಹೇಳುತ್ತದೆಯೇ ಹೊರತು, ಇದನ್ನು ಮೀರಿದ ಪರಮಚೇತನನಾದ ಈಶ್ವರನ ಅಧೀನವೆಂಬ ಜ್ಞಾನವಿಲ್ಲದೇ ತಾವೇ ಸ್ವತಂತ್ರರು ಎಂಬ ಅಭಿಪ್ರಾಯವುಳ್ಳವರಾಗುತ್ತಾರೆ. ಇದು ಅಸಾಧುವಾದುದು, ಆದ್ದರಿಂದ ನಿರ್ದುಃಖಾನಂದಭರಿತವಾದ ಶಾಶ್ವತ ಸುಖಪ್ರಾಪ್ತಿ ಈ ಮಾರ್ಗದಲ್ಲಿಲ್ಲವಾದ್ದರಿಂದ ಇದನ್ನು ಸಾಧಕರಾದ ಸಾತ್ವಿಕರು ಈ ಮಾರ್ಗಕ್ಕೆ ಹೋಗದಿರುವುದೇ ಕ್ಷೇಮ.

ಪೂರ್ವೋಕ್ತ ವಿಚಾರ ಸರ್ವಾರ್ಥ ಸಾರಸಂಗ್ರಹ ಸಮಾಪ್ತಿ

**'ಅಂತೇ ಸಿದ್ಧಸ್ತು ಸಿದ್ಧಾಂತಃ, ಮಧ್ವಸ್ಯ ಆಗಮ ಏವಹಿ'** - ಶ್ರೀವಾದಿರಾಜಸ್ವಾಮಿಗಳವರು.

ಕೊನೆಯಲ್ಲಿ ನಿಶ್ಚಯ ಯಾವುದು ಆಗುತ್ತದೋ ಅದೇ ಸಿದ್ಧಾಂತ, ಅಂದರೆ ಇನ್ನು ಮುಂದೆ ಪುನಃ ಯಾವ ಪೂರ್ವಪಕ್ಷಗಳು ಬರುವಂತಿಲ್ಲ, ಎಲ್ಲವೂ ಖಂಡನೆಯಾಗಿರುವುದೇ. ಹಾಗೇನಾದರೂ ಬಂದರೆ ಅದು ಹಿಂದಿನ ಪೂರ್ವಪಕ್ಷಗಳಲ್ಲಿಯೇ ಸೇರಿಕೊಂಡಿರುತ್ತದೆಯೇ ಹೊರತು ಹೊಸದೇನು ಇಲ್ಲ. ದೇವರು ಎಂದರೆ ನಮಗಿಂತ ಶ್ರೇಷ್ಠನು, ಸರ್ವಜ್ಞನು, ಸರ್ವಶಕ್ತನು, ಸರ್ವಸಮರ್ಥನು ನಮಗೆ ಕಷ್ಟಗಳನ್ನು ಪರಿಹರಿಸಿ ಅನುಗ್ರಹ ಮಾಡಿ ಸುಖವನ್ನು ಕೊಡುತ್ತಾನೆಂದು ಸಾಮಾನ್ಯವಾಗಿ ಭಾವನೆ ಇರುತ್ತದೆ. ಇದನ್ನು ನಾವೇ ಅನೇಕ ಪುರಾಣ, ಕಥೆಗಳಲ್ಲಿ ದೇವರು ಭಕ್ತರಿಗೆ ಅನುಗ್ರಹ ಮಾಡಿದ ಪ್ರಸಂಗಗಳಿಂದ ತಿಳಿದುಕೊಳ್ಳಬಹುದು. ಇಂತಹ ದೇವರಿಗೆ ಆಕಾರವಿಲ್ಲ, ಅವಯವಗಳಿಲ್ಲ ಗುಣವಿಲ್ಲ, ಕ್ರಿಯೆಯಿಲ್ಲ, ಶೂನ್ಯ, ದೇವರು ಇದ್ದರೆ ಇರಲಿ, ದೇವರು ಸೃಷ್ಟಿಗೆ ಬೇಕಿಲ್ಲ, ದೇವರಿಗೆ ಎಂಟೇ ಗುಣ, ದೇವರಿಗೆ ಆಯಾಸವಾಯಿತು, ದೇವರು ಎಲ್ಲಾ ಕಡೆಯಲ್ಲೂ ಇಲ್ಲ. ದೇವರೇ ಜಗತ್ತಾದ, ದೇವರಿಗೆ ನಾನು ಸಮಾನ, ನಾನೇ ದೇವರು, ಕೊನೆಗೆ ದೇವರೇ ಇಲ್ಲ ಈ ರೀತಿಯಲ್ಲಾ ಹೇಳುವ ವಿಚಾರಗಳನ್ನು ನೋಡಿದರೆ ಇದು ಸರಿಯೇ ಎಂದು ಅನುಮಾನ ಹುಟ್ಟುತ್ತದೆ.

ಇದರಿಂದ ದೇವರಿಗೆ ಆಕಾರವಿಲ್ಲವೆಂದ ಮೇಲೆ ನಾವು ಅವನನ್ನು ಚಿಂತನೆ ಮಾಡಲು ಹೇಗೆ ಸಾಧ್ಯ? ದೇವರು ಸೃಷ್ಟಿ ಮಾಡಿದ ಪ್ರಾಣಿ, ಗಿಡಮರಗಳು, ಬೆಟ್ಟಗುಡ್ಡಗಳು, ಇವುಗಳಿಗೇ ಆಕಾರಗಳಿರುವಾಗ ಇದನ್ನು ಸೃಷ್ಟಿ ಮಾಡಿದ ದೇವರಿಗೆ ಆಕಾರವಿಲ್ಲವೆಂದರೆ ಸರಿಯೇ? ಇಂತಹ ವಿಚಿತ್ರವಾದ ಜಗತ್ತನ್ನು ಸೃಷ್ಟಿಮಾಡಬೇಕಾದರೆ ದೇವರು ಸರ್ವಜ್ಞನಾಗದಿದ್ದರೆ ಹೀಗೆ ಮಾಡುವುದಕ್ಕೆ ಹೇಗೆ ಸಾಧ್ಯವಾಗುತ್ತಿತ್ತು. ನಾನೇ ದೇವರು ಎಂದು ತಿಳಿದುಕೊಳ್ಳುವುದಾದರೆ, ನನಗೆ ಹೇಗೆ ಬೇಕೋ ಹಾಗೆ ಇರಲು ಸಾಧ್ಯವಿಲ್ಲ. ಆದ್ದರಿಂದ ನಮ್ಮ ಮೇಲೆ ದೇವರಿದ್ದೇ ಇರಬೇಕು. ಮಳೆಬಿದ್ದರೂ ಸಹ, ಹುಣಸೇಕಾಯಿ ಹುಳಿಯಾಗುತ್ತದೆ, ಮಾವಿನಹಣ್ಣು ಸಿಹಿಯಾಗುತ್ತದೆ, ಬೇವಿನಕಾಯಿ ಕಹಿಯಾಗುತ್ತದೆ, ಕಬ್ಬು ಸಿಹಿಯಾಗುತ್ತದೆ. ಇದರಿಂದ ಮಳೆಯಲ್ಲಿ ಯಾವ ದೋಷವೂ ಇಲ್ಲ ಅದರದರ ಸ್ವಭಾವವೇ ಅದಕ್ಕೆ ಕಾರಣ. ಹಾಗೆಯೇ ಜಗತ್ತಿನಲ್ಲಿ ಸಾತ್ವಿಕ, ರಾಜಸ, ತಾಮಸ, ಜೀವರು ಮುಂತಾದ ಭೇದಗಳು ಮತ್ತು ತಾರತಮ್ಯಗಳು ಜಗತ್ತಿಗೆ ಕಾಣಿಸುತ್ತಿದ್ದರೂ ಸಹ ಇಲ್ಲವೆಂದು ಹೇಳುವುದು ಸತ್ಯಕ್ಕೆ ದೂರವಾಗುತ್ತದೆ. ಮನುಷ್ಯನ ದೇಹದಲ್ಲಿ, ನಡೆಯಲ್ಲಿ, ನುಡಿಯಲ್ಲಿ, ಕಾರ್ಯಗಳಲ್ಲಿ, ಓಡುವುದರಲ್ಲಿ, ಓದುವುದರಲ್ಲಿ, ಮಾತನಾಡುವುದರಲ್ಲಿ, ತಿಳಿದುಕೊಳ್ಳುವುದರಲ್ಲಿ ಈ ರೀತಿ ನಾನಾ ಭೇದಗಳು ಕಂಡುಬರುತ್ತಿವೆ. ಎಂದರೆ ತಾರತಮ್ಯವೆಂಬುದು ಕಣ್ಣಿಗೆ ಕಾಣಿಸುತ್ತಿದೆ. ಕಛೇರಿಗಳಲ್ಲಿ ಕೆಲಸಗಳಲ್ಲಿ, ಅವರವರ ವೇತನಗಳಲ್ಲಿ, ಕೆಲಸಗಾರರಲ್ಲಿ ತಾರತಮ್ಯವಿದೆ. ಇತ್ಯಾದಿ ಸತ್ಯವಾದ ವಿಚಾರಗಳನ್ನು ಇಲ್ಲವೆಂದು ಹೇಳುವುದು ಸರಿಯೇ? ಮೋಕ್ಷದ ವಿಚಾರದಲ್ಲಿ ಏನೂ ಇಲ್ಲದಂತಾಗುವುದು. ದೇವರಲ್ಲಿ ಐಕ್ಯವಾಗುವುದು, ದೇವರಿಗೆ ಸಮಾನವಾಗುವುದು, ದುಃಖ ಮಾತ್ರ ಕಳೆದುಕೊಳ್ಳುವುದು, ಸುಖ-ದುಃಖ ಎರಡೂ ಕಳೆದುಕೊಳ್ಳುವುದು, ಸುಮ್ಮನೆ ಮೇಲಕ್ಕೇ ಹೋಗುತ್ತಿರುವುದು ಇಂತಹ ಅಭಿಪ್ರಾಯಗಳು ಸರಿಯಾಗಿದೆಯೇ ಯೋಚನೆ ಮಾಡಿ. ಇದೆಲ್ಲಾ ತಪ್ಪು ಎಂದು ಖಂಡಿಸಿ, ನಿರ್ದುಃಖಾನಂದ ಭರಿತವಾದ ಶಾಶ್ವತ ಸುಖ ಎಂಬುದು ಸರಿಯಾದ ಮೋಕ್ಷವೆಂದು ತಿಳಿಸಿದ ತತ್ವವು ಸರಿಯೇ? ವಿಚಾರಮಾಡಿ.

ಶ್ರೀಮದಾನಾಂದತೀರ್ಥಭಗವತ್ಪಾದಾಚಾರ್ಯರು ಸಾಧಕರಾದ ಸಾತ್ವಿಕರ ದೃಷ್ಟಿಯಿಂದ ಇಂತಹ ಪೂರ್ವಪಕ್ಷಗಳ ದೋಷಗಳನ್ನು ತೋರಿಸಿಕೊಟ್ಟು ಅವು ಬಾಧಕಗಳಾಗಿವೆ. ಆದ್ದರಿಂದ ಅವು ಸರಿಯಾದ ದಾರಿಯಲ್ಲ ಎಂಬ ತತ್ವವನ್ನು ತಿಳಿಸಿ ಶ್ರೀಹರಿಯೇ ಸರ್ವೋತ್ತಮ, ವಾಯುಜೀವೋತ್ತಮ, ಹರವಿಷ್ಣು ಭಕ್ತೋತ್ತಮ, ಪಂಚಭೇದ, ತಾರತಮ್ಯ, ಜಗತ್ ಸತ್ಯ, ಎಂಬ ಸತ್‌ಸಿದ್ಧಾಂತವನ್ನು ಉಪದೇಶ ಮಾಡಿ ಅನುಗ್ರಹ ಮಾಡಿದ ದಯಾಗುಣವನ್ನು ಎಷ್ಟು ಹೊಗಳಿದರೂ ಸಾಲದು. ತಾತ್ಪರ್ಯ, ಪರಮತಖಂಡನ ಪೂರ್ವಕ, ಸ್ವಮತ ಸ್ಥಾಪನ ದೀಕ್ಷಾ ಹೊಂದಿ ಹರಿವಾಯುಗಳ ಅನುಗ್ರಹಕ್ಕೆ ಪಾತ್ರರಾಗಬೇಕೆಂಬುವುದೇ ಅಭಿಪ್ರಾಯ.

ಇದನ್ನು ಅನುಸರಿಸದಿದ್ದರೆ ಏನಾಗುತ್ತದೆಂದರೆ 'ಮೂಢೋಮೂರ್ಖೋ ಗಾರ್ಧಪೋ ಏಕರಾಶಿಃ' ಎಂಬಂತೆ ಆಗುತ್ತದೆ. ಮೂಢ ಎಂದರೆ ದಡ್ಡ ಎಷ್ಟು ಹೇಳಿದರೂ ಸಹ ತಲೆಗೆ ಹಿಡಿಸುವುದೇ ಇಲ್ಲ. ಮೂರ್ಖ ಎಂದರೆ ಗೊತ್ತಿದ್ದರೂ ಸಹ ಒಪ್ಪಿಕೊಳ್ಳದೇ ಹಠಮಾರಿತನ ಮಾಡುವುದು. ಕತ್ತೆ ಮಲಗಿದ್ದರೆ 'ಹೈ' ಎಂದು ಹೆದರಿಸಿದರೆ ಅದು ಸುಮ್ಮನೆ ಇರುತ್ತದೆ, ಒಂದು ಏಟು ಕೊಟ್ಟರೆ ತಲೆ ಅಲ್ಲಾಡಿಸುತ್ತೆ, ಎರಡನೇ ಏಟಿಗೆ ನಿಂತುಕೊಳ್ಳುತ್ತದೆ, ಮೂರನೇ ಏಟಿಗೆ ಮೈ ಜಾಡಿಸಿಕೊಳ್ಳುತ್ತದೆ, ನಾಲ್ಕನೇ ಏಟಿಗೆ ಜಾಡಿಸಿ ಓಡಿಹೋಗುತ್ತದೆ. ಇದರಂತೆ ಆಗಬಾರದು.

೮೪ ಲಕ್ಷ ಜೀವ ರಾಶಿಗಳಲ್ಲಿ ನಾಲ್ಕು ಲಕ್ಷ ಮನುಷ್ಯ ಜಾತಿಗೆ ಮಾತ್ರ ಸಾರಾಸಾರ ವಿವೇಕ ಮಾಡುವ ಜ್ಞಾನವುಂಟು, ಇದರಿಂದ ಅದು ಉತ್ತಮ ಸ್ಥಾನಕ್ಕೆ ಹೋಗಲು ಪ್ರಯತ್ನ ಮಾಡಲು ಸಾಧ್ಯ. ಅಂತಹ ಮನುಷ್ಯತ್ವದಲ್ಲಿ ನಾನಾ ಪ್ರಕಾರಗಳಿವೆ - ಕ್ರಿಮಿ-ಕೀಟ, ಪಶು-ಪಕ್ಷಿ, ಮುಂತಾದ ನೂರುಕೋಟಿ ಜನ್ಮ ಕಳೆದ ಮೇಲೆ ಮನುಷ್ಯತ್ವ - ಮನುಷ್ಯರಾಗುವುದು. ಆ ಮನುಷ್ಯರ ಮಹಿಮೆ ಹೀಗಿದೆ -

'ತತ್ರಾಪಿ ಶತಕೋಟಿ ಜನ್ಮಸು ಮಾನುಷತ್ವಂ' - ನೂರು ಕೋಟಿ ಜನ್ಮ ಕಳೆದ ಮೇಲೆ ಮನುಷ್ಯ ಜನ್ಮ.
'ತತ್ರಾಪಿ ಶತಕೋಟಿ ಜನ್ಮಸು ಬ್ರಾಹ್ಮಣತ್ವಂ' - ಇಂತಹ ನೂರುಕೋಟಿ ಜನ್ಮ ಕಳೆದ ಮೇಲೆ ಬ್ರಾಹ್ಮಣ ಜನ್ಮ.
'ತತ್ರಾಪಿ ಶತಕೋಟಿ ಜನ್ಮಸು ವೈಷ್ಣವತ್ವಂ' - ಇಂತಹ ನೂರುಕೋಟಿ ಜನ್ಮ ಕಳೆದ ಮೇಲೆ ವೈಷ್ಣವ ಜನ್ಮ.
'ತತ್ರಾಪಿ ಶತಕೋಟಿ ಜನ್ಮಸು ಮತ್ಪರತ್ವಂ' - ಅಂತಹ ನೂರುಕೋಟಿ ಜನ್ಮ ಕಳೆದ ಮೇಲೆ ಭಗವಂತನ ಕಡೆ ಮನಸ್ಸಿಡುವ ಜನ್ಮ.

ಎಂದರೆ ಶತಕೋಟಿ ಜನ್ಮಗಳನ್ನು ಕಳೆದುಕೊಂಡು ವೈಷ್ಣವನಾಗಿ ಅದರಲ್ಲಿ ಭಗವಂತನ ಕಡೆಗೆ ಮನಸ್ಸು ಬಂದಿರುವಾಗ ನಾವು ಯಾವ ಮಟ್ಟದಲ್ಲಿದ್ದೇವೆಂದು ವಿಚಾರ ಮಾಡಿ, ಮುಂದೆ ಉದ್ಧಾರವಾಗಿ, ಶಾಶ್ವತ ಸುಖ ಸ್ವರೂಪವಾದ ಮೋಕ್ಷವನ್ನು ಹೊಂದುವುದೇ ಕರ್ತವ್ಯ. ಅದು ಬಿಟ್ಟು ಪ್ರಾಣಿಗಳಂತೆ ನಡೆದುಕೊಂಡರೆ, ಪುನಃ ಅಧಃಪಾತಾಳಕ್ಕೆ ಹೋಗಬೇಕಾಗುತ್ತದೆ. ಪುನಃ ಮೇಲಕ್ಕೆ ಯಾವಾಗ ಬರುವುದು?.

ಶ್ರೀಮನ್ಮಧ್ವಾಚಾರ್ಯರು ಸತ್ಯವಾಗಿರುವುದನ್ನೇ ಇದ್ದಂತೆಯೇ ಹೇಳಿದವರು, ಅದರಂತೆ ನಡೆದುಕೊಳ್ಳುವವರು; ಈ ಜಗತ್ತಿನಲ್ಲಿ ಕೂಡ ಅವರು ಹೇಳಿದ ಪ್ರಕಾರವೇ ನಡೆಯುತ್ತಿರುವುದು. ಅದೇ ಪಂಚಭೇದ-ತಾರತಮ್ಯ- ಜಗತ್ಸತ್ಯ ಎಂಬ ತತ್ತ್ವಗಳು ಮತ್ತು ಎಲ್ಲಾ ಪಂಥದವರೂ ಸಾಮಾನ್ಯವಾಗಿ ನಡೆದುಕೊಳ್ಳುತ್ತಿರುವುದೇ ಆಗಿದೆ. ಆದರೂ ಇದನ್ನು ಒಪ್ಪುವುದಿಲ್ಲ ಎಂದರೆ ಎಂತಹ ಆಶ್ಚರ್ಯ. ತಾರತಮ್ಯವಿಲ್ಲ ಎಂದರೆ ತಾರಮ್ಮಯ್ಯ ಆಗಬೇಕಾಗುತ್ತದೆ. ಶಾಲೆ, ಕಛೇರಿ, ಕೋರ್ಟು, ಪೊಲೀಸ್, ಎಲ್ಲಾ ಕಡೆಗಳಲ್ಲೂ ಇದು ಜಾರಿಯಲ್ಲೇ ಇದೆ. ಮಧ್ವ ವ್ಯತಿರಿಕ್ತರು ಇಲ್ಲದಿರುವುದನ್ನು ಹೇಳಿ, ಯಾರೂ ಅದನ್ನು ಮಾಡುವುದಕ್ಕೆ ಸಾಧ್ಯವಿಲ್ಲವಾದರೂ ಅದೇ ಸರಿ ಎಂದು ವಾದಿಸುವುದು ಸರಿಯೇ? ವಿಚಾರ ಮಾಡಿ ನೋಡಿ.

## ಶ್ರೀಮನ್‌ಮಧ್ವಾಚಾರ್ಯರು ಖಂಡಿಸಿದ ೨೧ ಕುಭಾಷ್ಯಗಳು

೧) ಭಾರತೀ ವಿಜಯ, ೨) ಸಚ್ಚಿದಾನಂದ, ೩) ಬ್ರಹ್ಮಘೋಷ, ೪) ಶತಾನಂದ, ೫) ಉದ್ಧರ್ತ, ೬) ವಿಜಯ, ೭) ರುದ್ರಭಟ್ಟ, ೮) ವಾಮನ, ೯) ಯಾದವ ಪ್ರಕಾಶ, ೧೦) ರಾಮಾನುಜ, ೧೧) ಭರ್ತೃ ಪ್ರಪಂಚ, ೧೨) ದ್ರವಿಡ, ೧೩) ಬ್ರಹ್ಮದತ್ತ, ೧೪) ಭಾಸ್ಕರ, ೧೫) ಪಿಶಾಚ, ೧೬) ವೃತ್ತಿಕಾರ, ೧೭) ವಿಜಯಭಟ್ಟ, ೧೮) ವಿಷ್ಣುಕ್ರಾಂತ, ೧೯) ವಾದೀಂದ್ರ, ೨೦) ಮಾಧವದಾಸ, ೨೧) ಸಂಕರ.

ನಮ್ಮ ಗುರುಗಳಾದ ಯಲಮೇಲಿ ಆಚಾರ್ಯರ ಸುಲಭ ಬೋಧನ ವೈಖರಿ

# ಶೂನ್ಯವಾದ ಮಾಯಾವಾದಗಳ ಸಾಮ್ಯತೆ

## ಬೌದ್ಧ ಶೂನ್ಯವಾದ




ಬ್ರಹ್ಮ ಒಂದೇ ಎಂದು ಹೇಳಿ ಪುನಃ ಅವಿದ್ಯಾ ಇದೆ ಎಂದು ಹೇಳಿದರೆ - ಅದ್ವೈತ ಹಾನಿ
ಬ್ರಹ್ಮನಿಗೆ ನಿರ್ಗುಣ ಎಂದು ಹೇಳಿ ಅಜ್ಞಾನ ಬಂತು ಎಂದರೆ - ನಿರ್ಗುಣತ್ವ ಹಾನಿ
} ಎರಡು ಹಾನಿಗಳು ಸೇರಿದ್ದರಿಂದ ದ್ವೈತವೇ ಸಿದ್ಧವಾಯಿತು.

## ವಿಶಿಷ್ಟಾದ್ವೈತ (ಶ್ರೀವೈಷ್ಣವ)

ವೇದ ಪ್ರಮಾಣ




## ಶಕ್ತಿ ವಿಶಿಷ್ಟಾದ್ವೈತ (ವೀರಶೈವ)

(ಶಿವಾಗಮ ಪ್ರಮಾಣ)



# ದ್ವೈತ

ಪ್ರಮಾಣ ೪ ವೇದಗಳು, ಮೂಲ ರಾಮಾಯಣ, ಮಹಾಭಾರತ, ಪಂಚರಾತ್ರಾಗಮ

**ಬ್ರಹ್ಮ (ವಿಷ್ಣು)**
ದುಃಖರಹಿತ ಸುಖಪೂರ್ಣ
ಸ್ವತಂತ್ರ, ಸರ್ವಶಕ್ತ, ಸರ್ವೇಶ್ವರ, ಸರ್ವಜ್ಞ,
ಸರ್ವೋತ್ತಮ, ಜೀವ, ಜಡರಿಂದ ಅತ್ಯಂತ ಭಿನ್ನ
ರಮಾಬ್ರಹ್ಮಾದಿ ಜಗತ್ತಿನ ಸೃಷ್ಟ್ಯಾದಿ ಅಷ್ಟಕರ್ತೃತ್ವವುಳ್ಳವನು

**ಜೀವ**
(ಸುಖದುಃಖ ಸಹಿತ)
ಬ್ರಹ್ಮನಿಂದ ಭಿನ್ನ ಮತ್ತು
ಅವನ ಅಧೀನ

**ತತ್ತ್ವ**
ಹರಿಸರ್ವೋತ್ತಮ - ವಾಯುಜೀವೋತ್ತಮ
ಪಂಚಭೇದ ತಾರತಮ್ಯ ಜಗತ್‌ಸತ್ಯ
ಇದು
ಸಾತ್ವಿಕರ ಮೋಕ್ಷಕ್ಕೆ ಸಾಧಕವಾದ ಜ್ಞಾನ
ಭಗವಂತನ ಪರಮ ಪ್ರಸಾದದಿಂದಲೇ ಮೋಕ್ಷ
ಮೋಕ್ಷದಲ್ಲಿಯೂ ಹರಿಯ ಅಧೀನವೇ

**ಜಡ**
(ಸುಖದುಃಖ ರಹಿತ)
ಬ್ರಹ್ಮನಿಂದ ಭಿನ್ನ ಮತ್ತು
ಅವನ ಅಧೀನ.
೨೪ ತತ್ತ್ವಗಳಿಂದ ಮತ್ತು
ತ್ರಿಗುಣಗಳಿಂದ ಸತ್ಯವಾದ ಸೃಷ್ಟಿ.

**ಜೀವರಲ್ಲಿ ತ್ರೈವಿಧ್ಯ**

**ಸಾತ್ವಿಕ ಜೀವರು**
ಸ್ವರೂಪದಲ್ಲಿ ಯಥಾರ್ಥ ಜ್ಞಾನವುಳ್ಳವರು
ನಿರ್ದುಃಖಾನಂದ ಭರಿತವಾದ
ಶಾಶ್ವತ ಮೋಕ್ಷಾಧಿಕಾರಿಗಳು

**ರಾಜಸ ಜೀವರು**
ಸ್ವರೂಪದಲ್ಲಿ ಮಿಶ್ರ ಜ್ಞಾನವುಳ್ಳವರು
ಸುಖದುಃಖ ಸಹಿತವಾದ ನಿತ್ಯ ಸಂಸಾರಿಗಳು

**ತಾಮಸ ಜೀವರು**
ಸ್ವರೂಪದಲ್ಲಿ ಅಯಥಾರ್ಥ ಜ್ಞಾನವುಳ್ಳವರು
ಸುಖವಿಲ್ಲದ ಪರಮ ದುಃಖ ಪೂರಿತವಾದ
ಶಾಶ್ವತ ನರಕ ಭಾಗಿಗಳು

ತ್ರಿವಿಧ ಜೀವರು ಬಾಹ್ಯದಲ್ಲಿ ಯಥಾರ್ಥ ಮತ್ತು ಅಯಥಾರ್ಥ ಜ್ಞಾನವುಳ್ಳವರು (ಬಾಹ್ಯಜ್ಞಾನ ಯಥಾರ್ಥ ಅಯಥಾರ್ಥ)

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

# ತತ್ತ್ವ ಸಂಖ್ಯಾನದಲ್ಲಿರುವಂತೆ ತತ್ತ್ವ ವಿಭಾಗ




ಈ ಪ್ರತ್ಯಕ್ಷಾದಿ ಪ್ರಮಾಣಸಿದ್ಧ (ವಿಷ್ಣು ಭಿನ್ನ) ರಮಾ ಮೊದಲಾದ ಭಾವಾ ಭಾವಾದಿ ಭೇದಗಳಿಂದ ಭಿನ್ನವಾದ ಅಸ್ವತಂತ್ರ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರ ನಿಯಮನ, ಅಜ್ಞಾನ (ಭಾವರೂಪ, ಅಭಾವರೂಪ), ಜ್ಞಾನ ಬಂಧ, ಮೋಕ್ಷ, ಸುಖ, ದುಃಖ, ಬಾಹ್ಯಾವರಣ, ಬಾಹ್ಯಪ್ರಕಾಶ ಇವು ಸಂಕ್ಷೇಪದಿಂದಲೂ ವಿಸ್ತಾರದಿಂದಲೂ (ಆಯಾಮಾ ವಸ್ತುಗಳಿಗೆ ಉಚಿತವಾದದ್ದು) ವಿಷ್ಣುವಿನಿಂದಲೇ ಆಗುವುವು (ಎಲ್ಲದರ ಸ್ವರೂಪ ಸ್ವಭಾವಗಳು ಭಗವದಧೀನ) ಈ ಜ್ಞಾನ ಮೋಕ್ಷಕ್ಕೆ ಸಾಧನ).

ಈ ಧರ್ಮಗಳಲ್ಲಿ ಎಲ್ಲಕ್ಕೂ ಸ್ಥಿತಿ ನಿಯಮಗಳು, ಸೃಷ್ಟಿ ಸಂಹಾರಗಳು ನಿತ್ಯಾನಿತ್ಯಕ್ಕೆ ಮತ್ತು ಅನಿತ್ಯಕ್ಕೆ ಅಜ್ಞಾನ ಭಾವರೂಪವಾದದ್ದು ದುಃಖಸ್ಪೃಷ್ಟಕ್ಕೆ. ಜ್ಞಾನಭಾವ ರೂಪವಾದದ್ದು ಎಲ್ಲಕ್ಕೂ. ಬೋಧನ ಚೇತನಕ್ಕೆ ಸುಖ, ತಮಸ್ಸು ಹೊಂದಿದವರನ್ನು ಬಿಟ್ಟು (ಮಿಕ್ಕವರಿಗೆ) ದುಃಖ ದುಃಖಾಸ್ಪೃಷ್ಟವನ್ನು ಬಿಟ್ಟು (ಮಿಕ್ಕವರಿಗೆ) ಇತ್ಯಾದಿ ತಿಳಿಯಬೇಕು.

**ಸತಿಯು ಅನುಕೂಲಬೇಕು ಸುತನಲ್ಲಿ ಗುಣಬೇಕು - ಮತಿವಂತನಾಗಬೇಕು ಮಧ್ವಮತವಪೊಂದಿರಬೇಕು.**

# ಸರ್ವಮೂಲ ಗ್ರಂಥದ ಬಗ್ಗೆ ಸಂಕ್ಷಿಪ್ತ ಪರಿಚಯ

ಶ್ರೀವ್ಯಾಸರಾಜ ಕೃತ ಗ್ರಂಥಮಾಲಿಕಾ ಸ್ತೋತ್ರ ಪ್ರಕಾರದಂತೆ

## ೧. ಶ್ರೀ ಗೀತಾಭಾಷ್ಯ

ಭಗವದ್ಗೀತೆಗೆ, ಶ್ರೀಕೃಷ್ಣನಿಗೆ ಸಮ್ಮತವಾದ ಅರ್ಥವನ್ನು ತಿಳಿಸಿ, ಇತರರು ಕಲ್ಪಿಸುವ ಅಪಾರ್ಥಗಳ ನಿರಾಕರಣೆಯನ್ನು ಸೂಚಿಸಲಾಗಿದೆ.

## ೨. ಬ್ರಹ್ಮಸೂತ್ರಭಾಷ್ಯ

ಶ್ರೀಬಾದರಾಯಣಪ್ರಣೀತವಾದ ಬ್ರಹ್ಮಸೂತ್ರಗಳ ಪ್ರತಿಪದದ ಅರ್ಥವನ್ನು ತಿಳಿಸಿಕೊಡುವ ಈ ಗ್ರಂಥದಲ್ಲಿ, ನಾಲ್ಕು ಅಧ್ಯಾಯಗಳಲ್ಲಿ ಕ್ರಮವಾಗಿ ನಾರಾಯಣನು ಗುಣಪೂರ್ಣನೆಂದು, ದೋಷದೂರನೆಂದು, ಸಕಲವೇದಪ್ರತಿಪಾದ್ಯನೆಂದು, ಮುಕ್ತಗಮ್ಯನೆಂದು ತಿಳಿಸಲ್ಪಟ್ಟಿದೆ.

## ೩. ಅಣುಭಾಷ್ಯ :

ಕೇವಲ ಮೂವತ್ತೆರಡು ಶ್ಲೋಕಗಳುಳ್ಳ ಈ ಪುಟ್ಟಗ್ರಂಥದಲ್ಲಿ ಸಾಧಕರಿಗೆ ಪಾರಾಯಣಕ್ಕೆ ಅನುಕೂಲವಾಗುವಂತೆ, ಬ್ರಹ್ಮಸೂತ್ರಭಾಷ್ಯದ ನಾಲ್ಕೂ ಅಧ್ಯಾಯದ ಸಂಗ್ರಹವನ್ನು ಮಾಡಲಾಗಿದೆ.

## ೪. ಅನುವ್ಯಾಖ್ಯಾನ :

ಬ್ರಹ್ಮಸೂತ್ರಭಾಷ್ಯದಲ್ಲಿ ಅಡಗಿರುವ ನ್ಯಾಯಗಳನ್ನು ಸ್ಪಷ್ಟಮಾಡಲು ಈ ಗ್ರಂಥವು ಹೊರಟಿದೆ. (ಅನುವ್ಯಾಖ್ಯಾನದ ವ್ಯಾಖ್ಯಾನವೇ ಟೀಕಾಕೃತ್ಪಾದರ ಮೇರುಕೃತಿಯಾದ ಶ್ರೀಮನ್ನ್ಯಾಯಸುಧಾ).

## ೫. ಪ್ರಮಾಣ ಲಕ್ಷಣ

ಪ್ರಮಾಣಗಳ ಲಕ್ಷಣ, ವಿಭಾಗ ಹಾಗೂ ಪರೀಕ್ಷೆಗಳನ್ನು ಮಾಡಲಾಗಿದೆ. ಆಚಾರ್ಯರ ಮತದಂತೆ ಪ್ರಮಾಣಗಳು ಕೇವಲ ಪ್ರಮಾಣ ಮತ್ತು ಅನುಪ್ರಮಾಣ ಎಂದು ಎರಡು ವಿಧ.

**ಕೇವಲ ಪ್ರಮಾಣ** - ಯಥಾರ್ಥ ಜ್ಞಾನ : ಅನುಪ್ರಮಾಣ ಯಥಾರ್ಥಜ್ಞಾನ ಸಾಧಕ
ಇದು ಪ್ರತ್ಯಕ್ಷ, ಅನುಮಾನ, ಆಗಮವೆಂದು ಮೂರು ವಿಧ.

**ಪ್ರತ್ಯಕ್ಷ** - ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ, ಮನಸ್ಸು ಮತ್ತು ಸಾಕ್ಷಿಗೆ ಗೋಚರ
**ಅನುಮಾನ** - ಊಹೆ, ತರ್ಕ.

ಉದಾ : ಪರ್ವತದಲ್ಲಿ ಅಗ್ನಿ ಇದೆ. ಹೊಗೆ ಇರುವುದರಿಂದ ದೃಷ್ಟಾಂತ = ಅಡಿಗೆಮನೆಯಂತೆ.
**ಆಗಮ** - ಶಬ್ದಗಳು, ಅಪೌರುಷೇಯವಾದ ವೇದವಾಕ್ಯಗಳು.
ಉದಾ: ಸತ್ಯಂ ವದ-ಧರ್ಮಂ ಚರ ಇತ್ಯಾದಿಗಳು ಮತ್ತು ಪೌರುಷೇಯವಾದ ಮಹಾಭಾರತಾದಿಗಳು.

## ೬. ಕಥಾಲಕ್ಷಣ :

ಅನೇಕರು ಸೇರಿ ಮಾಡತಕ್ಕ ವಿಚಾರಾತ್ಮಕ ವಾಕ್ಯಪ್ರಬಂಧಕ್ಕೆ ಕಥಾ ಎನ್ನುವರು. ಇದರಲ್ಲಿ ವಾದ, ಜಲ್ಪ, ವಿತಂಡ ಎಂಬ ಮೂರುವಿಧಗಳಿವೆ. ಇವುಗಳ ನಿರ್ಣಯವನ್ನು ಈ ಗ್ರಂಥದಲ್ಲಿ ಮಾಡಲಾಗಿದೆ.

**ವಾದ** - ಎಂದರೆ ಕೇವಲ ಸರಿಯಾದ ತತ್ತ್ವ ನಿಶ್ಚಯಿಸುವುದಕ್ಕಾಗಿ ಮಾಡುವ ಚರ್ಚೆ. ಇದರಲ್ಲಿ ಪಕ್ಷಪಾತಗಳಾಗಲೀ, ದುರಾಗ್ರಹಗಳಾಗಲೀ ಇರುವುದಿಲ್ಲ. ಯಾವುದು ಸರಿಯಾದ ತತ್ತ್ವವೋ ಅದನ್ನು ಅಂಗೀಕರಿಸುವುದು.

**ಜಲ್ಪ** - ಕೀರ್ತಿ ಅಥವಾ ಧನವನ್ನು ಅಪೇಕ್ಷಿಸಿ ಸಜ್ಜನರೇ ಮಾಡುವ ಕಥೆ. ಇದರಲ್ಲಿ ತತ್ವ ನಿಶ್ಚಯವು ಆದರೂ ಆಗಬಹುದು. ತತ್ವನಿಶ್ಚಯವು ಉದ್ದಿಷ್ಯವಲ್ಲ.

**ವಿತಂಡ** - ಸಜ್ಜನರು ಮತ್ತು ಅಸಜ್ಜನರು ಮಾಡುವ ಕಥೆ. ಇದರಲ್ಲಿ ಸಜ್ಜನರು ಅಸಜ್ಜನರ ಮತವನ್ನು ಮಾತ್ರ ಖಂಡಿಸಬೇಕು. ಸ್ವಮತವನ್ನು ಸಾಧಿಸಬಾರದು.

## ೭. ಉಪಾಧಿಖಂಡನ

ಭೇದವು ಸ್ವಾಭಾವಿಕವಲ್ಲ ; ಅದು ಉಪಾಧಿಯಿಂದ ಬಂದಿರತಕ್ಕದ್ದು ಎಂಬ ವಾದವನ್ನು ನಿರಾಕರಿಸುವ ಮೂಲಕ ಮಾಯಾವಾದಿಗೆ ಅಭಿಪ್ರೇತವಾದ ಅನುಬಂಧಚತುಷ್ಟಯವನ್ನು ಖಂಡಿಸಲಾಗಿದೆ.

## ೮. ಮಾಯಾವಾದಖಂಡನ

ವಿಶ್ವವೆಲ್ಲವೂ ಬ್ರಹ್ಮನ ಮಾಯೆಯಿಂದ ಕಲ್ಪಿತ ಎಂಬುವುದು ಮಾಯಾವಾದ. ಈ ಮಾಯಾವಾದದಂತೆ ಶಾಸ್ತ್ರವು ಅನಾರಂಭಣೀಯವಾಗುತ್ತದೆಂದು ಉಪಪಾದನೆ ಮಾಡಿ, ಸಿದ್ಧಾಂತದ ರೀತಿ ಶಾಸ್ತ್ರಾರಂಭಕ್ಕೆ ಉಪಯುಕ್ತವಾದ ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧಗಳನ್ನು ಪ್ರತಿಪಾದಿಸಲಾಗಿದೆ.

**ಅನುಬಂಧ ಚತುಷ್ಟಯ**

ವಿಷಯ - ಗ್ರಂಥದಲ್ಲಿ ಹೇಳುವ ವಿಚಾರ
ಪ್ರಯೋಜನ- ಆ ಗ್ರಂಥದಿಂದ ಆಗುವ ಲಾಭ,
ಅಧಿಕಾರಿ - ಇದನ್ನು ತಿಳಿದುಕೊಳ್ಳುವುದಕ್ಕೆ ಯೋಗ್ಯರು ಯಾರು ಎಂಬ ವಿಚಾರ.
ಸಂಬಂಧ - ಮೇಲ್ಕಂಡ ವಿಷಯ, ಪ್ರಯೋಜನ, ಅಧಿಕಾರಿಗಳಿಗೆ ಇರುವ ಪರಸ್ಪರಸಂಬಂಧ ಏನು ಎಂಬ ವಿಚಾರ.

## ೯. ಪ್ರಪಂಚಮಿಥ್ಯಾತ್ವಾನುಮಾನಖಂಡನ

ಜಗತ್ತು ಮಿಥ್ಯೆಯೆಂದು ಸಾಧಿಸಲು ಮಾಯಾವಾದಿಯು ಪ್ರಯೋಗಿಸುವ ದೃಶ್ಯತ್ವಾನುಮಾನದಲ್ಲಿ ಎಲ್ಲಾ ಅನುಮಾನ ದೋಷಗಳೂ ಇರುವುದರಿಂದ ಆ ಅನುಮಾನವು ದುಷ್ಟವೆಂದು ತೋರಿಸಲಾಗಿದೆ.

## ೧೦. ತತ್ತ್ವಸಂಖ್ಯಾನ

ಸ್ವತಂತ್ರ, ಅಸ್ವತಂತ್ರ ಎಂದು ತತ್ತ್ವವು ಎರಡು ವಿಧ. ಭಗವಾನ್ ವಿಷ್ಣುವೇ ಸ್ವತಂತ್ರತತ್ತ್ವ ಎಂದು ತಿಳಿಸಿ, ಅಸ್ವತಂತ್ರ ತತ್ತ್ವದ ವಿಭಾಗಗಳನ್ನೂ ತಿಳಿಸಲಾಗಿದೆ. ಇದು ವಿಷ್ಣುದರ್ಶನ ಮಾಡಲು ಸಾಧಕವಾದ ಗ್ರಂಥ.

## ೧೧. ತತ್ತ್ವವಿವೇಕ

ತತ್ತ್ವಸಂಖ್ಯಾನದಲ್ಲಿ ತಿಳಿಸಲಾಗಿರುವ ವಿಷಯಗಳಲ್ಲಿ ಭಗವಂತನ ವಚನಗಳನ್ನು ಪ್ರಮಾಣವಾಗಿ ಉದಾಹರಿಸಲಾಗಿದೆ. ದ್ರವ್ಯಗಳಲ್ಲದೆ ಗುಣ, ಕ್ರಿಯಾ, ಜಾತಿಗಳೆಂಬ ತತ್ತ್ವಗಳನ್ನೂ ವಿವೇಚನೆ ಮಾಡಲಾಗಿದೆ.

## ೧೨. ತತ್ತ್ವೋದ್ಯೋತ

ಮುಕ್ತಿಯಲ್ಲಿ ಭೇದ ಉಂಟೆಂದು ಅನುಮಾನ ಹಾಗೂ ಆಗಮಗಳಿಂದ ಸಾಧಿಸಲಾಗಿದೆ. ಇದಕ್ಕೆ ವಿರುದ್ಧವಾದ ಅಭೇದಮತವನ್ನು ನಿರಾಕರಿಸಲಾಗಿದೆ.

## ೧೩. ಕರ್ಮನಿರ್ಣಯ

'ಮಹಾನಾಮ್ನೀ' ಮಂತ್ರಗಳ ವ್ಯಾಖ್ಯಾನರೂಪವಾದ ಈ ಗ್ರಂಥದಲ್ಲಿ ಭಗವಂತನ ಗುಣಪೂರ್ಣತ್ವಕ್ಕೆ ವಿರುದ್ಧವಾದ ನಿರ್ಗುಣತ್ವವಾದ ಮತ್ತು ಕಾರ್ಯತಾವಾದವನ್ನು ಖಂಡಿಸಲಾಗಿದೆ. ಕರ್ಮಾನುಷ್ಠಾನದಲ್ಲಿ ಇರಬೇಕಾದ ಅವಶ್ಯ ಅನುಸಂಧಾನವನ್ನು ತಿಳಿಸಲಾಗಿದೆ.

## ೧೪. ವಿಷ್ಣುತತ್ತ್ವನಿರ್ಣಯ

ಮೂರು ಪರಿಚ್ಛೇದಗಳಿರುವ ಈ ಗ್ರಂಥದಲ್ಲಿ ಪ್ರಥಮಪರಿಚ್ಛೇದದಲ್ಲಿ ವಿಷ್ಣುವು ಸಕಲ ಸಚ್ಛಾಸ್ತ್ರಗಳಿಂದಲೇ ವಿಜ್ಞೇಯನೆಂದು, ಎರಡನೆಯ ಪರಿಚ್ಛೇದದಲ್ಲಿ ಆತನು ಕ್ಷರಾಕ್ಷರಪುರುಷರ ದೆಸೆಯಿಂದ ಉತ್ತಮನೆಂದೂ, ಮೂರನೆಯ ಪರಿಚ್ಛೇದದಲ್ಲಿ ನಿರ್ದೋಷ ಅನಂತಕಲ್ಯಾಣಗುಣ-ಪರಿಪೂರ್ಣನೆಂದು ಸಾಧಿಸಲಾಗಿದೆ. ಇದಕ್ಕೆ ಉಪಯುಕ್ತವಾದ ವೇದಪ್ರಾಮಾಣ್ಯವಾದ, ಪೌರುಷೇಯತ್ವವಾದ, ಪ್ರಾಮಾಣ್ಯಸ್ವತಸ್ತ್ವವಾದ, ವರ್ಣನಿತ್ಯತ್ವವಾದ, ಭೇದವಾದಗಳನ್ನೂ ಮಂಡಿಸಿ, ಕಾರ್ಯತಾವಾದ ಹಾಗೂ ಐಕ್ಯವಾದಗಳನ್ನು ಖಂಡಿಸಲಾಗಿದೆ.

## ೧೫. ಋಗ್ಭಾಷ್ಯ

ಋಗ್ವೇದದ ನಲವತ್ತು ಸೂಕ್ತಗಳಿಗೆ ವಿಷ್ಣುಪರವಾದ, ದೇವತಾಪರವಾದ ಮತ್ತು ಆಧ್ಯಾತ್ಮ ಪರವಾದ ವ್ಯಾಖ್ಯಾನಗಳನ್ನು ಮಾಡಲಾಗಿದೆ. ಋಷಿ, ಛಂದಸ್ಸು, ದೇವತೆಗಳ ವಿಚಾರವೂ ಸೂಕ್ತ ಅನುವಾಕಗಳ ಲಕ್ಷಣಗಳೂ, ಅಗ್ನ್ಯಾದಿ ಸೂಕ್ತ ನಿಯಮಗಳೂ ಹೇಳಲ್ಪಟ್ಟಿದೆ.

## ೧೬. ಐತರೇಯಭಾಷ್ಯ

ಮಹಿದಾಸರೂಪಿ ಪರಮಾತ್ಮನಿಂದ ದೃಷ್ಟವಾದ ಈ ಉಪನಿಷತ್ತಿನಲ್ಲಿ ಬೃಹತೀಸಹಸ್ರದ ಮಹಿಮೆ, ಅಕಾರಾರ್ಥ, ವಿಷ್ಣುಶಬ್ದಾರ್ಥ, ಪ್ರಾಣದೇವರ ಮಹಿಮೆ, ಅನಿಷ್ಟಸೂಚಕ ದುಃಸ್ವಪ್ನಗಳು ಹಾಗೂ ಅವುಗಳ ಪರಿಹಾರ ಮೊದಲಾದ ವಿಷಯಗಳು ವರ್ಣಿತವಾಗಿವೆ.

## ೧೭. ತೈತ್ತಿರೀಯಭಾಷ್ಯ

ಬ್ರಹ್ಮದೇವರಿಂದ ವರುಣದೇವರಿಗೂ, ವರುಣದೇವರಿಂದ ಭೃಗುಮಹರ್ಷಿಗೂ ಪ್ರಾಪ್ತವಾದ ಈ ಉಪನಿಷತ್ತಿನಲ್ಲಿ ಶಿಕ್ಷಾವಲ್ಲೀ, ಬ್ರಹ್ಮಾನಂದವಲ್ಲೀ, ಭೃಗುವಲ್ಲೀ ಎಂಬ ಮೂರು ಭಾಗಗಳಿವೆ. ಇವುಗಳಲ್ಲಿ ಅನ್ನಮಯಾದಿ ಪಂಚರೂಪಿ ಪರಮಾತ್ಮನ ಉಪಾಸನೆ, ವ್ಯಾಹೃತಿ ಉಪಾಸನೆ, ಪ್ರಣವದ ಮಹಾತ್ಮೆ, ಸ್ವಾಧ್ಯಾಯ - ಪ್ರವಚನಗಳ ಮಹತ್ವ, ಮುಕ್ತರ ತಾರತಮ್ಯ ಮೊದಲಾದ ಪ್ರಮೇಯಗಳಿವೆ.

## ೧೮. ಬೃಹದಾರಣ್ಯಕಭಾಷ್ಯ

ಕುದುರೆರೂಪದ ಸೂರ್ಯನಿಂದ ಯಾಜ್ಞವಲ್ಕ್ಯರಿಗೆ ಪ್ರಾಪ್ತವಾದ ಈ ಉಪನಿಷತ್ತಿನಲ್ಲಿ ಜನಕ-ಯಾಜ್ಞವಲ್ಕ್ಯರ ಸಂವಾದ ಹಾಗೂ ಜನಕರಾಜರ ಸಭೆಯಲ್ಲಿದ್ದ ಋಷಿಗಳಿಗೂ ಯಾಜ್ಞವಲ್ಕ್ಯರಿಗೂ ನಡೆದ ಸಂವಾದಗಳ ಮೂಲಕ ಅನೇಕ ಪ್ರಮೇಯಗಳನ್ನು ವರ್ಣಿಸಲಾಗಿದೆ. ಪಂಚಮಹಾಯಜ್ಞಗಳೂ ಹಾಗೂ ಉಪನಿಷತ್ತಿನ ಕ್ರಮದಿಂದ ಸತ್ಸಂತಾನವನ್ನು ಪಡೆಯುವ ಕ್ರಮವೂ ವರ್ಣಿತವಾಗಿದೆ.

## ೧೯. ಈಶಾವಾಸ್ಯಭಾಷ್ಯ

ಸ್ವಾಯಂಭುವಮನುಗಳು ಯಜ್ಞರೂಪಿ ಪರಮಾತ್ಮನನ್ನು ಸ್ತೋತ್ರ ಮಾಡಿದ ಈ ಉಪನಿಷತ್ತಿನಲ್ಲಿ ಸಾಧಕರಿಗೆ ಅವಶ್ಯಕವಾದ ವೈರಾಗ್ಯ ಮತ್ತು ಕರ್ಮಾಚರಣೆಗಳನ್ನು ವಿಧಿಸಿ ವಿದ್ಯಾಸಂಪಾದನೆಯು ಎಷ್ಟು ಮುಖ್ಯವೋ, ಅವಿದ್ಯಾ ನಿಂದನೆಯೂ ಅಷ್ಟೇ ಮುಖ್ಯ ಎಂದು ಹೇಳುತ್ತಾರೆ.

ಶ್ರೀಹರಿಯಲ್ಲಿ ಭಕ್ತಿ ಮಾಡುವುದು ಅಂದರೆ ಸುಮ್ಮನೆ ಕೈಮುಗಿದು ಸ್ತೋತ್ರ ಮಾಡುವುದು ಎಂದು ಮಾತ್ರ ಅರ್ಥವಲ್ಲ. ಅದು ಎರಡು ದಳಾತ್ಮಕವಾದುದು; 1) ಶ್ರೀಹರಿಯನ್ನು ದೋಷದೂರ, ಗುಣಪರಿಪೂರ್ಣ ಎಂದು ತಿಳಿದುಕೊಂಡು ಸರ್ವೋತ್ತಮತ್ವೇನ ಪ್ರೀತಿಸುವುದು. 2) ಹರಿದ್ವೇಷ ಮಾಡುವವರನ್ನು ಖಂಡಿಸಿ ನಿಂದಿಸುವುದು. ಇದು ಏತಕ್ಕೆ, ಸುಮ್ಮನೆ ಭಕ್ತಿ ಮಾಡಿದರೆ ಸಾಲದೇ? ಎಂದರೆ, ದ್ವೇಷಿಗಳನ್ನು ಖಂಡಿಸದಿದ್ದರೆ ಅವರನ್ನು ನಾವು ಒಪ್ಪಿಕೊಂಡಂತಾಯಿತು. ಆದ್ದರಿಂದ ದ್ವೇಷಿಗಳಿಗಿಂತ ಹೆಚ್ಚು ದ್ವೇಷಿಗಳಾಗುತ್ತೇವೆ. ಉದಾ : ನಮ್ಮನ್ನು ಯಾರಾದರೂ ಕುಂಟ, ಕಿವುಡ ಎಂದು ಬೈದರೆ ಅಥವಾ ನಮ್ಮ ಮಕ್ಕಳನ್ನು, ಕೊನೆಗೆ ನಮ್ಮ ಮನೆಯ ಮುಂದೆ ಬೀದಿಯಲ್ಲಿ ಬಿದ್ದಿರುವ ನಾಯಿಮರಿಯನ್ನು ಬೈದರೆ ಜಗಳ ಆಡುವುದಕ್ಕೆ ಹೋಗುತ್ತೇವೆ. ಇದಕ್ಕೆ ಕಾರಣ ಅವುಗಳಲ್ಲಿರುವ ಪ್ರೀತಿ. ಇಂತಹ ಅನಿತ್ಯವಸ್ತುಗಳ ಮೇಲಿನ ಪ್ರೀತಿಗಾಗಿ ಅದನ್ನು ದ್ವೇಷ ಮಾಡುವವರೊಡನೆ ಜಗಳಕ್ಕೆ ಹೋಗುವಾಗ - ನಿತ್ಯನೂ, ಪರಿಪೂರ್ಣನೂ, ಶಾಶ್ವತಸುಖವನ್ನು ಕೊಡುವ ಶ್ರೀಹರಿಯಲ್ಲಿ ದ್ವೇಷ ಮಾಡುವವರನ್ನು ನಾವು ದ್ವೇಷ ಮಾಡದಿದ್ದರೆ ನಾವು ಹೇಗೆ ವಿಷ್ಣುಭಕ್ತರಾಗುತ್ತೇವೆ. ಸರಿಯಾಗಿದೆಯೇ ಯೋಚಿಸಿ ನೋಡಿ. ಹರಿದ್ವೇಷಿಗಳನ್ನು ನಿಂದಿಸದಿದ್ದರೆ ನಾವು ಅವರ ಪಕ್ಷಕ್ಕೆ ಸೇರಿದಂತಾಗಿ ಹರಿದ್ವೇಷಿಗಳೇ ಆಗುತ್ತೇವೆ. ಇದರಿಂದ ಅವರಿಗೆ ಆಗುವ ನರಕಕ್ಕಿಂತ ಹೆಚ್ಚಿಗೆ ನರಕ ಅನುಭವಿಸಬೇಕಾಗುತ್ತದೆ.

ಹರಿಯಲ್ಲಿ ಭಕ್ತಿ ಮಾಡುವುದಕ್ಕಿಂತ ಹರಿದ್ವೇಷ ಮಾಡುವವರನ್ನು ದ್ವೇಷಿಸುವುದು ಅಥವಾ ಖಂಡಿಸುವುದು ಭಗವಂತನಿಗೆ ಅತಿಪ್ರೀತಿಯಾದದ್ದು. ಉದಾ : ರಾಜಸೂಯಯಾಗದಲ್ಲಿ ಶ್ರೀಕೃಷ್ಣನ ಎದುರಿಗೇ ಹೋಮ ಮಾಡಿದ ಕಾರ್ಯಕ್ಕಿಂತ ಮಹಾವಿಷ್ಣು ದ್ವೇಷಿಯಾದ ಜರಾಸಂಧನನ್ನು ಭೀಮಸೇನದೇವರು ಸಂಹಾರ ಮಾಡಿ ಶ್ರೀಕೃಷ್ಣಾರ್ಪಣ ಎಂದದ್ದು ಭಗವಂತನಿಗೆ ಹೆಚ್ಚಿಗೆ ಸಂತೋಷವನ್ನುಂಟು ಮಾಡಿತು.

## ೨೦. ಕಾಠಕಭಾಷ್ಯ

ಯಮ - ನಚಿಕೇತರ ಸಂವಾದ ರೂಪವಾದ ಈ ಉಪನಿಷತ್ತಿನಲ್ಲಿ ಸ್ವರ್ಗ್ಯಾಗ್ನಿಯಲ್ಲಿರುವ ಹಾಗೂ ಮೃತ, ಮುಕ್ತರಲ್ಲಿ ನಿಯಾಮಕನಾಗಿರುವ ಭಗವಂತನ ಮಹಿಮೆಯನ್ನು ವರ್ಣಿಸಲಾಗಿದೆ.

## ೨೧. ಛಾಂದೋಗ್ಯ ಭಾಷ್ಯ

ರಮಾದೇವಿಯವರು, ಶ್ರೀಹಯಗ್ರೀವದೇವರ ಮುಖದಿಂದ ಬಂದ ವೇದವಾಕ್ಯಗಳಿಂದ ಭಗವಂತನನ್ನು ಸ್ತುತಿಸಿರುವ ಈ ಉಪನಿಷತ್ತಿನಲ್ಲಿ ಉದ್ಗೀಥನ ಉಪಾಸನೆ, ವಾಯುದೇವರ

ಜೀವೋತ್ತಮತ್ವ, "ತತ್ವಮಸಿ" ವಾಕ್ಯಾರ್ಥ, ಮಧುವಿದ್ಯೆ, ಷೋಡಶ ಕಲೆಗಳ ತಾರತಮ್ಯ ಮೊದಲಾದ ವಿಷಯಗಳುಂಟು.

**೨೨. ಆಥರ್ವಣಭಾಷ್ಯ**

ಬ್ರಹ್ಮದೇವರು ತಮ್ಮ ಜ್ಯೇಷ್ಠಪುತ್ರರಾದ ಅಥರ್ವಋಷಿಗಳಿಗೆ ಉಪದೇಶ ಮಾಡಿದ ಈ ಉಪನಿಷತ್ತಿನಲ್ಲಿ ಪರಾಪರ ವಿದ್ಯೆಗಳ ವಿಶ್ಲೇಷಣೆ, ಯಜ್ಞದಲ್ಲಿ ಮಾಡಬೇಕಾದ ಅನುಸಂಧಾನಗಳು ಮೊದಲಾದ ಪ್ರಮೇಯಗಳಿವೆ.

**೨೩. ಮಾಂಡೂಕಭಾಷ್ಯ**

ಮಂಡೂಕರೂಪಿ (ಕಪ್ಪೆ) ವರುಣದೇವರು ಭಗವಂತನನ್ನು ಸ್ತೋತ್ರ ಮಾಡಿದ ಈ ಉಪನಿಷತ್ತಿನಲ್ಲಿ ಪ್ರಣವ ಪ್ರತಿಪಾದ್ಯನಾದ ವಿಶ್ವ, ತೈಜಸ, ಪ್ರಾಜ್ಞ, ತುರ್ಯರೂಪಿ ಪರಮಾತ್ಮನ ಮಹಿಮೆಯನ್ನು ವರ್ಣಿಸಲಾಗಿದೆ.

**೨೪. ಷಟ್‌ಪ್ರಶ್ನಭಾಷ್ಯ**

ಪಿಪ್ಪಲಾದರು ಸುಕೇಶ ಮೊದಲಾದ ಆರು ಋಷಿಗಳ ಪ್ರಶ್ನೆಗಳಿಗೆ ಉತ್ತರ ನೀಡಿದ ಈ ಉಪನಿಷತ್ತಿನಲ್ಲಿ ಪ್ರಾಣದೇವರು, ಭಾರತಿದೇವಿಯರು ಇವರ ದ್ವಾರಾ ಭಗವಂತನು ಮಾಡುವ ಸೃಷ್ಟ್ಯಾದಿಗಳ ಮಹಿಮೆಗಳನ್ನು, ಪ್ರಾಣದೇವರ ಜೀವೋತ್ತಮತ್ವವನ್ನೂ ವರ್ಣಿಸಲಾಗಿದೆ.

**೨೫. ತಲವಕಾರಭಾಷ್ಯ**

ಬ್ರಹ್ಮ-ರುದ್ರರ ಸಂವಾದರೂಪವಾದ ಈ ಉಪನಿಷತ್ತಿನಲ್ಲಿ ಪ್ರಾಣದೇವರಿಂದ ಆರಂಭಿಸಿ ಎಲ್ಲಾ ತತ್ತ್ವಾಭಿಮಾನಿಗಳಿಗೂ ಭಗವಂತನೇ ಪ್ರೇರಕನೆಂದು, ಯಕ್ಷರೂಪಿ ಭಗವಂತನ ಕಥೆಯ ಮೂಲಕ ಸ್ಪಷ್ಟಪಡಿಸಲಾಗಿದೆ.

**೨೬. ಗೀತಾತಾತ್ಪರ್ಯನಿರ್ಣಯ**

ಗೀತೆಯ ಶ್ಲೋಕಗಳ ತಾತ್ಪರ್ಯವನ್ನು ವರ್ಣಿಸಲಾಗಿದೆ. ಆರಂಭದಲ್ಲಿಯೇ ಗೀತಾವಾಕ್ಯಗಳಿಂದಲೇ ಗೀತೆಯ ತಾತ್ಪರ್ಯವನ್ನು ಸಂಗ್ರಹಿಸಿರುವುದು ಈ ಗ್ರಂಥದ ವೈಶಿಷ್ಟ್ಯ.

**೨೭. ನ್ಯಾಯವಿವರಣ**

ಅನುವ್ಯಾಖ್ಯಾನದಲ್ಲಿರುವ ನ್ಯಾಯಮಾಲೆಗಳ ಸ್ಪಷ್ಟವಾದ ವಿವರಣೆಯನ್ನು ನೀಡುವ ಗ್ರಂಥವಿದು.

**೨೮. ನಖಸ್ತುತಿ**

ತಮ್ಮ ನೆಚ್ಚಿನ ಶಿಷ್ಯರಾದ ತ್ರಿವಿಕ್ರಮಪಂಡಿತಾಚಾರ್ಯರ ವಾಯುಸ್ತುತಿಯ ಪ್ರತಿಶ್ಲೋಕಕ್ಕೂ ಫಲವನ್ನು ಕೊಡಲು ರಚಿಸಿದ ಎರಡು ಶ್ಲೋಕಗಳ ಗ್ರಂಥ. ಮೊದಲನೆಯ ಶ್ಲೋಕದಲ್ಲಿ ನರಸಿಂಹದೇವರಿಗೂ, ಅವರ ನಖಗಳಿಗೂ ಸ್ವಗತಭೇದವಿಲ್ಲವೆಂಬ ತತ್ತ್ವದ ಮಹಿಮೆಯನ್ನು ವರ್ಣಿಸಲಾಗಿದ್ದು, ಎರಡನೆಯ ಶ್ಲೋಕದಲ್ಲಿ ನರಸಿಂಹದೇವರ ಸರ್ವೋತ್ತಮತ್ವಕ್ಕೆ ಪೂರ್ಣಪ್ರಮಾಣವನ್ನು ಕೊಡಲಾಗಿದೆ.

**೨೯. ಯಮಕಭಾರತ**

ಅದ್ಭುತವಾದ ಕವಿತಾಶಕ್ತಿಯನ್ನು ತೋರಿಸಿರುವ ಸುಮಾರು ಎಂಭತ್ತು ಶ್ಲೋಕವಿರುವ ಈ ಗ್ರಂಥದಲ್ಲಿ ಸಂಕ್ಷಿಪ್ತವಾದ ಮಹಾಭಾರತದ ಕಥೆಯೂಇದೆ. ಪ್ರತಿಶ್ಲೋಕವೂ ಯಮಂಕಾರ ಬದ್ಧವಾಗಿದೆ.

**೩೦. ದ್ವಾದಶಸ್ತೋತ್ರ**

ವಿಷಪರಿಹಾರಕವಾದುದು ಈ ಸ್ತೋತ್ರ, ಆದ್ದರಿಂದಲೇ ನೈವೇದ್ಯಕಾಲದಲ್ಲಿ ಪಠನೀಯವಾದ ಈ ಹನ್ನೆರಡು ಸ್ತೋತ್ರಗಳಲ್ಲಿ ಭಗವಂತನ ಆಪಾದಮೌಲಿ ವರ್ಣನೆಗಳು, ದಶಾವತಾರ ವರ್ಣನೆಗಳು, ಉಪನಿಷತ್ತಿನಲ್ಲಿ ಹೇಳಿದ ಅನೇಕ ಮಹಿಮೆಗಳು, ಸಾಧಕರ ಅವಶ್ಯ ಕರ್ತವ್ಯವೂ ವರ್ಣಿತವಾಗಿವೆ.

**೩೧. ಕೃಷ್ಣಾಮೃತಮಹಾರ್ಣವ**

ವೈಷ್ಣವದೀಕ್ಷೆಯ, ವಿಷ್ಣು ನಿರ್ಮಾಲ್ಯದ, ಸಾಲಿಗ್ರಾಮದ ಹಾಗೂ ಗೋಪಿಚಂದನದ ಮಹಿಮೆಯನ್ನು ತಿಳಿಸಿರುತ್ತಾರೆ. ವಿಷ್ಣುಭಕ್ತರಗೆ ಅವಶ್ಯ ಆಚರಿಸಲು ಯೋಗ್ಯವಾದ ಏಕಾದಶೀ, ಅತಿರಿಕ್ತ ದ್ವಾದಶೀ ಹಾಗೂ ಶ್ರವಣ ದ್ವಾದಶಿಗಳ ನಿರ್ಣಯವೂ ಇರುತ್ತದೆ.

**೩೨. ತಂತ್ರಸಾರ ಸಂಗ್ರಹ**

ನಾಲ್ಕು ಅಧ್ಯಾಯಗಳಿರುವ ಈ ಗ್ರಂಥದಲ್ಲಿ ಮೊದಲನೆಯ ಅಧ್ಯಾಯದಲ್ಲಿ ಅಷ್ಟಮಹಾಮಂತ್ರಗಳ ಉದ್ಧಾರವನ್ನು, ಭಗವಂತನ ಪೂಜೆಯ ಕ್ರಮವನ್ನೂ, ಎರಡನೆಯ ಅಧ್ಯಾಯದಲ್ಲಿ ವೈಷ್ಣವ ದೀಕ್ಷೆಗೆ ಉಪಯುಕ್ತವಾದ ಕಲಾಶಾಭಿಷೇಕವನ್ನೂ, ಹೋಮಕುಂಡ ನಿರ್ಮಾಣದ ಪ್ರಕಾರವನ್ನೂ, ಮೂರನೆಯ ಅಧ್ಯಾಯದಲ್ಲಿ ಪ್ರತಿಮಾ ಲಕ್ಷಣ, ದೇವಾಲಯ ನಿರ್ಮಾಣ, ಪ್ರತಿಷ್ಠಾ ಸಂಪ್ರೋಕ್ಷಣೆ, ಜೀರ್ಣೋದ್ಧಾರ ಕ್ರಮಗಳನ್ನು ನಾಲ್ಕನೇ ಅಧ್ಯಾಯದಲ್ಲಿ ವರಹಾದಿ ಎಪ್ಪತ್ತೆರಡು ಮಹಾಮಂತ್ರಗಳನ್ನು ತಂತ್ರೋದ್ಧಾರ ಕ್ರಮಗಳನ್ನು, ಯೋಗಾಭ್ಯಾಸ ಕ್ರಮವನ್ನು ತಿಳಿಸಿರುತ್ತಾರೆ.

**೩೩. ಸದಾಚಾರ ಸ್ಮೃತಿ**

ದ್ವಿಜರು ಬೆಳಿಗ್ಗೆಯಿಂದ ರಾತ್ರಿಯವರೆಗೂ ಮಾಡಬೇಕಾದ ಸದಾಚಾರಗಳ ವಿಷಯದಲ್ಲಿ ವೇದವ್ಯಾಸ ವಾಕ್ಯಗಳ ಉದ್ಧಾರವನ್ನು ಸಂಕ್ಷೇಪವಾಗಿ ಮಾಡಿರುತ್ತಾರೆ. ಇವರ ಮಧ್ಯೆ ಬ್ರಹ್ಮಚಾರಿಗಳು ಹಾಗೂ ಯತಿಗಳಿಗೆ ಆಚರಿಸಲು ಯೋಗ್ಯವಾದ ವಿಶೇಷ ಧರ್ಮಗಳನ್ನು ಉಲ್ಲೇಖಿಸಿದ್ದಾರೆ.

**೩೪. ಭಾಗವತತಾತ್ಪರ್ಯ ನಿರ್ಣಯ**

ಪುರಾಣ ಪ್ರಸ್ಥಾನವನ್ನು ತಿಳಿಯಲು ಅಪೇಕ್ಷಿಸತಕ್ಕ ಭಾಷಾತ್ರಯಗಳನ್ನು ಅರಿಯದ ಜಿಜ್ಞಾಸುಗಳಿಗೋಸ್ಕರ ಶ್ರೀಮದ್ಭಾಗವತದಲ್ಲಿ ಬರುವ ಅಪ್ರತಿಪತ್ತಿ (ಅಜ್ಞಾನ) ವಿಪ್ರತಿಪತ್ತಿಗಳನ್ನು ಮಿಥ್ಯಾಜ್ಞಾನ) ಪರಿಹರಿಸಲು ಈ ಗ್ರಂಥ ಹೊರಟಿದೆ.

ಭಾಷಾತ್ರಯಗಳೆಂದರೆ ನಾವು ಮಾತನಾಡುವ ಭಾಷೆ, ಕನ್ನಡ, ತೆಲುಗು ಎಂದು ಅಲ್ಲ. ಸಮಾಧಿಭಾಷಾ, ವಿಷ್ಣುಸರ್ವೋತ್ತಮತ್ವದ ವಿಚಾರಗಳನ್ನು ಇದ್ದಂತೆ ನೇರವಾಗಿ ತಿಳಿಸುವುದು.

**ಸಮಾಧಿಭಾಷಾ** - ಶ್ರೀವಿಷ್ಣುಸರ್ವೋತ್ತಮತ್ವಾದಿ ಯಥಾರ್ಥ ತತ್ವ ವಿಷಯಗಳನ್ನು ನೇರವಾಗಿ ತಿಳಿಸುವುದು.

**ಗುಹ್ಯ ಭಾಷಾ** - ಒಳಗೊಂದು ಅರ್ಥ, ಮೇಲೊಂದರ್ಥ ಇರುವುದು, ಉದಾಹರಣೆ ವಾಂತಿ (ಜೇನುತುಪ್ಪ), ಉಚ್ಛಿಷ್ಠ ಎಂಜಲು - ಹಸುವಿನ ಮೊಲೆಯಲ್ಲಿ ಕರು ಹಾಲು ಕುಡಿದರೆ ಅದನ್ನು ತೊಳೆಯದೆ ಹಾಗೆಯೇ ಹಾಲನ್ನು ಕರೆಯಬೇಕು. ಶಿವನಿರ್ಮಾಲ್ಯ - ಗಂಗಾನದಿಯ ನೀರು, ಶವಕರ್ಪಟ - ಹೆಣದ ಬಟ್ಟೆ (ರೇಷ್ಮೆ ಬಟ್ಟೆ).

**ದರ್ಶನಭಾಷಾ** : ಬೇರೆ ಬೇರೆ ಮತದವರು ಹೇಳುವ ವಾದವನ್ನು ತಿಳಿಸುವುದು (ಮಹಾಭಾರತ ತಾತ್ಪರ್ಯ ನಿರ್ಣಯ ಇಟ್ಟುಕೊಂಡು ಈ ವಾಕ್ಯಗಳಿಗೆ ಸರಿಯಾದ ಅರ್ಥ ಮಾಡಬೇಕು).

### ೩೫. ಮಹಾಭಾರತತಾತ್ಪರ್ಯ ನಿರ್ಣಯ

ವಿಶೇಷವಾಗಿ ಮಹಾಭಾರತವನ್ನು ಅನುಸರಿಸಿದರೂ, ಈ ಗ್ರಂಥದಲ್ಲಿ ಸರ್ವಶಾಸ್ತ್ರಾರ್ಥ ನಿರ್ಣಯವಾಗಿದೆ. ಈ ಗ್ರಂಥದಲ್ಲಿ ಮೂವತ್ತೆರಡು ಅಧ್ಯಾಯವಿದ್ದು, ಮೊದಲನೆಯ ಅಧ್ಯಾಯದಲ್ಲಿ ಸರ್ವಶಾಸ್ತ್ರಾರ್ಥ ಸಂಗ್ರಹವನ್ನೂ, ಎರಡನೆಯ ಅಧ್ಯಾಯದಲ್ಲಿ ಇದೇ ವಿಷಯದಲ್ಲಿ ಮಹಾಭಾರತಾದಿ ವಾಕ್ಯಗಳ ಉದ್ಧಾರವನ್ನೂ, ಮೂರನೆಯ ಅಧ್ಯಾಯದಲ್ಲಿ ಅಂಶಾವತಾರ ನಿರ್ಣಯವನ್ನೂ, ಮುಂದಿನ ಆರು ಅಧ್ಯಾಯಗಳಲ್ಲಿ ರಾಮಾಯಣ ನಿರ್ಣಯವನ್ನೂ ಹತ್ತನೆಯ ಅಧ್ಯಾಯದಲ್ಲಿ ವ್ಯಾಸ ಕಥಾ ನಿರ್ಣಯವನ್ನೂ, ಉಳಿದ ಅಧ್ಯಾಯಗಳಲ್ಲಿ ಮಹಾಭಾರತ ನಿರ್ಣಯವನ್ನು ಮಾಡಲಾಗಿದೆ. ಶ್ರೀಮದಾಚಾರ್ಯರೇ ಹೇಳುವಂತೆ ಈ ಗ್ರಂಥವು ತಾವು ಮಾಡಿದ ಎಲ್ಲಾ ಗ್ರಂಥದಲ್ಲೂ ಶ್ರೇಷ್ಠವಾದುದು ಮತ್ತು ಎಲ್ಲಾ ಪುರುಷಾರ್ಥಗಳನ್ನೂ ಕೊಡತಕ್ಕದ್ದು. ಶ್ರೀ ವಿಷ್ಣುಸರ್ವೋತ್ತಮತ್ವಾದಿ ಶ್ರೀ ಮಧ್ವಶಾಸ್ತ್ರ ತತ್ವಗಳಲ್ಲಿ ಬರುವ ಸಂಶಯಗಳನ್ನು ಪರಿಹರಿಸಿ ಸರಿಯಾದ ಜ್ಞಾನವನ್ನು ತಿಳಿಸುವುದು, ಸಂಶಯ ಪರಿಹಾರ ಮಾಡುವುದು ಈ ಗ್ರಂಥ ವಿಶೇಷ.

### ೩೬. ಯತಿಪ್ರಣವಕಲ್ಪ

ಸನ್ಯಾಸ ದೀಕ್ಷೆಯನ್ನು ಪಡೆಯುವ ಕ್ರಮವನ್ನು, ಪ್ರಣವಮಂತ್ರದ ಉಪದೇಶಕ್ರಮವನ್ನು, ಯತಿಗಳು ಮಾಡಬೇಕಾದ ಶಪಥವನ್ನು ತಿಳಿಸಿ, ವಿಷ್ಣುಸರ್ವೋತ್ತಮತ್ವವನ್ನೇ ಯಾವಾಗಲೂ ಪ್ರತಿಪಾದನೆ ಮಾಡಬೇಕೆಂದು ಆದೇಶ ನೀಡಿರುತ್ತಾರೆ.

### ೩೭. ಜಯಂತೀನಿರ್ಣಯ

ಶ್ರೀಕೃಷ್ಣಜನ್ಮದಿನದ ನಿರ್ಣಯವನ್ನು, ಅದನ್ನು ಆಚರಿಸುವ ಕ್ರಮವನ್ನೂ ಸಹ, ಅವಶ್ಯ ಮಂತ್ರಗಳ ಉದಾಹರಣೆಯ ಸಮೇತ ತಿಳಿಸಿರುತ್ತಾರೆ.

|| ಶ್ರೀಕೃಷ್ಣಾರ್ಪಣಮಸ್ತು ||

**ವಿಶೇಷಸೂಚನೆ** : ಈ ಮೂವತ್ತೇಳು ಗ್ರಂಥಗಳಿಗೆ ಸರ್ವಮೂಲವೆಂಬ ಹೆಸರಿದೆ. ಇವುಗಳಲ್ಲದೇ ಶ್ರೀಮದಾಚಾರ್ಯರು ರಚಿಸಿದ ಕಂದುಕಸ್ತುತಿ, ನ್ಯಾಸಪದ್ಧತಿ, ತಿಥಿನಿರ್ಣಯ, ಬಿಲ್ವಮಂಗಲ: ಸಾಧುಃ ಮೊದಲಾದ, ಸುಭಾಷಿತ, ಸ್ತೋತ್ರ, ಗಾಥಾ ಮೊದಲಾದ ಗ್ರಂಥಗಳಿಗೆ ಸಂಖ್ಯೆಯೇ ಇಲ್ಲ.

ಪೂರ್ವೋಕ್ತ ಸಂಗ್ರಹಕಾರರು
**ಶ್ರೀ೧೦೮ ಶ್ರೀವಿಶ್ವನಂದನತೀರ್ಥಪಾದಂಗಳವರು**

ದಯೆಯಿಂದ ಇಷ್ಟು ವಿಚಾರಗಳನ್ನು ಒದಗಿಸಿಕೊಟ್ಟ
ಶ್ರೀ ೧೦೮ ಶ್ರೀವಿಶ್ವನಂದನತೀರ್ಥಪಾದಂಗಳವರಿಗೆ ಅನಂತಾನಂದ ವಂದನೆಗಳು

ಸಂಗ್ರಹಕಾರ
**ಎಸ್.ಜಿ.ದ್ವಾರಕಿ**



# ಶ್ರೀಬಿಂದುಸುಮಧ್ವವಿಜಯಃ

(೧೬ ಸರ್ಗ ಸುಮಧ್ವವಿಜಯ ೧೬ ನಿಮಿಷದಲ್ಲಿ ಮಾನಸಿಕ ಚಿಂತನ ಕ್ರಮ)

**೧ನೇ ಸರ್ಗ** : ಶ್ರೀಹನುಮಂತದೇವರು - ಶ್ರೀಭೀಮಸೇನದೇವರು - ಮಣಿಮಂತನ ಹಾವಳಿ

೨ನೇ ಸರ್ಗ : ಪಾಜಕ - ಶ್ರೀಮಧ್ಯಗೇಹಭಟ್ಟರು - ರಜತಪೀಠಪುರ - ನರ್ತನ - ಭಗವಾನ್ ವಿವೇಷ-ಗೋದಾನ-ಪಿಶಾಚಿ-ಹುರಳಿ-ಬಾಲ-ಬೀಜ.

೩ನೇ ಸರ್ಗ : ಸಹದಂಪತಿ - ಸಂಭ್ರಮ - ಕಾನನಗೋವಿಭುಃ - ಲಿಪಿಕುಲಂ - ಶಿವಭಟ್ಟ - ಲಿಕುಚಶಬ್ಧ - ಉಪನಿನಾಯ - ಕ್ರೀಡಾ - ತ್ರಿಭುವನಗುರು ಬ್ರಾಹ್ಮಣಗುರೋಃ.

೪ನೇ ಸರ್ಗ : ಅಚ್ಯುತಪ್ರೇಕ್ಷರು - ಸನ್ಯಾಸನಿಭದ್ಧಮಾನಸಂ - ಅನುಜ - ಪಾರಮಹಂಸಮಾಶ್ರಮಂ - ಶ್ರೀಪೂರ್ಣಬೋಧ - ಸಸ್ನೌಸಹ ಪೂರ್ಣಬುದ್ಧಿನಾ - ವಾಸುದೇವಾದಿ ಪಂಡಿತರು ಇಷ್ಟಸಿದ್ಧಿ ಭಾಗವತ.

೫ನೇ ಸರ್ಗ : ವೇದಾಂತರಾಜ್ಯಪಟ್ಟಾಭಿಷೇಕ ಶ್ರೀಆನಂದತೀರ್ಥನಾಮ ಜ್ಯೇಷ್ಠ ಯತಿಗಳು ಬುದ್ಧಿಸಾಗರ ವಾದಿಸಿಂಹ ನಿಷಾಫಲಾಯನಾತ್ - ದಕ್ಷಿಣ ದೇಶ ದಿಗ್ಗಮನ - ೨೦೦ ಬಾಳೆಹಣ್ಣು - ವೃಕೋದರಾಗ್ನಿ - ಪಯಸ್ವಿನೀ ನದೀ ತೀರ - ಭಾಮಿನೀಂ ಚಂಡಿಕಾಂ ಅಸ್ಮರತ್ - ಅನಂತಶಯನ - ಕನ್ಯಾಕುಮಾರಿ - ರಾಮೇಶ್ವರ - ಚಾತುರ್ಮಾಸ್ಯ - ಸಂಕರ - ದಂಡಕಾಷ್ಟ - ಶ್ರೀರಂಗಕ್ಷೇತ್ರ - ವೇದಕ್ಕೆ ಮೂರು ಅರ್ಥ - ಭಾರತಕ್ಕೆ ಹತ್ತು ಅರ್ಥ - ವಿಷ್ಣುಸಹಸ್ರನಾಮಕ್ಕೆ ಒಂದಂದೊಕ್ಕು ನೂರು ಅರ್ಥ.

| | |
|---|---|
| ೬ನೇ ಸರ್ಗ | ಐತರೇಯ - ಕೇರಳ ದೇಶ - ಅಪಾಲ - ಪ್ರೀಣ್ ಶಬ್ದ - ವೇದ - ದ್ರೌಪದಿ - ಗೀತಾಬಾಷ್ಯ - ಶಕ್ತಿತಃ ಲೇಶತಃ ಅರುಣೋದಯಕಾಲೆ ಶೀತಲಗಂಗಾಮಜ್ಜನಂ - ನೇದೃಶಂ ಸ್ಥಲಂ. |
| ೭ನೇ ಸರ್ಗ | ವೇದವ್ಯಾಸರ ವರ್ಣನ |
| ೮ನೇ ಸರ್ಗ | ನಾರಾಯಣಾಶ್ರಮ - ೨೨ ಅವತಾರ ಮಾಲಿಕೆ - ಬಾಷ್ಯ ರಚನೆ - ಅವತತಾರ (ಬೆಟ್ಟದಿಂದ ಇಳಿದರು). |
| ೯ನೇ ಸರ್ಗ | ಭಾಷ್ಯರಚನೆ ಸತ್ಯತೀರ್ಥರಿಂದ ಬರೆಸಿದ್ದು - ಪದ್ಮನಾಭತೀರ್ಥರಿಗೆ ಪಾಠ ಹೇಳಿದ್ದು - ಶ್ರೀಕೃಷ್ಣ ಪ್ರತಿಷ್ಠ. |
| ೧೦ನೇ ಸರ್ಗ | ಈಶ್ವರದೇವ - ಗಂಗಾನದಿ ದಾಟಿದ್ದು - ತುರುಷ್ಕರಾಜ - ಸಂವಾದ - ಮೂರು ಪ್ರಕಾರ ಕಳ್ಳರ ಪ್ರಸಂಗ - ವ್ಯಾಘ್ರ - ಹಸ್ತಿನಾವತಿ - ವಾರಣಾಸಿ - ಕುರುಕ್ಷೇತ್ರ - ಇಷುಪಾತ ಕ್ಷೇತ್ರ - ಸಾವಿರ ಬಾಳೆಹಣ್ಣು ತಿಂದಿದ್ದು - ಗೋವಾ ನಾಲ್ಕು ಸಾವಿರ ಬಾಳೆಹಣ್ಣು ತಿಂದು ೩೦ ಕೊಡ ಹಾಲು ಕುಡಿದಿದ್ದು - ಸಂಗೀತ - ಒಣ ಗಿಡಗಳು ಚಿಗುರಿದ್ದು. |
| ೧೧ನೇ ಸರ್ಗ | ಮುಕ್ತರ ವಿಹಾರ - ಭಾಷ್ಯ ಭಾವ ಆವರ್ತನ ಮಹಿಮಾ |
| ೧೨ನೇ ಸರ್ಗ | ಅದ್ವೈತಿಗಳ ಗೋಳು - ಪದ್ಮತೀರ್ಥನಿಂದು ಗ್ರಂಥ ಅಪಹಾರ |
| ೧೩ನೇ ಸರ್ಗ | ಜಯಸಿಂಹರಾಜರು ಆಚಾರ್ಯರಉತ್ಸವ - ಶ್ರೀತ್ರಿವಿಕ್ರಮ-ಪಂಡಿತಾಚಾರ್ಯರ ಚರಿತ್ರೆ. |
| ೧೪ನೇ ಸರ್ಗ | ಆಚಾರ್ಯರ ಆಹ್ನಿಕ, ಸ್ನಾನ, ಪಾಠ, ದೇವತಾರ್ಚನ - ಭೋಜನ ಉಪನ್ಯಾಸ ವರ್ಣನೆ ಮತ್ತು ದಿನಚರಿ. |
| ೧೫ನೇ ಸರ್ಗ | ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಮತ್ತು ಶ್ರೀಮನ್ ಮಧ್ವಾಚಾರ್ಯರ ವಾಕ್ಯಾರ್ಥ, ವಿಷ್ಣುತೀರ್ಥರ ಚರಿತ್ರೆ, ಗ್ರಂಥ ವರ್ಣನೆ ಶಿಷ್ಯಪರಂಪರೆ. |
| ೧೬ನೇ ಸರ್ಗ | ವೃಷಲ ಪತಿ - ಸಮುದ್ರ ಸ್ನಾನ - ಬಂಡೆಕಲ್ಲು - ಪಾರಂತಿ - ಕೆರೆಗೆ ಮಳೆ - ಕೂಪಮಂಡೂಕ - ವಾದಿನಿಗ್ರಹ - ಕರ್ಮನಿರ್ಣಯ ಗ್ರಂಥ ರಚನೆ - ಶ್ರೀಕೃಷ್ಣಾಮೃತಮಹಾರ್ಣವ ಗ್ರಂಥ ರಚನೆ, ಮಲ್ಲರಿಂದ ಸತ್ವಪರೀಕ್ಷೆ - ಹುಡುಗನ ಮೇಲೆ ಕುಳಿತುಕೊಂಡು ದೇವಸ್ಥಾನ ಪ್ರದಕ್ಷಿಣೆ - ಅನಂತೇಶ್ವರನ ದೇವಸ್ಥಾನ - ದೇವತೆಗಳ ಆಗಮನ - ಐತರೇಯ ಪ್ರವಚನ - ಪುಷ್ಪವೃಷ್ಟಿ - ಮಂಗಳ. |

**ಗಮನಾಸನಸಂಕಥಾದಿಲೀಲಾಃ ಸ್ಮೃತಿ ಮಾತ್ರೇಣ ಭವಾಪವರ್ಗದಾತ್ರೀ** - ಶ್ರೀಮನ್‌ಮಧ್ವಾಚಾರ್ಯರು ನಿಂತಿದ್ದು, ಕೂತಿದ್ದು, ನಡೆದಿದ್ದು, ಪಾಠ ಹೇಳಿದ್ದು, ಮುಂತಾದವುಗಳನ್ನು ಭಕ್ತಿಯಿಂದ ಸ್ಮರಿಸಿಕೊಂಡರೂ ಸಹ ಸಂಸಾರದ ಬಿಡುಗಡೆಯಾಗಿ ನಿರ್ದುಃಖಾನಂದಭರಿತವಾದ ಮೋಕ್ಷ ಪ್ರಾಪ್ತಿಯಾಗುತ್ತದೆ. ಇಂತಹ ಆಚಾರ್ಯರು ಬ್ರಹ್ಮಾಂಡದಲ್ಲಿ ಇವರೊಬ್ಬರೇ. ಇವರನ್ನು ಅನುಸರಿಸಬೇಕೇ ಹೊರತು ಬೇರೆ ಗತಿ ಇಲ್ಲ.

# ಶ್ರೀ ಮ|| ಶಾ|| ಸಂ|| ಯಲಮೇಲಿವಾಸುದೇವಾಚಾರ್ಯರ ನುಡಿಮುತ್ತುಗಳು

- **ಗೋಡೆ ಮುಂದೆ ಪಾಠ ಹೇಳು** : ಊಟ ಬಿಟ್ಟರೂ ಪಾಠ ಬಿಡಬಾರದು. ಪಾಠದ ಸಮಯದಲ್ಲಿ ಶ್ರೀಮದ್ಗಾಂಭೀರ್ಯ ಉಪಯೋಗವಿಲ್ಲ; ಬಾಯಿಬಿಡಬೇಕು.
- ದೇವತಾರ್ಚನೆಯಲ್ಲಿ (ಕರ್ಮ ಮಾಡುವಾಗ) ಲೋಪದೋಷಗಳು ಬರುವುದು ಸ್ವಾಭಾವಿಕ. ಆದರೆ ಶಾಸ್ತ್ರಾಭ್ಯಾಸ ರೂಪವಾದ ಪೂಜೆಯಲ್ಲಿ (ಜ್ಞಾನಕಾರ್ಯ) ಲೋಪದೋಷಗಳು ತಲೆ ಹಾಕಬಾರದು. ಅಜ್ಞಾನ, ವಿಪರೀತ ಜ್ಞಾನಗಳು ಬಂದಾವು! ಅತಿಪವಿತ್ರವಾದ ಜ್ಞಾನ ಶುದ್ಧವಾಗಿರಬೇಕು.
- ಜ್ಞಾನ ಸಂಪಾದನೆಯೂ ಒಂದು ಕರ್ಮವೇ; ಸ್ವಯೋಗ್ಯಕರ್ಮಾನುಷ್ಠಾನವಿಲ್ಲದೆ ಅದು ಹೇಗೆ ಬಂದೀತು!
- ಜ್ಞಾನಪಡೆದರೂ ಕರ್ಮಾಚರಣೆಯಿಲ್ಲದೆ ದುರಾಚಾರಿಯಾದರೆ, ಜ್ಞಾನವು ಆಡಿನ ಕೊರಳಿನ ಮೊಲೆಯಿದ್ದಂತೆ.
- ಪಾಂಡಿತ್ಯದ ಆರ್ಭಟಕ್ಕೆ ಬೆರಗಾಗಬೇಡಿ; ಬಾಹ್ಯಾಂತರ ದೀಕ್ಷೆಗಳಿವೆಯೇ ನೋಡಿ.
- ಅಂತರ್ದೀಕ್ಷೆ, ಬಾಹ್ಯದೀಕ್ಷೆಗಳಲ್ಲಿ ಯಾವುದು ಮುಖ್ಯ - ಎಂದು ಕೇಳಬೇಡಿ. ಎರಡೂ ಮುಖ್ಯ, ಅರ್ಧಜರತೀಯ ಉಪಯೋಗವಿಲ್ಲ.
- ಓದಿದ್ದು, ಓದದೇ ಇದ್ದದ್ದು ಎರಡನ್ನೂ ಒಂದು ಮಾಡಬೇಡಿ; ಹಿಟ್ಟು ಬೂದಿ ಎರಡೂ ಒಂದಲ್ಲ.
- ಕೂಲಿ ತೆಗೆದುಕೊಂಡು ಪಾಠ ಹೇಳಬಾರದು. ಸಚ್ಛಾಸ್ತ್ರ ಶ್ರವಣ ಮಾಡಬೇಕೆನ್ನುವವರಿಗೆ ಅದನ್ನು ನಿರ್ವಂಚನೆಯಿಂದ ಶ್ರವಣ ಮಾಡಿಸಿರಿ.
- ನಮ್ಮ ಪಾಠಕ್ಕೆ ನೀವು ಕೊಡಬೇಕಾದ ಶುಲ್ಕ ಎರಡೇ - ಒಂದು ಶ್ರದ್ಧಾ, ಇನ್ನೊಂದು ಭಕ್ತಿ.
- ಜನಸಂಗ್ರಹ (ಕೀರ್ತಿ), ಧನಸಂಗ್ರಹ, ಧಾನ್ಯಸಂಗ್ರಹಗಳೇ ಈಗಿನ ಬಹು ಪಂಡಿತರ ಗುರಿ. ಭಕ್ತ್ಯುಪೇತ ಅಧ್ಯಯನ ಮೋಕ್ಷಕ್ಕೆ ಸೋಪಾನ ; ಮರೆಯದಿರಿ.
- ಲೋಕವೆಲ್ಲಾ ಕೆಟ್ಟುಹೋಗಿದೆ ; ಇತರರು ನಿಮ್ಮನ್ನು ಗೌರವಿಸಲಿಲ್ಲವೆಂದು ವ್ಯಥೆಪಡಬೇಡಿ; ಶ್ರೀಹರಿವಾಯುಗಳಿಗೆ ತೃಪ್ತಿಕರವಾದ ಸತ್ಕಾರ್ಯವನ್ನು ಮಾಡಿ, ಆನಂದ ಪಡೆಯಿರಿ.
- ಅದ್ವೈತಮತ ನಿರಾಕರಣೆಯಿಲ್ಲದ ಉಪನ್ಯಾಸದಿಂದ ಶ್ರೀಹರಿ ಪ್ರೀತನಾಗುವುದಿಲ್ಲ, ಜರಾಸಂಧನ ವಧೆಯಿಂದ ಪ್ರೀತನಾದಷ್ಟು ರಾಜಸೂಯಯಾಗದಿಂದ ಅವನು ಪ್ರೀತನಾಗಲಿಲ್ಲ. ಮೋಕ್ಷದಲ್ಲಿ ದುಃಖ ನಿವೃತ್ತಿಯಾಗಬೇಕಾದರೆ, ಅನ್ಯಮತವನ್ನು ಖಡಾಖಂಡಿತವಾಗಿ ನಿಗ್ರಹಿಸಲೇಬೇಕು.
- ವೈಷ್ಣವರಿಗೆ ಶ್ರೀಮಣಿಮಂಜರಿ, ಸುಮಧ್ವವಿಜಯಗಳು, ಮುತ್ತೈದೆಗೆ ಮಾಂಗಲ್ಯವಿದ್ದಂತೆ.
- ಸುಧಾಂತ ಅಧ್ಯಯನ ಮಾಡಿದರೂ ಕಡೆಗೆ ಸುಮಧ್ವವಿಜಯಕ್ಕೇ ಬರಲೇಬೇಕು.
- ಸುಮಧ್ವವಿಜಯ, ಪ್ರಕರಣಗ್ರಂಥಗಳನ್ನು ಓದದೇ, ಉದ್ಗ್ರಂಥಕ್ಕೆ ಕೈ ಹಾಕಿದರೆ, ಎಟುಕದ ದ್ರಾಕ್ಷಿಗೊನೆಗೆ ಕೈಹಾಕಿದಂತೆ.
- ಪಾಂಡಿತ್ಯವೇ ಬೇರೆ, ಜ್ಞಾನವೇ ಬೇರೆ, ಒಂದೇ ಆದರೆ ಸಂಕರ ಮಾಡಿದ ತಪ್ಪೇನು?

- ಸಂಕರ ಜಯಂತಿಯನ್ನು ನಾವು ಆಚರಿಸಲೇಬೇಕು. ಮಾರಿ, ಮಸಣಾದಿ ಕ್ಷುದ್ರ ದೇವತೆಗಳಿಗೂ ನಿಯಾಮಕನಾದ ಶ್ರೀಹರಿಯು ಪ್ರೀತನಾಗಲೆಂದು ಮಾಯಾವಾದವೆಂಬ ಕುರಿಕೋಣಗಳನ್ನು ಬಲಿಕೊಡುವುದಕ್ಕೆ ಅದು ಸುದಿನ.
- ಹಣಕೊಟ್ಟು ಜ್ಞಾನ ಭಕ್ತಿ ವೈರಾಗ್ಯಗಳನ್ನು ಕೊಂಡುಕೊಳ್ಳಲು ಆಗದು, ಅದು ಪೂರ್ವಜನ್ಮಗಳ ಮತ್ತು ಹಿರಿಯರು ಮಾಡಿದ ಪುಣ್ಯ ವಿಶೇಷದಿಂದ ದೊರೆಯತಕ್ಕದ್ದು.
- ಶ್ರೀಮದ್ಭಾಗವತದಲ್ಲಿ ಮೂರು ಜನ ವಾಸುದೇವರು ಪ್ರಸಿದ್ಧಿ; ಇಬ್ಬರು ವಸುದೇವನ ಅಪತ್ಯರು; (ಮಕ್ಕಳು) ಒಬ್ಬನು ಮಾತ್ರ ಅವನ ಮಗನಲ್ಲ - ಸರ್ವತ್ರ ವ್ಯಾಪ್ತನು; ಪೌಂಡ್ರಕ ಮತ್ತು ಸೃಗಾಲ ವಾಸುದೇವರು ಅದ್ವೈತ ಮತ್ತು ವಿಶಿಷ್ಟಾದ್ವೈತಗಳ ಗುರುಗಳು; ಇನ್ನೊಬ್ಬ ವಾಸುದೇವನು (ಶ್ರೀಕೃಷ್ಣ) ಅವರಿಬ್ಬರನ್ನು ನಿಗ್ರಹಿಸಿ, ತಾನು ಸರ್ವೋತ್ತಮನೆಂದು ಸಾರಿದ ದ್ವೈತ ಮತದ ಗುರುವು.
- ಶ್ರೀಮದಾಚಾರ್ಯರ ಚಿತ್ರದಲ್ಲಿ ತೆರೆದ ಎರಡು ಬೆರಳುಗಳು ಮಾತ್ರವಿದೆಯೆಂದು ತಿಳಿಯಬಾರದು; ಮುಚ್ಚಿದ ಮೂರು ಬೆರಳುಗಳೂ ಇವೆ. ಜೀವಜಡ ತತ್ವಗಳೆಂಬ ಎರಡು ಬೆಟ್ಟುಗಳನ್ನು ಅದುಮಿ, ಸ್ವತಂತ್ರ ತತ್ವವೆಂಬ ಹೆಬ್ಬೆರಳು ಪ್ರಮುಖವಾಗಿ ಕಾಣುತ್ತವೆ. ಹೆಬ್ಬೆರಳಿನ ಸಹಾಯವಿಲ್ಲದೆ, ಇನ್ನೆರಡು ಅಸ್ವತಂತ್ರ ತತ್ವಗಳು ಏನೂ ಕಾರ್ಯ ಮಾಡಲಾರವು. **(ಪುಟ 85, ಚಿತ್ರ 12 ನೋಡಿ)**
- ಧೋಂಡೂರಾಯರಿಗೆ ಇಬ್ಬರು ಪತ್ನಿಯರು; ಒಂದು ಗೃಹಲಕ್ಷ್ಮೀ, ಇನ್ನೊಂದು ರಾಜ್ಯಲಕ್ಷ್ಮೀ ಇಬ್ಬರನ್ನೂ ತ್ಯಾಗಮಾಡಿ, ಮೆರೆದ ಧೀರ ವಿರಕ್ತ ಶಿರೋಮಣಿ ನಮ್ಮ ಜಯತೀರ್ಥರು. **(ಮುಖಪುಟದ ಒಳಗಡೆ ಚಿತ್ರನೋಡಿ).**
- "ಸುಧಾ ವಾ ಪಠನೀಯಾ ವಸುಧಾ ವಾ ಪಾಲನೀಯ" ಆದರೆ ಈಗ ದುರ್ಜನರೇ ಹೆಚ್ಚಾಗಿರುವಾಗ ಅರಾಜಕತೆಯಿರುವಾಗ - "ಸುಧೈವ ಪಠನೀಯ, ವಸುಧಾ ಮಾ ಪಾಲನೀಯ" ಎನ್ನಬೇಕು.
- ಈಗಿನ ಕಾಲದಲ್ಲಿ "ಸುಧಾ" ಪಾಠ ಪ್ರವಚನವು, "ಸುಧಾ" ಮಾಸಪತ್ರಿಕೆಯನ್ನು ಓದಿದಂತೆ ಆಗುತ್ತಿದೆ. ಇದು ನ್ಯಾಯಸುಧೆಗೆ ಆಗಿರುವ ಅನ್ಯಾಯ. **(ಪುಟ 17 ನೋಡಿ)**
- ಸುಧಾರತ್ನವನ್ನು ಕಸದಂತೆ ರಸ್ತೆಯಲ್ಲಿ ಚೆಲ್ಲಬಾರದು; ಸುವರ್ಣಮಯ ಸಂದೂಕದಲ್ಲಿ ಜೋಪಾನವಾಗಿಟ್ಟುಕೊಂಡು, ಬೇಕಾದವರಿಗೆ ಮಾತ್ರ (ಅಧಿಕಾರಿಗಳಿಗೆ) ಪ್ರದರ್ಶಿಸಬೇಕು.
- ಬಹು ಜನ್ಮಗಳ ಸಾಧನೆ ಜ್ಞಾನಮಾರ್ಗ. ಯಾವುದೊಂದು ಜನ್ಮದಲ್ಲಿಯಾದರೂ ಈ ಮಾರ್ಗದ ರೈಲು ಕಂಬಿಯ Point ವ್ಯತ್ಯಾಸವಾದರೂ ಮಾರ್ಗತಪ್ಪಿ ಗುರಿ ತಲುಪಲಾರೆವು. ಆದ್ದರಿಂದಲೇ "ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ" ಎಂದು ಪ್ರಾರ್ಥಿಸಬೇಕು.
- ಇತ್ತೀಚೆಗೆ ಕೆಲವು ಪಂಡಿತರು ಶ್ರೀಮಣಿಮಂಜರೀ ಗ್ರಂಥದ ೧, ೨, ೩, ೪ ಸರ್ಗಗಳನ್ನು ಮಾತ್ರ ಪಾಠಮಾಡಿ, ೫, ೬, ೭, ೮ ಸರ್ಗಗಳನ್ನು ಮಾಡುತ್ತಿಲ್ಲ. ಇದರಿಂದ ಮಧ್ವದೀಕ್ಷೆಗೆ ಖೋತ ಆಗುತ್ತಿದೆ. ಶ್ರೀಮನ್ನಾರಾಯಣಪಂಡಿತಾಚಾರ್ಯರಿಗೆ ದ್ರೋಹವಾಗುತ್ತಿದೆ. ಶ್ರೀಮಧ್ವವಿಜಯವನ್ನು ೮ ಸರ್ಗ ಪಾಠ ಮಾಡಿ ಮುಂದಿನ ಸರ್ಗಗಳನ್ನು ಪಾಠ ಮಾಡುತ್ತಿಲ್ಲ, ಇದರಿಂದ ಶ್ರೀಮಧ್ವರಿಗೆ ಮತ್ತು ಶ್ರೀಮನ್ನಾರಾಯಣಪಂಡಿತಾಚಾರ್ಯರಿಗೆ ಅವಮಾನ ಮಾಡಿದಂತಾಗುತ್ತದೆ. ಇನ್ನು ಅವರ ಅನುಗ್ರಹ ಹೇಗೆ ಆಗುತ್ತದೆ. ಶ್ರೀಮನ್ನ್ಯಾಯಸುಧಾಗ್ರಂಥದಲ್ಲಿ ಜಿಜ್ಞಾಸಾಧಿಕರಣದವರೆಗೆ ಪಾಠ ಮಾಡಿ, ಮುಂದಿನದನ್ನು ನೀವೇ ನೋಡಿಕೊಳ್ಳಿ ಎಂದು ಹೇಳುತ್ತಿದ್ದಾರೆ. ಇದರಿಂದ ಗುರುವಿಲ್ಲದ ವಿದ್ಯೆ ಬಂದಂತಾಯಿತು. ಇದು ಸರಿಯೇ, ಋಷಿ ಋಣ ಉಳಿದುಕೊಂಡಂತಾಯಿತು.

ಸಂಗ್ರಹಕಾರರು
**ಎಸ್.ನಾರಾಯಣರಾವ್,**
ಆಚಾರ್ಯರ ಶಿಷ್ಯರು,
ಹನುಮಂತನಗರ, ಬೆಂಗಳೂರು

# ವ್ಯಾಸರು-ದಾಸರು

ಶ್ರೀಹರಿಯೇ - ಈಶ ಸರ್ವೋತ್ತಮ - ದೋಷದೂರ ಗುಣಪರಿಪೂರ್ಣ

**ಲಕ್ಷ್ಮೀ ಬ್ರಹ್ಮಾದಿಗಳು** - **ತಾರತಮ್ಯವಾಗಿ ದಾಸರು**

ಸೂತ್ರಕಾರರು - **ಶ್ರೀವೇದವ್ಯಾಸದೇವರು** (ಸಾಕ್ಷಾತ್ ನಾರಾಯಣದೇವರು)

ಭಾಷ್ಯಕಾರರು - **ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು**

ಟೀಕಾಕಾರರು - **ಶ್ರೀಮದ್‌ಜಯತೀರ್ಥ ಶ್ರೀಮಚ್ಚರಣರು**

ಶ್ರೀಮದ್‌ಭಾಗವತ
ವ್ಯಾಖ್ಯಾನಕಾರರು - **ಶ್ರೀವಿಜಯಧ್ವಜತೀರ್ಥಸ್ವಾಮಿಗಳವರು**, ಪೇಜಾವರ ಮಠ

ಟಿಪ್ಪಣ್ಯಾಚಾರ್ಯರು - ವಾಗ್ವಜ್ರಕಾರರಾದ ಶ್ರೀ **ಶ್ರೀಪಾದರಾಜರು**, ಮುಳಬಾಗಿಲು
ಚಂದ್ರಿಕಾಕಾರರಾದ **ಶ್ರೀವ್ಯಾಸರಾಜರು**
ಪರಿಮಳಕಾರರಾದ **ಶ್ರೀರಾಘವೇಂದ್ರಸ್ವಾಮಿಗಳವರು**
ಬಾವಭೋದಕಾರರಾದ **ಶ್ರೀರಘೋತ್ತಮಸ್ವಾಮಿಗಳವರು**
ಗುರುಹೃದಯ ಪ್ರಕಾಶಕರಾದ **ಶ್ರೀವಾದಿರಾಜಸ್ವಾಮಿಗಳವರು**
ಶ್ರೀಶೇಷಚಂದ್ರಿಕಾಕಾರರಾದ **(ರಘುನಾಥತೀರ್ಥರು)**, ತಿರುಮಕೂಡಲು.
ಶ್ರೀಭಾಷ್ಯದೀಪಿಕಾಕಾರರಾದ **ಜಗನ್ನಾಥತೀರ್ಥರು**, ಕುಂಭಕೋಣ
ಭಾಗವತಶಿರೋಮಣಿಗಳಾದ **ಶ್ರೀಯಾದವಾರ್ಯರು**
ಸುಖಬೋಧಕಾರರಾದ ಶ್ರೀ **ಶ್ರೀನಿವಾಸತೀರ್ಥರು**
ಭಾಗವತಸಾರೋದ್ಧಾರಕಾರರಾದ ಅಡವಿ ಸ್ವಾಮಿಗಳವರು
(ಶ್ರೀ ಶ್ರೀ **ವಿಷ್ಣುತೀರ್ಥರು**), ಮಾದನೂರು.
ಕುಶಲ ವ್ಯಾಖ್ಯಾನಕಾರರಾದ ಶ್ರೀ **ಸತ್ಯಧರ್ಮಸ್ವಾಮಿಗಳವರು**

**ಭಾಷಾಂತರಕಾರರು** ಶ್ರೀದಾಸರಾಯರು, ಹರಿದಾಸರುಗಳು ಮುಂತಾದ ಮಹನೀಯರುಗಳು ಪ್ರಾಕೃತ ಭಾಷೆಯಲ್ಲಿ ಈ ಕೃತಿ ಪೇಳಿ, ಅಪ್ರಾಕೃತ ಹರಿಯಿಂದ ಸ್ವೀಕೃತರಾದವರು.

## ದಾಸರಲ್ಲಿ ಷಡ್‌ಭೇದಗಳು

೧. ಸರ್ವಸಂಗಪರಿತ್ಯಾಗಮಾಡಿದ **ಸನ್ಯಾಸಿದಾಸರು, ಶ್ರೀನರಹರಿತೀರ್ಥರು, ಶ್ರೀಶ್ರೀಪಾದರಾಜರು, ಶ್ರೀವ್ಯಾಸರಾಜರು, ಶ್ರೀವಾದಿರಾಜಸ್ವಾಮಿಗಳವರು** - ಶ್ರೀಮದ್ವಶಾಸ್ತ್ರದ ಗುಟ್ಟನ್ನು ಪಾಮರರಿಗೆ ಸುಲಭವಾಗಿ ಅರ್ಥಮಾಡಿಕೊಳ್ಳಲು ಭಕ್ತಿಯ ಸಾಹಿತ್ಯವನ್ನು ಮಾಡಿಕೊಟ್ಟು ಉಪಕಾರ ಮಾಡಿದವರು.

೨. **ಶ್ರೀಮಂತದಾಸರು ಶ್ರೀಪುರಂದರದಾಸರು** - ಮಹದೈಶ್ವರ್ಯವನ್ನು ಬಲಿದಾನದಂತೆ ತ್ಯಾಗಮಾಡಿ ವೈರಾಗ್ಯ ಭಾಗ್ಯದಿಂದ ಬಾಳುವ ದಾರಿ ತೋರಿಸಿದ ಉಪಕಾರಿಗಳು.

೩. ಬಡತನದ ದಾಸರು ಮತ್ತು ದಡ್ಡರಂತೆ ತೋರಿಸಿಕೊಂಡ ದಾಸರು ಶ್ರೀ **ವಿಜಯದಾಸರು.** ಬಡತನ, ಭಾಗ್ಯತನವನ್ನು ಸಮವಾಗಿ ಕಾಣಬೇಕೆಂದು ತನ್ನ ಜೀವನದಲ್ಲಿ ತೋರಿಸಿಕೊಟ್ಟ ದಾಸರು.

೪. ತ್ಯಾಗ ಭೋಗವನ್ನು ಸಮವಾಗಿ ಕಂಡ ದಾಸರು ಶ್ರೀಗುರುಗಳ ಅಪ್ಪಣೆಯಂತೆ ಒಂದು ಮಹತ್ಕಾರ್ಯಕ್ಕಾಗಿ ಭಗವದ್ ಸೇವಾ ರೂಪದಿಂದ ತಮ್ಮ ೪೦ ವರ್ಷ ಆಯಸ್ಸನ್ನೇ ಧಾರೆಯೆರೆದ ನಿಜವಾದ ತ್ಯಾಗರಾಜರೇ - **ಶ್ರೀ ಗೋಪಾಲದಾಸರು.**

೫. ಮಡಿವಂತ ಪಂಡಿತದಾಸರು, ಪಂಡಿತನಾಗಲೀ, ಕರ್ಮಠನಾಗಲೀ, ದಾಸನಾಗಿಯೇ ಬಾಳಬೇಕೆಂದು ತಮ್ಮ ಜೀವನದಲ್ಲಿ ತೋರಿಸಿದ ದಾಸರು - **ಶ್ರೀ ಜಗನ್ನಾಥದಾಸರು.**

೬. **ಶೂದ್ರದಾಸರು** - ವರ್ಣಾಶ್ರಮ ಧರ್ಮಗಳ ಎಲ್ಲೆಕಟ್ಟನ್ನು ಮೀರಬಾರದೆಂದು ತೋರಿಸಿಕೊಟ್ಟ ದಾಸರು **ಶ್ರೀಕನಕದಾಸರು.** ದಾಸನ್ನ ಮಾಡಿಕೊ ಎನ್ನ ಎಂದು **ಶ್ರೀಪುರಂದರದಾಸರು** ಬೇಡಿಕೊಂಡರು, ಆದರೆ ಕೇಶವನೇ ಬಂದು ನೀನು ನನ್ನ ದಾಸನಾಗು ಎಂದು ಕನಕದಾಸರನ್ನು ಕೇಳಿಕೊಂಡನು. - ಇದೇ ವಿಶೇಷ.

೭. ಮೇಲ್ಕಂಡ ೬ ಭೇದಗಳುಳ್ಳ ದಾಸರು ಯಾರೇ ಆಗಲೀ ಅವರು ಶ್ರೀಮಧ್ವಶಾಸ್ತ್ರವನ್ನು ಅರ್ಥಮಾಡಿಕೊಂಡು ದಾಸರಾಗಲೇಬೇಕೆಂದು ತೋರಿದವರು.

ದಾಸನಾದರೇ ಹೀಗಿರಲೇಬೇಕು - ದೇಹ ಸಂಬಂಧಿಗಳ ಹಾಗೂ ದೇಹಾಭಿಮಾನವೇ ಮೊದಲಾದ ಸರ್ವಸ್ವದ ಸಂಗ ಪರಿತ್ಯಾಗ ಮಾಡಿ ವೈರಾಗ್ಯದಿಂದ ತ್ರಿಕರಣಶುದ್ಧಿಯಿಂದ ಜೀವಿಸಿ ಜಗತ್ತಿಗೆ ಸರಿಯಾದ ಸನ್ಮಾರ್ಗ ತೋರಿಸಿ ಉದ್ಧಾರ ಮಾರ್ಗಕ್ಕೆ ಉಪದೇಶ ಮಾಡುವ ಶಿಖಿ ಸೂತ್ರ ತ್ಯಾಗ ಮಾಡಿ ಕಾಶಾಯವನ್ನು ಧರಿಸಿರುವ ಪರಮಹಂಸ ಪರಿವ್ರಾಜಕರಾದ ಸನ್ಯಾಸಿಗಳೇ ಉಪದೇಶಮಾಡಲು ಅಧಿಕಾರಿಗಳು. ಇವರ ಅಧೀನದಲ್ಲಿ ಪಂಡಿತರು ದಾಸರುಗಳು, ಅನಂತರದ ಉಪದೇಶದ ಅಧಿಕಾರಿಗಳು. ಸಮೀಚೀನವಾದ ಧ್ಯಾನ, ಭಕ್ತಿ, ವೈರಾಗ್ಯ ಎಂಬುದು ಎಲ್ಲರಿಗೂ ಸಾಮಾನ್ಯ ಧರ್ಮ. ಯೋಗದಿಂದ ಸನ್ಯಾಸಪಡೆಯಬಹುದು. ಆದರೆ ಸನ್ಯಾಸತ್ವದ ಕ್ಷೇಮವನ್ನು ಉಳಿಸಿಕೊಳ್ಳವುದು ಬಹಳ ಶ್ರಮ. ಅಧಿಕಾರಿಗಳಾಗಿದ್ದರೂ ಸಹ ಶ್ರೀವ್ಯಾಸರಾಜರು ಶ್ರೀನಿವಾಸನಾಯಕರಿಗೆ ಸನ್ಯಾಸವನ್ನು ಕೊಡದೇ ಗೃಹಸ್ಥರಾಗೇ ಇದ್ದುಕೊಂಡು ಹೇಗೆ ಸಾಧನ ಮಾಡಿಕೊಳ್ಳಬಹುದು ಎಂಬುದನ್ನು ತೋರಿಸುವುದಕ್ಕಾಗಿಯೇ 'ಶ್ರೀಪುರಂದರವಿಠಲ' ಎಂಬ ಅಂಕಿತ ಕೊಟ್ಟು ದಾಸಪಂಥ ಎಂದು ಅಧಿಕಾರವನ್ನು ಕೊಟ್ಟು ಶ್ರೀಪುರಂದರದಾಸರನ್ನು ಮಾಡಿದರು.

## ಗೋಪಾಳ ವೃತ್ತಿ

**ಧ್ಯೇಯ** : ಭಗವನ್ನಾಮಸ್ಮರಣೆ ಮಾಡಿಕೊಂಡು, ಯಾಯಿವಾರವ ಮಾಡಿ ವಿಪ್ರರಿಗೆ ಮೃಷ್ಟಾನ ನೀಡುವುದಕ್ಕಾಗಿಯೇ ಗೋಪಾಳವೃತ್ತಿ - ಇದು ಬ್ರಾಹ್ಮಣರ ಸ್ವಧರ್ಮ, ಇದರಲ್ಲಿ ಪರಿಗ್ರಹ, ದಾನ ಎರಡು ಸೇರಿದೆ. ಬ್ರಾಹ್ಮಣರ ಸೇವೆ ಆದಮೇಲೆ ಉಳಿದದ್ದನ್ನು ನಾಳೆಗೆ ಇಡದೆ ನದಿಗೆಹಾಕಿ ಬಿಡುತ್ತಿದ್ದರು. ಇದರಿಂದ 'ಸಾಲಮಾಡಲಿಬೇಡ, ಸಾಲದೆಂದೆನಬೇಡ ನಾಳೆಗೆ ಹೇಗೆಂಬ ಚಿಂತೆ ಬೇಡ'. ಎಂಬ ಅಭಿಪ್ರಾಯವನ್ನು ತಮ್ಮ ಜೀವನದಲ್ಲಿ ಅನುಷ್ಠಾನ ಮಾಡಿ ಜಗತ್ತಿಗೆ ತೋರಿಸಿದರು.

"ಸರಕ್ಷಿತಾ ರಕ್ಷಿತ ಯೋಹಿ ಗರ್ಭೆ" ಎಂಬ ನಂಬಿಕೆಯನ್ನು ಜೀವನದಲ್ಲಿ ಅಳವಡಿಸಿಕೊಂಡು ಅಂದರೆ ಹೇಳಿದಂತೆ ನಡೆದುಕೊಂಡು ಅದರ ಅನುಭವವನ್ನು ತೋರಿಸಿಕೊಟ್ಟು ಇತರರು ಅದನ್ನೇ ಅನುಸರಿಸುವಂತೆ ಮಾಡುವುದೇ ಉಪದೇಶಕರ ಮಹಿಮೆ. ಇದರಿಂದ ಪಾಠ, ಊಟ ಮತ್ತು ನೋಟ ಮುಂತಾದವುಗಳ ಮೂಲಕ ಅನೇಕ ಉತ್ತಮ ವಿಚಾರಗಳನ್ನು ತಿಳಿಸಿಕೊಡುವುದೇ ಗೋಪಾಳದ ಉದ್ದೇಶ.

## ಗೋಪಾಳ ಮಾಡುವ ಕ್ರಮ

ಬಿಳಿಯ ಶುಭ್ರವಾದ ಕಚ್ಚೆಪಂಚೆ ಧರಿಸಬೇಕು, ಇದರಿಂದ 'ಬೆಳ್ಳುಡುಗೆ ಉಡುವಲ್ಲಿ ಯಶೋದೆನಂದನಗೆನ್ನಿ' ಎಂಬ ಅನುಸಂಧಾನದ ತತ್ವ ಬೋಧನೆ. ಬೆಳಿಗ್ಗೆ ಎದ್ದು ಪ್ರಾಥರಾನ್ಹಿಕ ಮುಗಿಸಿಕೊಂಡು ದೇವರ ನಿರ್ಮಾಲ್ಯ ವಿಸರ್ಜನೆ ಮಾಡಿ ಒಂದು ಸಾಲಿಗ್ರಾಮವನ್ನು ಸಂಪುಟದಲ್ಲಿಟ್ಟುಕೊಂಡು ಅದನ್ನು ಗೋಪಾಳದ ಬುಟ್ಟಿಯೊಳಗೆ ಇಟ್ಟುಕೊಂಡು ಗೋಪಾಳಕ್ಕೆ ಹೊರಡಬೇಕು. ದಾರಿಯಲ್ಲಿ ಹೋಗುವಾಗ ಯಾರನ್ನೂ ಗಮನಿಸಿ ನೋಡದೆ, ಯಾರು ಏನು ಹಾಕುತ್ತಾರೆ ಎಂಬುದನ್ನು ಗಮನಿಸದೇ ಭಗವಂತನನ್ನು ಗಾಯನ ಮಾಡುತ್ತಾ ಗೋಪಾಳದ ಬುಟ್ಟಿ ತುಂಬಿದ ಮೇಲೆ ಮನೆಗೆ ವಾಪಸ್ಸು ಬರಬೇಕು. ನಂತರ ಬಂದದ್ದನ್ನು ದೇವರು ಕೊಟ್ಟ ಭಾಗ್ಯ ಎಂದು ಯಾವ ವಿಕಾರವನ್ನು ಹೊಂದದೇ ಭಗವಂತನಿಗೆ ಸಮರ್ಪಣೆ ಮಾಡಿ ಬ್ರಾಹ್ಮಣರ ಭೋಜನ ಮಾಡಿಸಿ ಶ್ರೀಹರಿಗೆ ಅರ್ಪಿಸುವುದು. ಇದೇ ಗೋಪಾಳ ಮಾಡುವ ಕ್ರಮ.

## ದಾಸರ ಬಾಹ್ಯದೀಕ್ಷೆಯ ಅರ್ಥ (Uniform)

ಬಿಳಿಯ ಪಂಚೆ ಧರಿಸಿದ ಮೇಲೆ ಶ್ರೀಗೋಪಿಚಂದನದಿಂದ ದ್ವಾದಶನಾಮ ಮತ್ತು ಶ್ರೀಮುದ್ರೆಗಳನ್ನು ಆಯಾ ಸ್ಥಳಗಳಲ್ಲಿ ಧರಿಸಿ ತುಳಸಿ ಮಾಲೆಯನ್ನು ಧರಿಸಿ ದಾಸರ ದೇಹದಲ್ಲಿರುವ ತತ್ವೇಶ ದೇವತೆಗಳು, ಮುಖ್ಯಪ್ರಾಣದೇವರು, ಅವರಂತರ್ಯಾಮಿಯಾದ ಶ್ರೀಹರಿಗೆ ಅಲಂಕಾರ ಎಂದು ಚಿಂತನೆ ಮಾಡಬೇಕು. ದಾಸರು ಒಬ್ಬ ವ್ಯಕ್ತಿಯೆಂದು ತಿಳಿಯಬಾರದು ದಾಸರ ದೇಹ ಒಂದು ರಥವಿದ್ದಂತೆ, ಅದಕ್ಕೆ ಮಾಡಿದ ಅಲಂಕಾರ, ತಿರುಪತಿ ಶ್ರೀನಿವಾಸದೇವರ ರಥೋತ್ಸವ ಎಂಬ ಭಾವನೆಯಿಂದ ನೋಡಬೇಕು.

## ಗೆಜ್ಜೆ

ಲಜ್ಜೆ ಬಿಟ್ಟು, ಗೆಜ್ಜೆ ಕಟ್ಟಿ ಹೆಜ್ಜೆ ಹೆಜ್ಜೆಗೆ ಹರಿಯ ನಾಮ ಘರ್ಜಿಸುತ ಅಘವರ್ಜಿತರಾಗಿಪ್ಪರ ಸಂಗ ಏನು ಸುಖವೋ ರಂಗ, ಎಂಥ ಸುಖವೋ. - ದಾಸವಾಣಿ.

ನಾನು ನರ್ತನ ಮಾಡಿದರೆ ಯಾರಾದರೂ ನಕ್ಕು ಬಿಡುವರೋ ಎಂಬ ದೇಹಾಭಿಮಾನ ಬಿಡುಸುವುದಕ್ಕಾಗಿಯೇ ಗೆಜ್ಜೆ ಕಟ್ಟುವ ಅಭಿಪ್ರಾಯ. "ನಾಚಿಕೆ ಪಡಬೇಡ ಮನದಲಿ ಯೋಚಿಸಿ ಕೆಡಬೇಡ, ನೀಚವೇನೋ ತಮ್ಮ ಅಚ್ಯುತನೋಲಗ ಮೆಚ್ಚಿದರೆ ನಿನಗೆ ಹೆಚ್ಚಿನ ಪದವೀವ" -ದಾಸವಾಣಿ.

ಗೆಜ್ಜೆಯ ಕಟ್ಟಿದವ ಖಳರೆದೆ ಮೆಟ್ಟಿದವ' ಎಂದರೆ ಶ್ರೀಮಧ್ವಶಾಸ್ತ್ರನ್ನು ಚೆನ್ನಾಗಿ ತಿಳಿದುಕೊಂಡು ಮಧ್ವವಿರೋಧಿಗಳಲ್ಲಿ ವಿರೋಧಭಾವವನ್ನು ತೋರಿಸುವುದೇ ಈ ಗೆಜ್ಜೆ ಕಟ್ಟುವ ದಿಟ್ಟತನದ ಅಭಿಪ್ರಾಯ, ಅಂದರೆ ಗೆಜ್ಜೆ ಕಟ್ಟುವವನಿಗೆ ಮೇಲಿನ ಜ್ಞಾನವಿರಬೇಕು ಎಂದು ಅಭಿಪ್ರಾಯ.

## ತಂಬೂರಿ

ತಂಬೂರಿ ಎಂದರೆ 'ತಂ ಬ್ರೂಹಿ' ಭಗವಂತನನ್ನು ದೋಷರಹಿತ ಗುಣಪೂರ್ಣ ಎಂದು ಹೇಳುವುದೇ ತಂಬೂರಿಯ ಅಭಿಪ್ರಾಯ - ಇದು ಶೃತಿ. ಶೃತಿ ಸ್ಮೃತಿ ಹರೇರಾಜ್ಞ, ಶೃತಿ ಎಂದರೆ ಅಪೌರುಷೇಯರಾದ ವೇದಗಳು ಅದನ್ನು ಅನುಸರಿಸಿ ಬರುವ ಸ್ಮೃತಿಗಳು ಪೌರುಷೇಯವಾದುಗಳು. ಶೃತಿಯನ್ನು ಅನುಸರಿಸಿ, ಸ್ಮೃತಿ ಇರಬೇಕು. ಇಲ್ಲದಿದ್ದರೆ ಅಪಾರ್ಥವಾಗುತ್ತದೆ. ಅದರಂತೆ ಶೃತಿ ಎಂದರೆ ತಂಬೂರಿಯ ನಾದ. ತಂಬೂರಿಯ ನಾದ ಸರಿಯಾಗಿ ಇದ್ದರೆ - ಸ್ಮೃತಿ ಎಂದರೆ ಹಾಡುವುದಕ್ಕೆ

ಸರಿಯಾದ ಮನೋಧರ್ಮ ಇರುತ್ತದೆ. ಶೃತಿ ಕೆಟ್ಟರೆ, ಸ್ಮೃತಿ ಕೆಡುತ್ತದೆ, ಸರಿಯಾಗಿ ಹಾಡುವುದಕ್ಕಾಗುವುದಿಲ್ಲ. 'ತಂಬೂರಿ ಮೀಟಿದವ ಬವಾಬ್ಧಿ ದಾಟಿದವ' ಎಂದರೆ ಶ್ರೀಮದ್ವಶಾಸ್ತ್ರದ ಜ್ಞಾನ ಶೃತಿ ಸ್ಮೃತಿಗಳ ಜ್ಞಾನ. ಇದು ಉಳ್ಳವನು ಯಾವನೋ ಅವನೇ ತಂಬೂರಿ ಮೀಟಿದವನು ಎಂದು ತಂಬೂರಿಯ ಅಭಿಪ್ರಾಯ 'ಅವನೇ ಭವಾಬ್ಧಿದಾಟಿದವ'.

**ಚಿಟಿಕೆ (ತಾಳ)**

ಲಯಬದ್ಧವಾಗಿ ಹಾಡಬೇಕು ಎಂದು ಇದರ ಅರ್ಥ, ಇಲ್ಲದಿದ್ದರೆ ಅವ್ಯವಸ್ಥೆಯಾಗುತ್ತದೆ. ಲಯ ಎಂದರೆ ಶಾಸ್ತ್ರಸಮ್ಮತವಾಗಿ ಮಾತನಾಡವುದು ಎಂದು ಅರ್ಥ. ಶಾಸ್ತ್ರಜ್ಞಾನ ಇಲ್ಲದವನು ಮಾತನಾಡಿದರೆ ಸರಿಯಾದ ಅಭಿಪ್ರಾಯವು ಸಿಕ್ಕುವುದಿಲ್ಲ. ಆದ್ದರಿಂದ **'ತಾಳವ ತಟ್ಟಿದವ ಸುರರೊಳು ಸೇರಿದವ'** ಎಂದರೆ ಮೇಲೆ ಹೇಳಿದಂತೆ ಶ್ರೀಮದ್ವಶಾಸ್ತ್ರ ಜ್ಞಾನವುಳ್ಳವನು ಸರಿಯಾಗಿ ತಾಳ ತಟ್ಟುವವನು, ಅವನು ದೇವತಾಪುರುಷನೋ ಅಥವಾ ದೇವತಾ ಸನ್ನಿಧಾನವುಳ್ಳವನೋ ಎಂದು ಅಭಿಪ್ರಾಯ. ತಾಳಜ್ಞಾನವಿಲ್ಲದೇ ಹಾಡಿದರೆ ತಾಳಜ್ಞಾನ ಇರುವವರಿಗೆ ಪಜೀತಿಯಾಗುತ್ತದೆ. ಇಳೆಸುತ ಅರಸನು ಒಪ್ಪುವುದಿಲ್ಲ.

**ಭವನಾಶಿ**

ಭವನಾಶಿ ಎಂದರೆ ಗೋಪಾಳ ಬುಟ್ಟಿ, ಭವನಾಶ ಮಾಡುವ ಬುಟ್ಟಿ ಎಂದರೆ ಭವನಾಶಿಗೆ ಯಾರು ಶ್ರೀ ಹರಿವಾಯುಗಳ ಪ್ರೀತ್ಯರ್ಥವಾಗಿ ಪದಾರ್ಥಗಳನ್ನು ಸಮರ್ಪಣೆ ಮಾಡುತ್ತಾರೋ ಅವರು ಸಂಸಾರದಿಂದ ಬಿಡುಗಡೆ ಹೊಂದುವವರು ಇದರಿಂದ ಫಲಬರಲಿ ಎಂಬ ಸಕಾಮ ಭಾವನೆಯನ್ನು ಬಿಟ್ಟು ನಿಷ್ಕಾಮ ಭಾವದಿಂದ ಶ್ರೀಹರಿಪ್ರೀತನಾಗಲೆಂದು ನಮ್ಮ ಕರ್ಮಗಳನ್ನು ಮಾಡಬೇಕು ಎಂದು ಸ್ಮರಿಸುವುದೇ ಭವನಾಶಿ ಎಂಬ ಗೋಪಾಳದ ಬುಟ್ಟಿಯ ಅಭಿಪ್ರಾಯ.

**ಶಾಠಿ**

ಶಾಠಿ ಎಂಬುವುದು ಕಾವಿಯ ಬಟ್ಟೆ. ಇದು ವಿರಕ್ತರಾದ ಸನ್ಯಾಸಿಗಳು ಉಪಯೋಗಿಸುವ ವಸ್ತ್ರ. ಇದನ್ನು ಗೃಹಸ್ಥರು ಉಟ್ಟಿಕೊಂಡು ಆಹ್ನೀಕ ಮಾಡಬಾರದು ಮತ್ತು ಸೊಂಟದ ಕೆಳಗೆ ಉಡಬಾರದು. ಇದಕ್ಕೆ ಶೇಷವಸ್ತ್ರ ಎಂದು ವಿಶೇಷವುಂಟು ಎಂದರೆ ಮಹಾತಪಸ್ವಿಗಳಾದ ಸನ್ಯಾಸಿಗಳು ಉಟ್ಟಿರುವ ಮತ್ತು ಅವರಿಂದ ಅನುಗ್ರಹಿಸಲ್ಪಟ್ಟ ಕಾವಿಶಾಠಿಯು ಗೃಹಸ್ಥರಿಗೆ ಪಾಠಪ್ರವಚನ ಮಾಡುವಾಗ ಹೆಗಲ ಮೇಲೆ ಧರಿಸಬಹುದು ಮತ್ತು ದಾಸರು ಗೋಪಾಳಕ್ಕೆ ಹೋಗುವಾಗ ತಲೆಗೆ ಅಲಂಕಾರವಾಗಿ ಸುತ್ತಿಕೊಳ್ಳಬೇಕು. ಇದರ ಸನ್ನಿಧಾನದಿಂದ ಅದನ್ನು ಧರಿಸಿದವರ ಮನಸ್ಸು ಶುದ್ಧವಾಗಿರುತ್ತದೆ. ಇದು ಶ್ರೀರಾಘವೇಂದ್ರ ಸ್ವಾಮಿಗಳವರ ಶಾಠಿಯ ಕಥೆಯಲ್ಲಿ ವ್ಯಕ್ತವಾಗಿದೆ.

ಕಾವಿಶಾಠಿ ಧರಿಸಿದವರೇ ಉಪದೇಶಕ್ಕೆ ಅಧಿಕಾರಿಗಳು. ಆದ್ದರಿಂದ ಕಾವಿಶಾಠಿ ಧರಿಸುವ ಪರಮಹಂಸ ಸನ್ಯಾಸಿಗಳಿಂದ ಅನುಗ್ರಹಿತವಾಗಿ ಕೊಡಲ್ಪಟ್ಟ ಶಾಠಿಯು ಭಕ್ತಿಯಿಂದ ಅಲಂಕಾರ ಪೂರ್ವಕವಾಗಿ ತಲೆಗೆ ಸುತ್ತಿದ ಮೇಲೆ, ಸುತ್ತಿರುವವರೂ ಸಹ ಉಪದೇಶಕ್ಕೆ ಅಧಿಕಾರಿಗಳು ಎಂದು ಅಧಿಕಾರವನ್ನು ಪಡೆದುಕೊಂಡ ಸಂಕೇತ. ಬೆನ್ನಿನ ಭಾಗ ನೋಡಿದವರಿಗೆ ಒಂದು ತರಹದ ಮನಸ್ಸು ವಿಕಾರವಾಗಬಹುದು. ಅದಕ್ಕೆ ಹಿಂಭಾಗ ಮುಚ್ಚಿಕೊಂಡಿರಬೇಕು ಅದಕ್ಕೆ ಶಾಠಿ ಸೊಂಟದವರೆಗೆ ಹಿಂಭಾಗದಲ್ಲಿರಬೇಕು. ದೇವರ ಉತ್ಸವಗಳು ಮಾಡುವಾಗ ಹಿಂಭಾಗದಲ್ಲಿ ಬಟ್ಟೆ ಕಟ್ಟಿರುತ್ತಾರೆ.

ದಾಸರು ಎಂದರೆ ಶ್ರೀಮದ್ವಶಾಸ್ತ್ರ ಸಂಪನ್ನರೂ ಹಾಗೂ ಅದರ ಕನ್ನಡ ವ್ಯಾಖ್ಯಾನಕಾರರೆಂಬ ಅಭಿಪ್ರಾಯವನ್ನು ಇಟ್ಟುಕೊಂಡು ಶ್ರೀವ್ಯಾಸರಾಜರು ಪುರಂದರದಾಸರನ್ನು ದಾಸಪಂಥಕ್ಕೆ

ಪ್ರವರ್ತಕರನ್ನಾಗಿ ಮಾಡಿದರು. 'ಗಾಯನವ ಮಾಡಿದವ ಹರಿಮೂರ್ತಿ ನೋಡಿದವ' ಎಂದರೆ ಬಾಹ್ಯಾಪರೋಕ್ಷ ಜ್ಞಾನಿಯೆಂದು ಅರ್ಥ. ಶ್ರೀಕೃಷ್ಣದೇವರು, ಶ್ರೀರಾಮದೇವರನ್ನು ಪ್ರತ್ಯಕ್ಷವಾಗಿ ನೋಡಿದವರು ಎಂದು ಅರ್ಥ. 'ಶ್ರೀಪುರಂದರವಿಠಲನ ನೋಡಿದನ ವೈಕುಂಠಕೆ ಓಡಿದವ' ಎಂದರೆ ಬಿಂಬಾಪರೋಕ್ಷವಾಗಿ ಲಿಂಗಭಂಗ ಪಡೆದು ಮುಕ್ತಸ್ಥಾನಕ್ಕೆ ಹೋಗುವವರು ಎಂದು ಅರ್ಥ.

**ನೀತಿಯೆಲ್ಲವನರಿತು** (ವೇದ, ಶಾಸ್ತ್ರ, ಪುರಾಣ, ಶ್ರೀಮದ್ವಶಾಸ್ತ್ರ ಇವುಗಳ ಅಭಿಪ್ರಾಯವನ್ನು ತಿಳಿದವರು) **ನಿಗಮವೇದ್ಯನ** (ವೇದ ಪ್ರತಿಪಾದ್ಯನ) **ನಿತ್ಯ ವಾತಸುತನಲ್ಲಿಹನ** ಶ್ರೀಭಾರತೀರಮಣ-ಮುಖ್ಯಪ್ರಾಣಾಂತರ್ಗತನಾಗಿರುವ ಶ್ರೀಹರಿಯನ್ನು **ವರ್ಣಿಸುತಲಿ** ಎಂದರೆ ಪರಮತ ಖಂಡನ ಪೂರ್ವಕ, ಸ್ವಮತಸ್ಥಾಪನ ದೀಕ್ಷಾ ಬದ್ಧರಾಗಿ ಶ್ರೀಹರಿಸರ್ವೋತ್ತಮ, ವಾಯುಜೀವೋತ್ತಮ ಪಂಚಭೇಧ, ತಾರತಮ್ಯ, ಜಗತ್ ಸತ್ಯ ಎಂಬ ತತ್ವಗಳನ್ನು ತೋರಿಸುತ್ತಾ, **ಗೀತ ನರ್ತನದಿಂದ** ಸಾಮಗಾನಗಳಿಂದ ನವವಿಧ ದ್ವೇಷರಹಿತವಾದ, ನವವಿಧ ಭಕ್ತಿಗಳಿಂದ, **ಕೃಷ್ಣನ್ನ ಪೂಜಿಸುವ,** ಪೂತಾತ್ಮ ಪವಿತ್ರರಾದ ಶ್ರೀಪುರಂದರದಾಸರಿವರಯ್ಯ ಎಂದು ಶ್ರೀವ್ಯಾಸರಾಜರು ಶ್ರೀಪುರಂದರದಾಸರಿಗೆ ಅನ್ವರ್ಥವಾದ ಪ್ರಶಸ್ತಿಯನ್ನು ನೀಡಿದ್ದಾರೆ.

## ಈಗಿನ ಕಾಲದಲ್ಲಿ ಗೋಪಾಳ ಮಾಡುವ ಕ್ರಮ ಈ ಕೆಳಕಂಡಂತೆ ಮಲಿನವಾಗುತ್ತಿದೆ.

ಗೋಪಾಳಕ್ಕೆ ಹೋಗುವವರಿಗೆ ಮಂಚಿ ಪಂಚೆ ಉಡುವುದಕ್ಕೆ ಬರುವುದಿಲ್ಲ, ತಲೆಗೆ ಶಾಠಿ ಸುತ್ತಿರುವುದು ತಮಿಳುನಾಡಿನ ಕೂಲಿಯವರು ಸುತ್ತುವಂತೆ ಸೊಟ್ಟಪಟ್ಟ ಸುತ್ತಿರುತ್ತಾರೆ. ನೋಡುವುದಕ್ಕೆ ಅಂದವಾಗಿ ಕಾಣುವುದಿಲ್ಲ, ಮುಖ ಕ್ಷೌರ ಮಾಡಿರುತ್ತಾರೆ. ಕೈಗೆ ಕಾಲಸೂಚಕ ಯಮಕಂಕಣ (ವಾಚ್) ಕಟ್ಟಿರುತ್ತಾರೆ. ಒಳಗಡೆ ಚಡ್ಡಿಹಾಕಿಕೊಂಡು ಪಂಚೆ ಉಟ್ಟಿಕೊಂಡಿರುತ್ತಾರೆ. ಗೋಪಾಳಕ್ಕೆ ಹೋಗುವಾಗ ಯಾವ ನಿರ್ಬಂಧವಿಲ್ಲದೇ ಮಧ್ಯೆ ಮಧ್ಯೆ ಯಾರಹತ್ತಿರವೋ ಮಾತನಾಡುವುದೋ, ಗೋಪಾಳಕ್ಕೆ ಏನು ಹಾಕುತ್ತಾರೋ ಎಂದು ನೋಡುವುದು ಮುಂತಾದ ನಡತೆಗಳಿಂದ ಸಾತ್ವಿಕರಿಗೆ ಭಕ್ತಿಯೇ ಹುಟ್ಟದಂತೆ ಮಾಡುತ್ತಾರೆ. ಇದನ್ನು ಆಕ್ಷೇಪಣೆ ಎಂದು ತಿಳಿದುಕೊಳ್ಳಬಾರದು. ಗೋಪಾಳಕ್ಕೆ ಹೋಗಬೇಕೆಂಬ ಬುದ್ಧಿ, ಶಾಠಿ ಸುತ್ತಬೇಕೆಂಬ ಬುದ್ಧಿ, ತಾಳ ತಟ್ಟಬೇಕೆಂಬ ಬುದ್ಧಿ, ಹಾಡಬೇಕೆಂಬ ಬುದ್ಧಿ ಉತ್ತಮವಾದುದೇ, ಆದರೇ ಅದಕ್ಕೆ ಪೂರ್ವಕವಾಗಿ ಮೇಲಿರತಕ್ಕ ದೋಷಗಳನ್ನು ಸರಿಪಡಿಸಿಕೊಂಡರೇ ಶ್ರೀಹರಿವಾಯುಗುರುಗಳ ಕೃಪೆಗೆ ಪಾತ್ರರಾಗುತ್ತಾರೆ.

## ಗಮನವಿಟ್ಟು ಮಾಡಬೇಕಾದುದು

ಯಾವ ಕೆಲಸ ಮಾಡಿದರೂ ಸಹ, ಬೇರೆ ಯೋಚನೆ ಮಾಡದೆ ಅದರ ಮೇಲೇ ಗಮನವಿಟ್ಟು ಮಾಡುವುದು, ಇದು ಬಹಳ ಮುಖ್ಯವಾದುದು. ಇಲ್ಲದಿದ್ದರೆ ಕೆಲಸವಾಗುತ್ತದೆಯೇ ಹೊರತು ಸರಿಯಾಗಿ ಹೇಗೆ ಆಗಬೇಕೋ ಹಾಗೆ ಆಗುವುದಿಲ್ಲ. ಇದರಿಂದ ಪ್ರಯೋಜನವೇನಾಯಿತು? ಮಲಮೂತ್ರ ವಿಸರ್ಜನೆ ಮಾಡುವಾಗ ದೈತ್ಯರ ತಾರತಮ್ಯ ಚಿಂತನೆ ಮಾಡಬೇಕು. ಸ್ನಾನ ಮಾಡುವಾಗ ನೀವು ಯಾವ ಯಾವ ನದಿಗಳಲ್ಲಿ ಸ್ನಾನ ಮಾಡಿರುತ್ತೀರೋ ಅದನ್ನು ಚಿಂತನೆ ಮಾಡಿ, ನಮ್ಮ ದೇಹದಲ್ಲಿರುವ ಭಗವಂತನಿಗೆ ಅಭಿಷೇಕ ಎಂದು ಯೋಚಿಸಬೇಕು. ದ್ವಾದಶನಾಮ ಮುದ್ರೆ ಧಾರಣ ಮಾಡುವಾಗ ನಮ್ಮ ದೇಹದಲ್ಲಿರುವ ಶ್ರೀ ವೇದವ್ಯಾಸದೇವರಿಗೆ ಅಲಂಕಾರ ಎಂದು ಚಿಂತನೆ ಮಾಡಬೇಕು. ಅರ್ಘ್ಯ ಕೊಡುವಾಗ, ಅರ್ಘ್ಯದ ಮಂತ್ರ ಅರ್ಥ ಮಾಡಿಕೊಂಡು ಅರ್ಘ್ಯ ಸ್ವೀಕರಿಸುವ ದೇವತಾಂತರ್ಯಾಮಿ ಶ್ರೀಹರಿಗೆ ಎಂದು ಸ್ಮರಿಸುವುದು. ಜಪ ಮಾಡುವಾಗ ಜಪಿಸುವ ಮಂತ್ರದ ಅರ್ಥವನ್ನು ತಿಳಿದುಕೊಂಡು ಯಾವ ದೇವತೆಯನ್ನು ಕುರಿತು ಜಪ ಮಾಡುತ್ತೀವೋ ಅದನ್ನು ಚಿಂತಿಸಿ ಅವರೊಳಗೆ ಇರುವ ಶ್ರೀಹರಿಗೆ ಅರ್ಪಿಸಬೇಕು. ಪೂಜೆ ಮಾಡುವಾಗ ಪ್ರತಿಮಾ, ಸಾಲಿಗ್ರಾಮಗಳೇ

ದೇವರೆಂದು ತಿಳಿದುಕೊಳ್ಳದೇ ಅದರೊಳಗೆ ದೇವರಿದ್ದಾನೆ ಎಂದು ಚಿಂತಿನೆ ಮಾಡುವುದು. ತೀರ್ಥ ತೆಗೆದುಕೊಳ್ಳುವಾಗ ಸಾಲಿಗ್ರಾಮ ತೀರ್ಥ, ವಾಯುದೇವರ ತೀರ್ಥ, ಗುರುಗಳ ಪಾದೋದಕ ಇವುಗಳಲ್ಲಿ ಆಯಾಯಾ ದೇವತೆಗಳ ಕರುಣಾ ಪೂರ್ಣವಾದ ಅನುಗ್ರಹವಿದೆ ಎಂದು ಚಿಂತನೆ ಮಾಡಿ ತೆಗೆದುಕೊಳ್ಳಬೇಕು. ಇದಕ್ಕೆ ರಾಜಒಡೆಯರ ದೃಷ್ಟಾಂತ ಹಿಂದೆ ಕೊಟ್ಟಿರುತ್ತದೆ. ಭೋಜನ ಮಾಡುವಾಗ ಅಂತರ್ಯಾಮಿಯಾದ ಭಗವಂತನಿಗೆ ನೇವೇದ್ಯವೆಂದು ಚಿಂತನೆ ಮಾಡಬೇಕು. ಇದರ ಬಗ್ಗೆ ಹಿಂದೆ ತಿಳಿಸಿದೆ. ಪ್ರಸಾದ ತೆಗೆದುಕೊಳ್ಳುವಾಗ ಯಾವ ದೇವರ ಪ್ರಸಾದವೋ ಅದರಲ್ಲಿ ಆ ದೇವರ ಕರುಣಾಮಯವಾದ ಅನುಗ್ರಹರೂಪವಾದ ಮಹಿಮೆಯಿದೆ ಎಂದು ಚಿಂತಿಸುವುದು. ಮಲಗುವಾಗ ಶೇಷದೇವರ ಮೇಲೆ ಮಲಗಿರುವ ಶ್ರೀರಂಗನಾಥನನ್ನು ಸ್ಮರಿಸುವುದು ಜೀವನೋಪಾಯಕ್ಕಾಗಿ ಮಾಡುವ ಉದ್ಯೋಗಗಳಾದ ಪೌರೋಹಿತ್ಯ, ಶಾಲೆಗಳಲ್ಲಿ ಪಾಠ ಹೇಳುವುದು, ಕೋರ್ಟ್ ಲಾಯರ್ ಕೆಲಸ, ಅಂಗಡಿ ವ್ಯಾಪಾರದ ಕೆಲಸ, ಆಸ್ಪತ್ರೆಯಲ್ಲಿ ವೈದ್ಯರ ಕೆಲಸ, ಕಾರ್ಖಾನೆಯಲ್ಲಿ ಕೆಲಸ, ಮುಂತಾದ ಕೆಲಸಗಳನ್ನು ಮಾಡುವಾಗ ಮೋಸ ಮಾಡದೇ, ಲೋಪ ಮಾಡದೇ, ಭಗವಂತ ನಮಗೆ ಕೊಟ್ಟ ಕೆಲಸವೆಂದು ಕರ್ತವ್ಯ ದೃಷ್ಟಿ ಇಟ್ಟುಕೊಂಡು ಕಾಲ ಕಳೆಯದೆ ಕೆಲಸ ಮಾಡುವುದು. ಸಂಭಾವನೆ, ಸಂಬಳ ಮುಂತಾದ ಪ್ರತಿಫಲ ಬರುವುದು ಆ ಸಂಸ್ಥೆಗಳಿಂದಲೇ ಎಂದು ತಿಳಿದುಕೊಳ್ಳದೇ ಅದರ ಮೂಲಕ ಭಗವಂತ ಕೊಟ್ಟ ಪರಮಾನುಗ್ರಹವೆಂದು ಸಂತೋಷಪಟ್ಟುಕೊಳ್ಳುವುದು.

ನಿಷೇಧವಾದದ್ದನ್ನು ಬಿಟ್ಟು ಉಳಿದ ಎಲ್ಲಾ ಗೃಹಕಾರ್ಯಗಳನ್ನು ಅಲ್ಲಲ್ಲಿ ಅಂತರ್ಯಾಮಿಯಾಗಿರುವ ಶ್ರೀಹರಿಯ ಸೇವೆ ಎಂದು ಗಮನವಿಟ್ಟು ಮಾಡುವುದು.

ತದ್ರೂಪ, ತನ್ನಾಮ, ತತ್ತೇಜ, ತದ್ಭಿನ್ನ ತಂ ಶ್ರೀನಿವಾಸಂ ನಮಾಮಿ

ಈ ಮಂತ್ರ ಎಲ್ಲೆಲ್ಲೂ ಮರೆಯದೇ ಸ್ಮರಿಸುವುದು.

## ಶ್ರೀಕನಕದಾಸರ ಆರಾಧನೆ

ಆರಾಧನೆ ಎಂದರೆ ಪೂಜೆ ಮಾಡುವುದು ಎಂದು ಅರ್ಥ. ಪೂಜೆ ಮಾಡುವುದರಲ್ಲಿ ಅಧಿಷ್ಠಾನ ಭೇದದಿಂದ ಪೂಜೆಯ ಕ್ರಮ ವ್ಯತ್ಯಾಸವಾಗುತ್ತದೆ. ಸಾಲಿಗ್ರಾಮ, ಶಿಲಾ, ಲೋಹ ಪ್ರತಿಮೆಗಳಿಗೆ ಪಂಚಾಮೃತ ಮತ್ತು ನೀರುಗಳಿಂದ ಅಭಿಷೇಕ ಮಾಡುವಂತೆ ಮಣ್ಣಿನ ಗಣಪತಿಗೆ ಅಥವಾ ಪುಸ್ತಕಗಳಿಗೆ ಮಾಡುವುದಕ್ಕಾಗುವುದಿಲ್ಲ. ಅಲ್ಲಿ ಹೂವು ಮತ್ತು ಮಂತ್ರಾಕ್ಷತೆಗಳಿಂದ ಪ್ರೋಕ್ಷಣೆಗಳಿಂದಮಾಡಬೇಕು. ಹೀಗಂದ ಮಾತ್ರಕ್ಕೆ ಪ್ರತಿಮೆ ದೃಷ್ಟಿಯಿಂದ ಮಣ್ಣಿನ ಗಣಪತಿಗೆ ಪುಸ್ತಕಕ್ಕೆ ಅವಮಾನವಾಯಿತೆಂದು ತಿಳಿದುಕೊಳ್ಳಬಾರದು. ಮಹಾಭಾರತದಲ್ಲಿ, ಶೂದ್ರರಾಗಿ ಜನ್ಮವೆತ್ತಿದ ವಿದುರರು ದೇಹತ್ಯಾಗ ಮಾಡಿದಾಗ ಅವರ ದೇಹಕ್ಕೆ ಬ್ರಾಹ್ಮಣರಂತೆ ಸಂಸ್ಕಾರ ಮಾಡಿಲ್ಲ. ಇದರಿಂದ ಯಾರ್‍ಯಾರಿಗೆ ಹೇಗೆ ಮಾಡಬೇಕೋ ಹಾಗೆಯೇ ಮಾಡಬೇಕೆಂಬುದೇ ಪರಂಪರೆಯ ಸಂಪ್ರದಾಯ. ವಿದುರರು ಸಾಕ್ಷಾತ್ ಯಮಧರ್ಮರ ಅಂಶರು. ಅವರೇ ಕನಕದಾಸರಾಗಿ ಬಂದರೆಂಬ ನಂಬಿಕೆ ಇದೆ. ಆದ್ದರಿಂದ ಇದನ್ನು ಉಲ್ಲಂಘಿಸುವಂತಿಲ್ಲ.

ಶ್ರೀಕನಕದಾಸರು, ಶ್ರೀವ್ಯಾಸರಾಜರ ಸನ್ನಿಧಿಯಲ್ಲಿ ಬಹಳ ಗೌರವಕ್ಕೆ ಪಾತ್ರರಾಗಿದ್ದರು ಹಾಗಂದ ಮಾತ್ರಕ್ಕೆ ಅವರು ವರ್ಣಾಶ್ರಮ ಧರ್ಮಗಳ ಎಲ್ಲೆ ಕಟ್ಟನ್ನು ಮೀರಿ ಬ್ರಾಹ್ಮಣರಂತೆ ಅನುಷ್ಠಾನ ಮಾಡಲಿಲ್ಲ. ಆದ್ದರಿಂದ ಇವರು ನಿಜವಾಗಿ ಪೂಜಾರ್ಹರು. ವರ್ಣಾಶ್ರಮಧರ್ಮಗಳನ್ನು ಮಾನ್ಯಮಾಡುವವರು ಎಂದ ಅಭಿಪ್ರಾಯ. ಶ್ರೀಪುರಂದರದಾಸರ ಆರಾಧನೆಯಂತೆ ಶ್ರೀಕನಕದಾಸರ ಆರಾಧನೆ ಮಾಡುವುದು ಶಾಸ್ತ್ರ ಸಮ್ಮತವಿಲ್ಲ. ಹೀಗಂದ ಮಾತ್ರಕ್ಕೆ ಶ್ರೀಕನಕದಾಸರಿಗೆ

ಅಗೌರವವಾಯಿತೆಂದು ತಿಳಿದುಕೊಳ್ಳಬಾರದು. ಶ್ರೀಕನಕದಾಸರ ದೇವರನಾಮ ಹೇಳದೇ ಮತ್ತು ಕೇಳದೇ ಇದ್ದರೆ, ಭಜನೆ ಪೂರ್ತಿಯಾಗುವುದಿಲ್ಲ. ಅಂದರೆ ದೇವರಿಗೆ ಸಮ್ಮತವಾಗುವುದಿಲ್ಲವೆಂದು ಅಭಿಪ್ರಾಯ. ಶ್ರೀಕನಕದಾಸರ ದೇವರನಾಮಗಳು, ನಳಚರಿತ್ರೆ, ಮೋಹನತರಂಗಿಣಿ, ರಾಮಧಾನ್ಯ ಚರಿತ್ರೆ ಮುಂತಾದ ಸಾಹಿತ್ಯಗಳನ್ನು ಬ್ರಾಹ್ಮಣರು ವಿಶೇಷವಾಗಿ ಮಾಧ್ವರು ವಾಚನ ಮಾಡುವ ಸಂಪ್ರದಾಯ ಇಟ್ಟುಕೊಂಡಿದ್ದಾರೆ. ಆದುದರಿಂದ ಶ್ರೀಕನಕದಾಸರಿಗೆ ಆರಾಧನೆ ಮಾಡುವುದೆಂದರೆ ಅವರ ಅಭಿಪ್ರಾಯಕ್ಕೆತಕ್ಕಂತೆ ಅವರ ಸಾಹಿತ್ಯವನ್ನು ವಾಚನ ಮಾಡುವುದು, ಮತ್ತು ಮನಸಾ ಮೂಲರೂಪವಾದ ಶ್ರೀಯಮಧರ್ಮರಾಜರಿಗೆ ವಂದನೆ ಮಾಡುವುದೇ ಅವರ ನಿಜವಾದ ಆರಾಧನೆ. ಇದರಿಂದ ಅವರಿಗೆ ನಾವು ಗೌರವವನ್ನು ಕೊಟ್ಟಿರುತ್ತೇವೆ. ಶ್ರೀಕನಕದಾಸರು ಸನ್ಯಾಸಿಗಳಾಗಿ ಮಠ, ಪೀಠ ಎಂದು ಪ್ರವರ್ತನೆ ಮಾಡಲಿಲ್ಲ. ಅವರು ದಾಸರಾಗೇ ಉಳಿದುಕೊಂಡರು. ಸನ್ಯಾಸವನ್ನು ಎಂದರೆ ಆಸೆ ಬಿಡುವುದನ್ನು ಎಲ್ಲರೂ ಮಾಡಬಹುದು. ಆದರೆ ಸನ್ಯಾಸಾಶ್ರಮ ಮಾತ್ರ ಎಲ್ಲರಿಗೂ ಅಧಿಕೃತವಲ್ಲ. ವರ್ಣಾಶ್ರಮ ಧರ್ಮಗಳ ಪ್ರಕಾರ ಬ್ರಾಹ್ಮಣರನ್ನು ಬಿಟ್ಟು ಉಳಿದ ಕ್ಷತ್ರಿಯ, ವೈಶ್ಯ, ಶೂದ್ರರಿಗೆ ಅವಕಾಶವಿಲ್ಲ. ಇದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕೇ ಹೊರತು, ಅಪಾರ್ಥ ಮಾಡಿಕೊಳ್ಳಬಾರದು. ವರ್ಣಾಶ್ರಮ ಧರ್ಮಗಳು ಎಂದಿಗೂ ಸಮಾಜಕ್ಕೆ ಘಾತಕವಾದುದಾಗಲೀ ಅಥವಾ ಸೌಹಾರ್ದಕ್ಕೆ ಧಕ್ಕೆ ತರುವಂಥದ್ದಾಗಲೀ ಅಲ್ಲ. ಅದರ ವ್ಯವಸ್ಥೆಯೇ ಸಮಾಜದ ಸುವ್ಯವಸ್ಥೆಗೆ ಕಾರಣವಾಗಿದೆ. ಆದರೆ ಈಚೆಗೆ ಕನಕದಾಸರ ಪರಂಪರೆಯವರು ಮಠ, ಪೀಠ, ಸ್ವಾಮಿಗಳು ಎಂಬ ಕ್ರಮವನ್ನು ಪ್ರಾರಂಭಿಸಿರುವಂತೆ ಶ್ರುತವಾಗಿದೆ. ಇದು ಸತ್ಯವಾದರೆ ಅದು ಶ್ರೀಕನಕದಾಸರಿಗೆ ಸಮ್ಮತವಾದುದಲ್ಲ. ಶ್ರೀಕನಕದಾಸರ ಪಂಥದವರು ದಾಸಪಂಥವನ್ನು ಅನುಸರಿಸಿ ಗೋಪೀಚಂದನದಿಂದ ಊರ್ಧ್ವಪುಂಡ್ರವನ್ನು ಧರಿಸಿ, ಏಕತಾರೆಯನ್ನು (ಕಿನ್ನರಿ) ಹಿಡಿದುಕೊಂಡು ಕನಕದಾಸರ ಪದಗಳನ್ನು ಹಾಡುತ್ತಾ ಸಾಧನೆ ಮಾಡಿಕೊಂಡು ಹೋಗುವುದು. ಆದ್ದರಿಂದ ಈ ಪಂಥದವರು ಈ ದಾರಿಯನ್ನು ಹಿಡಿದು ತಮಗೂ ಮತ್ತು ಸಮಾಜಕ್ಕೂ ಸ್ನೇಹಭಾವದಿಂದ ಸಾಧನ ಮಾಡಿಕೊಂಡು ಶ್ರೀಆದಿಕೇಶವನ ಅನುಗ್ರಹಕ್ಕೆ ಪಾತ್ರರಾಗಬಹುದು ಎಂಬುದಾಗಿ ವಿನಯ ಪೂರ್ವಕವಾಗಿ ಸಲಹೆ ಕೊಟ್ಟಿರುತ್ತದೆ. ಇದನ್ನು ಸಾವಧಾನವಾದ ಮನಸ್ಸಿನಿಂದ ವಿಚಾರಮಾಡಿ.

## ಚುಟುಕೇಶ್ವರ

## ವೈರಾಗ್ಯದ ಅಭಾವ

ಕೆಲವರಿಗೆ ವಿಪರೀತ ಹಣ ಸಂಗ್ರಹ ಮಾಡುವ ಬುದ್ಧಿ ಬರುತ್ತದೆ. ಅದಕ್ಕೆ ಕಾರಣ ನಾನು ಈ ಲೋಕದಲ್ಲಿ ಬಹಳದಿವಸ ಸುಖವಾಗಿ ಬಾಳುತ್ತೇನೆ ಎಂದು ನಂಬಿಕೆ. ಆದರೆ ಹಾಗೆಯೇ ನೆಡೆಯುತ್ತದೆ ಎಂದು ನಿಶ್ಚಯವಿಲ್ಲ, ಕ್ಷಣಕ್ಷಣಕ್ಕೆ ವ್ಯತ್ಯಾಸಗಳು ಕಂಡು ಬರುತ್ತಿರುತ್ತದೆ. ಅಥವಾ ಹಣವನ್ನು ಭೋಗಿಸುತ್ತೇವೆ ಎಂಬ ನಂಬಿಕೆಯು ಇಲ್ಲ. ಓದಿದ ಶಾಸ್ತ್ರ ಪುರಾಣಗಳ ವಚನಗಳಲ್ಲಿ ನಂಬಿಕೆಯಿಲ್ಲದಿರುವುದೇ ಇದಕ್ಕೆ ಮೂಲ. 'ಅಧೀನ ತಿಳಿಯುವುದಕ್ಕಿಂತ ಅನ್ಯ ಸಾಧನವಿಲ್ಲ ಆಯತವಾದದ್ದರೊಳಗೆ ನೋಯದೆ ಉಣ್ಣುವುದೇ ನ್ಯಾಯದವೈರಾಗ್ಯ - ವೈರಾಗ್ಯಭಾವದಿಂ ಜೀವಿಸಿಕೊಂಡಿರ್ಪುದೇ ಚಂದ'. (ದಾಸವಾಣಿ). ಆದ್ದರಿಂದ ಎಲ್ಲವೂ ದೇವರ ಅಧೀನ. ಜೀವನ ಅಶಾಶ್ವತ, ಎಂಬ ಜ್ಞಾನವನ್ನು ತಿಳಿದುಕೊಂಡು ಶಾಸ್ತ್ರದ ವಚನಗಳಲ್ಲಿ ನಂಬಿಕೆ ಇಟ್ಟುಕೊಂಡು ವೈರಾಗ್ಯದಿಂದ ಜೀವನ ಮಾಡುವುದೇ ಮುಖ್ಯವಾದ ಗುರಿಯಾಗಿರಬೇಕು. ಎಲ್ಲಾ ಬಿಟ್ಟು ಬಿಡುವುದು ವೈರಾಗ್ಯವಲ್ಲ. ಎಲ್ಲಾ ಇದ್ದರೂ ದೇವರು ಕೊಟ್ಟಿದ್ದು ಎಂದು ತಿಳಿದುಕೊಂಡು ಸುಖ, ದುಃಖ ಎರಡನ್ನು ಅನುಭವಿಸಿ ಅದಕ್ಕೆ ವಿಕಾರಗೊಳ್ಳದೇ ಇರುವುದೇ ವೈರಾಗ್ಯ.

# ಆಧುನಿಕ ಪ್ರಪಂಚದಲ್ಲಿ ಹರಿಸ್ಮರಣೆ

## ಲೋಕವ್ಯವಹಾರ

೧. ಕಲಿಯುಗದಲಿ ಹರಿನಾಮವ ನೆನೆದರೆ ಕುಲಕೋಟಿಗಳು ಉದ್ಧರಿಸುವುವು.

೨. ಮಲಗಿ ಪರಮಾದರದಿ ಪಾಡಲು। ಕುಳಿತು ಕೇಳುವ, ಕುಳಿತು ಪಾಡಲು । ನಿಲುವ, ನಿಂತರೆ ನಲಿವ, ನಲಿದರೆ ಒಲಿವೆ ನಿಮಗೆಂಬ।। ಸುಲಭನೋ ಹರಿ ತನ್ನವರನರ-। ಘಳಿಗೆ ಬಿಟ್ಟಗಲನು ರಮಾಧವ-। ನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೆ ।।

೩. ಮಕ್ಕಳಾಡಿಸುವಾಗ ಮಡದಿಯೊ। ಳಕ್ಕರದಿ ನಲಿವಾಗ ಹಯ ಪಲ್ಲಕ್ಕಿ ಗಜ ಮೊದಲಾದ ವಾಹನಗಳೇರಿ ಮೆರೆವಾಗ ।। ಬಿಕ್ಕುವಾಗ ಆಕಳಿಸುತಲಿ ದೇ। ವಕ್ಕಿತನಯನ ನೆನೆವುತಿಹ ನರ । ಸಿಕ್ಕನೆಮದೂತರಿಗೆ ಅವಾವಲ್ಲಿ ನೋಡಿದರು ।।

೪. ಮಲಗುವಾಗಲಿ ಏಳುವಾಗಲಿ । ಕುಳಿತು ಮಾತಾಡುತಲಿ ಮನೆಯೊಳು । ಕೆಲಸಗಳ ಮಾಡುತಲಿ ಮೈದೊಳೆವಾಗ ಮೆಲುವಾಗ ।। ಕಲುಷದೂರನ ಸಕಲ ಠಾವಿಲಿ । ತಿಳಿಯೆ ತತ್ತನ್ನಾಮರೂಪವ । ಬಳಿಯಲಿಪ್ಪನು ಒಂದರಕ್ಷಣ ಬಿಟ್ಟಗಲನವರ ।।

೫. ನರಜನ್ಮ ಬಂದಾಗ ನಾಲಿಗೆ ಇರುವಾಗ ಕೃಷ್ಣ ಎನಬಾರದೆ ।। ಪ ।।ಕೃಷ್ಣ ಎಂದರೆ ಕಷ್ಟವು ಪರಿಹಾರ ಕೃಷ್ಣ ಎನಬಾರದೆ ।। ಅಪ ।। ಮಲಗಿದ್ದು ಮೈಮುರಿದೇಳುತಲೊಮ್ಮೆ ಶ್ರೀಕೃಷ್ಣ ಎನಬಾರದೇ । ಸುಳಿದಾಡುತ ಮನೆಯೊಳಗಾದರು ಒಮ್ಮೆ ಕೃಷ್ಣ ಎನಬಾರದೆ ।। 1 ।। ಗಂಧವ ಪೂಸಿ ತಾಂಬೂಲವ ಮೆಲುವಾಗ ಕೃಷ್ಣ ಎನಬಾರದೆ । ಚೆಂದುಳ್ಳ ಹಾಸಿಗೆಯೊಳು ಕುಳಿತೊಮ್ಮೆ ಶ್ರೀಕೃಷ್ಣ ಎನಬಾರದೆ ।। 2 ।। ಸ್ನಾನ ಪಾನ ಜಪತಪಗಳ ಮಾಡುತ್ತ ಕೃಷ್ಣ ಎನಬಾರದೆ । ಶಾಲ್ಯಾನ್ನ ಷಡುರಸ ತಿಂದು ತೃಪ್ತನಾಗಿ ಕೃಷ್ಣ ಎನಬಾರದೆ ।। 3 ।। ಕಂದನ್ನ ಬಿಗಿದಪ್ಪಿ ಮುದ್ದಾಡುತಲೊಮ್ಮೆ ಶ್ರೀಕೃಷ್ಣ ಎನಬಾರದೆ ।। 4 ।। ಮೇರೆ ತಪ್ಪಿ ಮಾತಾಡುವಾಗಲೊಮ್ಮೆ ಕೃಷ್ಣ ಎನಬಾರದೆ ದಾರಿಯ ನಡೆವಾಗ ಭಾರವ ಹೊರುವಾಗ ಕೃಷ್ಣ ಎನಬಾರದೆ ।। 5 ।। ಪರಿಹಾಸ್ಯದ ಮಾತನಾಡುತಲೊಮ್ಮೆ ಶ್ರೀಕೃಷ್ಣ ಎನಬಾರದೆ । ಪರಿಪರಿ ಕೆಲಸದೊಳೊಂದು ಕೆಲಸವೆಂದು ಕೃಷ್ಣ ಎನಬಾರದೆ ।। 6 ।। ದುರಿತರಾಶಿಗಳನು ತರಿದು ಬಿಸಾಡುವ ಕೃಷ್ಣ ಎನಬಾರದೆ । ಗರುಡಗಮನ ನಮ್ಮ ಪುರಂದರವಿಠಲನ ಕೃಷ್ಣ ಎನಬಾರದೆ ।। 7 ।।

೬. ಸ್ಮರಿಸು ಸಂತತ ಹರಿಯನು ಮನವೆ । ಸ್ಮರಿಸು ಸಂತತ ಹರಿಯ ಕರುಣಾಳುಗಳ ದೊರೆಯ ।। ಸರಸಿಯೊಳಗೊಂದು ಕರಿಯ, ನರನ ಸಂಗರದೊಳಗೆ ಕಾಯ್ದುದರಿಯ । ಜಪ ಹೋಮ ವ್ರತ ದಾನ ತಪಕೆ ದೊರೆಯ, ಜಗದೀಶ ಶರಣು ಪೊಕ್ಕವರ ತೊರೆಯ, ಖರೆಯ ।।

ಮೇಲೆ ಉಕ್ತವಾದ ಆರುಪದಗಳ ಒಟ್ಟು ತಾತ್ಪರ್ಯಗಳಲ್ಲಿ ದೇಶ ಸಂದರ್ಭಗಳನ್ನು ಅನುಸರಿಸಿ ಆ ಕಾಲಕ್ಕೆ ಹೊಂದತಕ್ಕ ಭಗವನ್‌ಮಹಿಮೆಗಳನ್ನು ಸ್ಮರಿಸಿಕೊಂಡು ಸುಖಪಡುವುದೇ ಜೀವನದ ಗುರಿಯಾಗಿರಬೇಕು. ಏನಕೇನ ಪ್ರಕಾರೇಣ ಹರಿಸ್ಮರಣೆಯನ್ನು ಮಾಡಿ ಬದುಕುವುದೇ ಜೀವನದ ಗುರಿ. ಈ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ಆಧುನಿಕ ಪ್ರಪಂಚದಲ್ಲಿ ಹರಿಸ್ಮರಣೆಯನ್ನು ಜೀವನದ ಜಂಜಾಟದ ಮಧ್ಯೆ ಮಾಡುವ ಉಪಾಯವನ್ನು ಶ್ರೀಹರಿವಾಯುಗಳ ಪ್ರೇರಣೆಯಂತೆ ಬರೆದಿರುತ್ತೆ. ಇದರ ಅಭಿಪ್ರಾಯವನ್ನು ಸರಿಯಾಗಿ ಅರ್ಥ ಮಾಡಿಕೊಂಡು ಸುಖಪಡಬೇಕೆ ಹೊರತು ಹಾಸ್ಯಭಾವದಿಂದಾಗಲೀ ಅಥವಾ ಅಸಡ್ಡೆಯಿಂದಾಗಲೀ ಅವಹೇಳನ ಮಾಡಬಾರದು.

ತಾಯಿ-ತಂದೆಗಳ ಸೇವೆ ಮಾಡುವಾಗ ಹಾಗೆ ಅಜ್ಜ-ಅಜ್ಜಿ ಮುಂತಾದ ಹಿರಿಯರ ಸೇವೆ ಮಾಡುವಾಗ, ಪುಂಡರೀಕವರದ, ಈ ಕರ್ಮ ನಿನಗೆ ಅರ್ಪಿತವಾಗಲಿ - ಎಂದು ಸ್ಮರಿಸುವುದು.

ಗುರುಗಳ ಸೇವೆ ಮಾಡುವಾಗ, ಶ್ರೀಕೃಷ್ಣನು ಸಾಂದೀಪಿನ್ಯಾಚಾರ್ಯರ ಸೇವೆ ಮಾಡಿದುದು, ಹಾಗೆಯೇ ಶ್ರೀಮನ್ಮಧ್ವಾಚಾರ್ಯರು ಅಚ್ಯುತಪ್ರೇಕ್ಷಾಚಾರ್ಯರ ಸೇವೆ ಮಾಡಿದುದನ್ನು ಜ್ಞಾಪಿಸಿಕೊಳ್ಳುವುದು.

- ಸ್ನೇಹಿತರ ಸೌಖ್ಯ ಅನುಭವಿಸುವಾಗ, ಶ್ರೀಕೃಷ್ಣ-ಸುಧಾಮರನ್ನು ಸ್ಮರಿಸುವುದು.
- ಅವಲಕ್ಕಿ ತಿನ್ನುವಾಗ, ಕುಚೇಲವರದ ಎಂದುಕೊಳ್ಳುವುದು.
- ರಾತ್ರಿ ದೀಪ ಆರಿಹೋದಾಗ, ಶ್ರೀಮದಾಚಾರ್ಯರು ಪಾಠ ಹೇಳುತ್ತಲಿದ್ದಾಗ ದೀಪ ಆರಿಹೋಯಿತು. ಶ್ರೀಮದಾಚಾರ್ಯರು ತಮ್ಮ ಉಗುರಿನಿಂದ ಬೆಳಕನ್ನು ಸೃಷ್ಟಿ ಮಾಡಿ ಪಾಠವನ್ನು ಮುಂದುವರೆಸಿದರು. ಇದನ್ನು ಜ್ಞಾಪಿಸಿಕೊಳ್ಳುವುದು.
- ಅಭ್ಯಂಜನ ಮಾಡಿಕೊಳ್ಳುವಾಗ, ಎಣ್ಣೆಯಲ್ಲಿ ಲಕ್ಷ್ಮೀಸನ್ನಿಧಾನವನ್ನು ಚಿಂತಿಸುವುದು. ಶ್ರೀನಿವಾಸನಿಗೆ ಲಕ್ಷ್ಮಿಯು ಅಭ್ಯಂಜನ ಮಾಡಿಸಿದುದನ್ನು ಹಾಗೆಯೇ ಶ್ರೀಕೃಷ್ಣನಿಗೆ ಯಶೋದೆಯು ಎರೆದದ್ದನ್ನೂ ಜ್ಞಾಪಿಸಿಕೊಳ್ಳುವುದು.
- ಸ್ನಾನ ಮಾಡುವಾಗ, ಮನೆಯಲ್ಲಾಗಲಿ, ನದಿಯಲ್ಲಾಗಲಿ, ಅಕ್ರೂರವರದ ಎಂದು ಅಕ್ರೂರರು ನದಿಯಲ್ಲಿ ಸ್ನಾನ ಮಾಡಿದಾಗ ಅವರಿಗೆ ಕೃಷ್ಣನು ವಿಶೇಷ ದರ್ಶನ ಕೊಟ್ಟದ್ದನ್ನು ಸ್ಮರಿಸಿಕೊಳ್ಳುವುದು.
- ಅಡಿಗೆ ಮಾಡುವಾಗ ನಳಮಹಾರಾಯನನ್ನೂ, ಭೀಮಸೇನದೇವರನ್ನೂ ಸ್ಮರಿಸುವುದು.
- ಊಟ ಬಡಿಸುವಾಗ, ಶ್ರೀಕೃಷ್ಣ-ಕುಚೇಲರು ಊಟ ಮಾಡುವಾಗ ರುಕ್ಮಿಣೀದೇವಿಯು ಬಡಿಸಿದುದನ್ನು ಸ್ಮರಿಸಿಕೊಳ್ಳುವುದು.
- ಊಟ ಮಾಡುವಾಗ ಶ್ರೀಕೃಷ್ಣ-ಕುಚೇಲರು ಊಟ ಮಾಡಿದುದನ್ನು ಸ್ಮರಿಸಿಕೊಳ್ಳುವುದು.
- ವನಭೋಜನ, ಧಾತ್ರಿಹವನ ಭೋಜನ ಮಾಡುವಾಗ, ಶ್ರೀಕೃಷ್ಣನು ಗೋಪಾಲಕರ ಜೊತೆಯಲ್ಲಿ ಬ್ರಾಹ್ಮಣಸ್ತ್ರೀಯರು ಕೊಟ್ಟ ಅನ್ನವನ್ನು ಭೋಜನ ಮಾಡಿದುದನ್ನು ಸ್ಮರಿಸಿಕೊಳ್ಳುವುದು.
- ಊಟದ ಎಲೆಯನ್ನು ಎತ್ತಿ ಎಂಜಲು ಗೋಮಯ ಮಾಡುವಾಗ, ಶ್ರೀಕೃಷ್ಣನು ರಾಜಸೂಯ ಯಾಗದಲ್ಲಿ ಬ್ರಾಹ್ಮಣರ ಭೋಜನಾನಂತರ ಎಂಜಲು ಎಲೆಯನ್ನು ಎತ್ತಿ ಶುದ್ಧಿ ಮಾಡಿದುದನ್ನು ಸ್ಮರಿಸುವುದು.
- ಕೋಡುಬಳೆ, ಚಕ್ಕುಲಿ, ಬುತ್ತಿಅನ್ನ ತಿನ್ನುವಾಗ, ಶ್ರೀಕೃಷ್ಣನು ಬಲರಾಮನಿಂದ ಸಹಿತನಾಗಿ ಗೋಕುಲದಲ್ಲಿ ಕೋಡುಬಳೆ, ಚಕ್ಕುಲಿ ಬುತ್ತಿ ಅನ್ನವನ್ನು ತಿಂದುದನ್ನು ಸ್ಮರಿಸಿಕೊಳ್ಳುವುದು. (ಹರಿವಂಶ ಪುರಾಣಕಥಾ)
- ತೋಟಗಳಲ್ಲಿ ಗಿಡಗಳಿಂದ ಹಣ್ಣುಗಳನ್ನು ಕಿತ್ತು ತಿನ್ನುವಾಗ, ಶ್ರೀಕೃಷ್ಣನು ಖರಾಸುರರನ್ನು ಸಂಹರಿಸಿ ತಾಳೆಫಲಗಳನ್ನು ಗೋಪಾಲಕರ ಸಹಿತನಾಗಿ ತಿಂದದ್ದನ್ನು ಸ್ಮರಿಸಿಕೊಳ್ಳುವುದು.
- ನೆಲವನ್ನು ತೋಡುವಾಗ ಈಶ್ವರದೇವ ಮತ್ತು ಶ್ರೀಮನ್ಮಧ್ವಾಚಾರ್ಯರನ್ನು ಸ್ಮರಿಸಿಕೊಳ್ಳುವುದು.

- ಗಿಡವನ್ನು ಕೀಳುವಾಗ, ಗಿಡವನ್ನು ನೆಡುವಾಗ, ಪಾರಿಜಾತಾಪಹರಣ ಪ್ರಸಂಗವನ್ನು ಸ್ಮರಿಸುವುದು.
- ಬೀಜವನ್ನು ಬಿತ್ತುವಾಗ, ಶ್ರೀಮದಾಚಾರ್ಯರು ಒಬ್ಬ ಶೂದ್ರರಾಜನ ನಿಮಿತ್ತ ಬೀಜದಿಂದ ಗಿಡ ಬೆಳೆಸಿ, ಹೂವು ಹಣ್ಣು ಬಿಡುವಂತೆ ಮಾಡಿದ ಪ್ರಸಂಗವನ್ನು ಸ್ಮರಿಸುವುದು.
- ವಿವಾಹವಾಗುವಾಗ ಶ್ರೀಕೃಷ್ಣ-ರುಕ್ಮಿಣೀ ವಿವಾಹ ಮತ್ತು ಸೀತಾರಾಮರ ವಿವಾಹ ಸ್ಮರಿಸಿಕೊಳ್ಳುವುದು.
- ಸಾಮೂಹಿಕ ವಿವಾಹ - ಶ್ರೀಕೃಷ್ಣ ಗೋಪಿಕಾಸ್ತ್ರೀಯರ ವಿವಾಹವನ್ನು ಸ್ಮರಿಸಿಕೊಳ್ಳುವುದು.
- ಸಾಮೂಹಿಕ ವಿಹಾರ - ೧೬ಸಾವಿರ ಗೋಪಿಕಾಸ್ತ್ರೀಯರು ಉತ್ಸವಸಂದರ್ಭಗಳಲ್ಲಿ ಶ್ರೀಕೃಷ್ಣ-ಗೋಪಿಕಾಸ್ತ್ರೀಯರ ರಾಸಕ್ರೀಡಾಮಹೋತ್ಸವವನ್ನು ಸ್ಮರಿಸಿಕೊಳ್ಳುವುದು.
- ಬೆಂಕಿಪ್ರಕರಣದಲ್ಲಿ - ಲಂಕಾದಹನ ಪ್ರಕರಣವನ್ನು ಸ್ಮರಿಸುವುದು. ಬೆಂಕಿ ಉಪಶಮನವಾದ ಮೇಲೆ ಶ್ರೀಕೃಷ್ಣನು ಕಾಳ್ಗಿಚ್ಚನ್ನು ನುಂಗಿದ್ದನ್ನು ಸ್ಮರಿಸಿಕೊಳ್ಳುವುದು.
- ದಾನ ಮಾಡುವಾಗ - ದಾನ ಕೊಡುವವರಲ್ಲಿ ಶ್ರೀರಾಮಚಂದ್ರನಿದ್ದು ಕೊಡುತ್ತಾನೆಂತಲೂ, ದಾನ ತೆಗೆದುಕೊಳ್ಳುವಾಗ ದಾನ ತೆಗೆದುಕೊಳ್ಳುವವರಲ್ಲಿ ಶ್ರೀವಾಮನರೂಪದಿಂದ ಸ್ವೀಕರಿಸುತ್ತಾನೆಂದು ಅನುಸಂಧಾನ ಮಾಡಿದರೆ ದಾನ ಕೊಟ್ಟವರಿಗೆ ಪಾಪ ಹೋಗುತ್ತದೆ. ದಾನ ತೆಗೆದುಕೊಂಡವರಿಗೆ ಪಾಪ ಲೇಪವಿಲ್ಲ.
- ಮನೆ ಕಟ್ಟುವಾಗ-ಶ್ರೀಕೃಷ್ಣನು ದ್ವಾರಕಾಪಟ್ಟಣವನ್ನು ನಿರ್ಮಾಣ ಮಾಡಿದ್ದನ್ನು ಸ್ಮರಿಸಿಕೊಳ್ಳುವುದು.
- ಖಾಯಿಲೆ ಬಿದ್ದು ಹಾಸಿಗೆ ಮೇಲೆ ಮಲಗಿರುವಾಗ ಭೀಷ್ಮಾಚಾರ್ಯರು ಶರತಲ್ಪದಲ್ಲಿ ಮಲಗಿದ್ದುದನ್ನು ಸ್ಮರಿಸಿಕೊಳ್ಳುವುದು. ಹಾಗೆಯೇ ಖಾಯಿಲೆಯವರ ಪಕ್ಕದಲ್ಲಿ ಜನಗಳು ಕುಳಿತುಕೊಂಡಿದ್ದರೆ, ಭೀಷ್ಮಾಚಾರ್ಯರಿಂದ ಧರ್ಮೋಪದೇಶವನ್ನು ಶ್ರವಣ ಮಾಡಲು ಬಂದ ಪಾಂಡವರು ಮತ್ತು ಶ್ರೀಕೃಷ್ಣನನ್ನು ಸ್ಮರಿಸಿಕೊಳ್ಳುವುದು.
- ಔಷಧಿ ತೆಗೆದುಕೊಳ್ಳುವಾಗ - ಶ್ರೀಧನ್ವಂತರೀರೂಪಿಯಾದ ಹರಿಯನ್ನು ಸ್ಮರಿಸಿಕೊಳ್ಳುವುದು.
- ನಿದ್ರೆ ಮಾಡುವುದಕ್ಕೆ ಮಲಗಿಕೊಂಡಾಗ - ಮುಚುಕುಂದವರದ ಎಂದು ಮುಕುಂದನನ್ನು ಸ್ಮರಿಸುವುದು ಹಾಗೆಯೇ ಸಮುದ್ರಶಾಯಿಯಾದ ಶ್ರೀಪದ್ಮನಾಭರೂಪಿಯಾದ ಹರಿಯನ್ನು ಸ್ಮರಿಸುವುದು.
- ಕುರುಡರನ್ನು ನೋಡಿದರೆ - ಧೃತರಾಷ್ಟ್ರನನ್ನು ಹಾಗೂ ದೀರ್ಘತಮ ಎಂಬ ಋಷಿಗಳನ್ನು ಸ್ಮರಿಸುವುದು.
- ಕುಂಟರನ್ನು ನೋಡಿದರೆ - ಅರುಣನನ್ನು ಸ್ಮರಿಸುವುದು.
- ಕೈಮುರುಕನನ್ನು ನೋಡಿದರೆ - ವೀರ ಅಭಿಮನ್ಯುವನ್ನು ಸ್ಮರಿಸುವುದು.
- ಕಿವಿ, ಮೂಗು ಕತ್ತರಿಸಿರುವವರನ್ನು ನೋಡಿದರೆ - ಶೂರ್ಪನಖಿಯ ಪ್ರಸಂಗವನ್ನು ಸ್ಮರಿಸುವುದು.
- ಹಲ್ಲಿಲ್ಲದವನನ್ನು ನೋಡಿದರೆ - ಪೂಷ್ಣ ಎಂಬ ಸೂರ್ಯನನ್ನು ಸ್ಮರಿಸಿಕೊಳ್ಳುವುದು.
- ಪರೀಕ್ಷೆಯಲ್ಲಿ ಬರೆಯುವಾಗ - ಗಣಪತಿ ಮಹಾಭಾರತ ಬರೆದಿದ್ದನ್ನು ಸ್ಮರಿಸಿಕೊಳ್ಳುವುದು ಹಾಗೂ ಹಯಗ್ರೀವ ದೇವರನ್ನು ಸ್ಮರಿಸುವುದು, ಕಾರ್ತವೀರ್ಯಾರ್ಜುನರನ್ನು ಸ್ಮರಿಸಿದರೆ ಮರತದ್ದೆಲ್ಲಾ ಜ್ಞಾಪಕಕ್ಕೆ ಬರುತ್ತದೆ.

- ಲೇಖನ, ಪ್ರಬಂಧ ಬರೆಯುವಾಗ - ವೇದವ್ಯಾಸದೇವರು ಗಣಪತಿಯ ಮೂಲಕ ಮಹಾಭಾರತವನ್ನು ಬರೆಸಿದ್ದನ್ನು ಸ್ಮರಿಸಿಕೊಳ್ಳುವುದು.

- ನದಿಯಲ್ಲಿ ಸ್ನಾನಕ್ಕಾಗಿ ಮುಳುಗು ಹಾಕುವಾಗ - ಅಕ್ರೂರವರದ ಎಂದು ಸ್ಮರಿಸುವುದು. ನದಿಯಲ್ಲಿ ಈಜುವಾಗ ಸಂಸಾರಸಾಗರದಿಂದ ಪರಮಾತ್ಮನು ದಾಟಿಸುತ್ತಾನೆಂದು ಸ್ಮರಿಸಿಕೊಳ್ಳುವುದು. ಒಂಟಿಯಾಗಿ ಕುದುರೆಯ ಮೇಲೆ ಅಥವಾ ಬೈಸಿಕಲ್ ಮೇಲೆ ಸವಾರಿ ಮಾಡುವಾಗ ಶ್ರೀನಿವಾಸದೇವರು ಬೇಟೆಗೆ ಹೊರಟಿದ್ದನ್ನು ಸ್ಮರಿಸಿಕೊಳ್ಳುವುದು.

- ಮನೆಯಿಂದ ಶಾಲೆಗೆ ಅಥವಾ ಕಛೇರಿಗೆ ಹೊರಡುವ ಮುಂಚೆ ಷರಾಯಿ, ಕೋಟು, ಬೂಟು, ಎಕ್ಕಡ ಧರಿಸುವಾಗ ಶ್ರೀನಿವಾಸದೇವರು ಬೇಟೆಗೆ ಹೊರಡುವುದಕ್ಕೆ ಮುಂಚೆ ಅಲಂಕರಿಸಿಕೊಂಡದ್ದನ್ನು ಸ್ಮರಿಸಿಕೊಂಡು, ಈ ಅಲಂಕಾರವು ದೇಹಾಂತರ್ಗತನಾದ ಹರಿ ನಿನಗೆ ಸಮರ್ಪಿತವಾಗಲಿ ಎಂದು ಮುಖವನ್ನು ಮತ್ತು ದೇಹದ ಅಲಂಕಾರವನ್ನು ನೋಡಿ ಸಂತೋಷಪಟ್ಟು ಅದನ್ನು ಹರಿಗೆ ಅರ್ಪಿಸುವುದು. ಇನ್ನೊಂದು ಪ್ರಸಂಗ ಏನೆಂದರೆ ಬೃಹನ್ನಳೆಯ ರೂಪದಲ್ಲಿ ಇದ್ದ ಅರ್ಜುನರಿಗೆ ಉತ್ತರನು ಕವಚಾದಿಗಳನ್ನು ಅಲಂಕರಿಸಿದ್ದನ್ನು ಉತ್ತರಗೋಗ್ರಹಣದ ಕಥೆಯನ್ನು ಸ್ಮರಿಸಿಕೊಳ್ಳುವುದು.

- ತಲೆಗೆ ಟೋಪಿ, ರುಮಾಲು, ಹ್ಯಾಟು, ಎನ್.ಸಿ.ಸಿ. ಕ್ಯಾಪು, ಎ.ಸಿ.ಸಿ. ಕ್ಯಾಪು, ಸ್ಕೌಟ್ ಪೇಟ, ಹೆಲ್‌ಮೆಟ್ ಮುಂತಾದ ತಲೆಯ ಉಡುಪನ್ನು ಧರಿಸುವಾಗ - ಆಕಾಶರಾಜನು ಶ್ರೀನಿವಾಸದೇವರಿಗೆ ಕೊಟ್ಟ ಕೋಟಿಸೂರ್ಯಪ್ರಕಾಶವಾದ ದಿವ್ಯ ರತ್ನಮಯವಾದ ಕಿರೀಟವನ್ನು ಸ್ವಾಮಿಯು ತಲೆಯಲ್ಲಿ ಧರಿಸಿಕೊಂಡುದನ್ನು ಸ್ಮರಿಸಿಕೊಳ್ಳುವುದು. ಇದರಿಂದ ಹೆಲ್ (ನರಕ) ಮೆಟ್ಟದೆ ತಿರುಪತಿ ಹಿಲ್ ಮೆಟ್ಟು (ಭೂವೈಕುಂಠ - ಸ್ವರ್ಗ) ಮೆಟ್ಟುತ್ತೇವೆ.

- ಎಕ್ಕಡ, ಬೂಡ್ಸು, ಮುಂತಾದ ಪಾದರಕ್ಷೆಗಳನ್ನು ಧರಿಸುವಾಗ ಶ್ರೀನಿವಾಸದೇವರಿಗೆ ಲಗ್ನ ಸಮಯದಲ್ಲಿ ಗಂಗಾದೇವಿಯು ಪಾದುಕೆಗಳನ್ನು ತಂದುಕೊಟ್ಟದ್ದನ್ನು ಸ್ವಾಮಿಯು ಅದನ್ನು ಕಾಲಿಗೆ ಹಾಕಿಕೊಂಡದ್ದನ್ನು ಶ್ರೀರಾಮದೇವರು ಭರತರಿಗೆ ಪಾದುಕೆ ಕೊಟ್ಟದ್ದನ್ನು ಸ್ಮರಿಸಿಕೊಳ್ಳುವುದು.

- ಶರೀರಕ್ಕೆ ಮಾಡಿಕೊಂಡ ಅಲಂಕಾರವನ್ನು ಕನ್ನಡಿಯಲ್ಲಿ ನೋಡಿಕೊಂಡು ದೇವರು ಕೊಟ್ಟ ಭಾಗ್ಯ ಎಂದು ಸಂತೋಷಪಟ್ಟುಕೊಂಡು, ಶ್ರೀನಿವಾಸದೇವರು ಬೇಟೆಗೆ ಹೊರಡುವ ಮುನ್ನ ತನ್ನ ಅಲಂಕಾರವನ್ನು ಕನ್ನಡಿಯಲ್ಲಿ ನೋಡಿಕೊಂಡದ್ದನ್ನು ಸ್ಮರಿಸುವುದು.

- ಅಗಸನ ಮನೆಯಿಂದ ಒಗೆದು ಇಸ್ತ್ರಿ ಮಾಡಿದ ಬಟ್ಟೆಯನ್ನು ತರುವಾಗ ಶ್ರೀಕೃಷ್ಣನು ಮಥುರೆಗೆ ಪ್ರವೇಶ ಮಾಡಿದಾಗ ಅಗಸನಿಂದ ಬಟ್ಟೆ ಸ್ವೀಕರಿಸಿದ ಪ್ರಸಂಗವನ್ನು ಸ್ಮರಿಸಿಕೊಳ್ಳುವುದು.

- ಎರಡು ಬೈಸಿಕಲ್ಲುಗಳ ಮೇಲೆ ಇಬ್ಬರು ಜೊತೆಗೂಡಿ ಬೀದಿಯಲ್ಲಿ ಸವಾರಿ ಹೊರಟಾಗ - ಶ್ರೀಕೃಷ್ಣ ಮತ್ತು ಪ್ರಸೇನರು ಕಾಡಿಗೆ ಬೇಟೆಗೆ ಹೋದದ್ದನ್ನು ಸ್ಮರಿಸಿಕೊಳ್ಳುವುದು.

- ಊರು ನೋಡುವುದಕ್ಕಾಗಿ ಬೀದಿಯಲ್ಲಿ ಹೊರಟಾಗ - ಶ್ರೀಕೃಷ್ಣ, ಬಲರಾಮರು ಮಥುರಾ ಪ್ರವೇಶ ಮಾಡಿದುದನ್ನು ಸ್ಮರಿಸಿಕೊಳ್ಳುವುದು.

- ಜಟಕಾ ಗಾಡಿಯಲ್ಲಿ ಅಥವಾ ಆಟೋರಿಕ್ಷಾದಲ್ಲಿ ಒಬ್ಬನೇ ಕೂತುಕೊಂಡು ಸಂಚಾರ ಮಾಡುವಾಗ, ಡ್ರೈವರ್‌ನಲ್ಲಿ ಶ್ರೀಕೃಷ್ಣನ ಸನ್ನಿಧಾನವನ್ನೂ, ತನ್ನಲ್ಲಿ ಅರ್ಜುನನ ಸನ್ನಿಧಾನವನ್ನೂ ವಾಹನದ ಮೇಲ್ಭಾಗದಲ್ಲಿ ಹನುಮದ್ಧ್ವಜದ ಸನ್ನಿಧಾನವನ್ನು ಸ್ಮರಿಸಿಕೊಳ್ಳುವುದು. ರಸ್ತೆಯಲ್ಲಿ ಕುರುಕ್ಷೇತ್ರವನ್ನು ಸ್ಮರಿಸಿಕೊಳ್ಳುವುದು. ಆಟೋರಿಕ್ಷಾ ಅಥವಾ ಗಾಡಿಯಲ್ಲಿ ಇಬ್ಬರು ಒಟ್ಟಿಗೇ ಸಂಚರಿಸಬೇಕಾದಾಗ - ಚಾಲಕನಲ್ಲಿ ಅಕ್ರೂರನ ಸನ್ನಿಧಾನವನ್ನೂ, ತಮ್ಮಲ್ಲಿ ಕೃಷ್ಣ-ಬಲರಾಮರನ್ನೂ, ಸಂಚರಿಸುವವರು

ದಂಪತಿಗಳಾಗಿದ್ದರೆ ಶ್ರೀಕೃಷ್ಣರುಕ್ಮಿಣಿಯರನ್ನೂ ಸ್ಮರಿಸಿಕೊಳ್ಳುವುದು. ಹಾಗೆಯೇ ವಾಹನದ ಮೇಲ್ಭಾಗದಲ್ಲಿ ಗರುಡಧ್ವಜನನ್ನು ಸ್ಮರಿಸಿಕೊಳ್ಳುವುದು.

- ಎತ್ತಿನಗಾಡಿಚಕ್ರ ನೋಡಿದಾಗ - ಶ್ರೀಕೃಷ್ಣನು ಶಕಟಾಸುರನನ್ನು ಸಂಹರಿಸಿದುದನ್ನು ಸ್ಮರಿಸಿಕೊಳ್ಳುವು.
- ಬಸ್ಸು, ಕಾರು, ರೈಲು, ವಿಮಾನ ಮುಂತಾದ ಭಾರೀ ವಾಹನಗಳಲ್ಲಿ ಹೆಚ್ಚಿಗೆ ಜನಸಮೂಹದೊಡನೆ ಸಂಚರಿಸುವಾಗ - ಶ್ರೀರಾಮಚಂದ್ರದೇವರು ರಾವಣಾದಿಗಳನ್ನು ಕೊಂದು ಪುಷ್ಪಕ ವಿಮಾನದಲ್ಲಿತಮ್ಮ ಸೇವಕರಾದ ಸಕಲ ಕಪಿ, ಕರಡಿಗಳ ಸಹಿತವಾಗಿ ಅಯೋಧ್ಯಾಪಟ್ಟಣಕ್ಕೆ ಬಂದು ಸದಾ ಸುಖಿಯಾದ ಶ್ರೀರಾಮದೇವರು ಸಜ್ಜನರಿಗೆ ಸಂತೋಷವನ್ನು ಕೊಡುವುದಕ್ಕೋಸ್ಕರ ಪಟ್ಟಾಭಿಷಿಕ್ತರಾದನೂಣದನ್ನು ಸ್ಮರಿಸಿಕೊಳ್ಳುವುದು.
- ಸಂಚಾರಮಾರ್ಗ ಮಧ್ಯದಲ್ಲಿ ವಾಹನಗಳು ನಿಂತು ಸ್ವಲ್ಪ ಹೊತ್ತು ಇರಬೇಕಾದ ಪ್ರಸಂಗ ಬಂದಾಗ - ಅಕ್ರೂರರು ಶ್ರೀಕೃಷ್ಣಬಲರಾಮರನ್ನು ಗೋಕುಲದಿಂದ ಮಧುರೆಗೆ ಕರೆದುಕೊಂಡು ಬರುವಾಗ ಮಧ್ಯಾಹ್ನದಲ್ಲಿ ಸ್ನಾನಕ್ಕಾಗಿ ವಾಹನವನ್ನು ನಿಲ್ಲಿಸಿ ಅಕ್ರೂರರು ಮಧ್ಯಾಹ್ನದ ಸ್ನಾನಕ್ಕಾಗಿ ಯಮುನಾ ನದಿಗೆ ತೆರಳಿದರು. ಇದನ್ನು ಸ್ಮರಿಸಿಕೊಳ್ಳುವುದು.
- ಸಣ್ಣ ತುಂತುರು ಮಳೆ ಬರುವಾಗ - ಸಮುದ್ರಮಥನ ದಲ್ಲಿ ಪ್ರಾರಂಭದಲ್ಲಿ ಹಾವಿನ ಬಾಯಿಂದ ಬಂದ ವಿಷಜ್ವಾಲೆಯ ಪ್ರಭಾವದಿಂದ ರಾಕ್ಷಸರು ಮೂರ್ಛೆ ಹೋದರು. ಆ ಕಾಲದಲ್ಲಿ ಪರಮಾತ್ಮನು ತನ್ನ ಕರುಣಾಮಯವಾದ ದೃಷ್ಟಿನೋಟದಿಂದ ಚೈತನ್ಯ ಬರುವಂತಹ ತುಂತುರು ಮಳೆಯನ್ನು ಕರೆದನು. ಇದರಿಂದ ರಾಕ್ಷಸರು ಎಚ್ಚರಗೊಂಡು ಚೈತನ್ಯವನ್ನು ಹೊಂದಿದರು. ಇದನ್ನು ಸ್ಮರಿಸಿಕೊಳ್ಳುವುದು.
- ಭಾರೀ ಮಳೆ ಬರುವಾಗ - ಇಂದ್ರದೇವರು ಗೋಕುಲದಲ್ಲಿ ಭಾರೀ ಮಳೆಯನ್ನು ಸುರಿಸಿದಾಗ ಶ್ರೀಕೃಷ್ಣನು ಗೋವರ್ಧನ ಪರ್ವತವನ್ನು ಎತ್ತಿ ಗೋಪಾಲಕರನ್ನೂ ಗೋವುಗಳನ್ನೂ ರಕ್ಷಣೆ ಮಾಡಿದನು. ಇದನ್ನು ಸ್ಮರಿಸಿಕೊಳ್ಳುವುದು.
- ಮಳೆಯ ನೀರು ಬೀದಿಯಲ್ಲಿ ಹರಿಯುತ್ತಿರುವಾಗ - ಶ್ರೀಕೃಷ್ಣಪರಮಾತ್ಮನು ವಿದುರನ ಮನೆಯಲ್ಲಿ ಒಂದು ಉದ್ಧರಣೆ ಹಾಲನ್ನು ಪ್ರಾಶನ ಮಾಡಿ, ದುರ್ಯೋಧನನ ಮನೆಯ ಮುಂದೆ ಕೋಡಿ ಹರಿಸಿದ್ದನ್ನು ಸ್ಮರಿಸಿಕೊಳ್ಳುವುದು.
- ಮಳೆಯಲ್ಲಿ ನೆನೆದುಕೊಂಡು ಬರುವ ಪ್ರಸಂಗ ಬಂದಾಗ - ಅವಭೃತ ಸ್ನಾನವೆಂದು ಅನುಸಂಧಾನ ಮಾಡುವುದು. ಇದರ ಜೊತೆಗೆ ಕೆಳಕಂಡಂತೆ ಚಿಂತಿಸುವುದು, ಮೋಡದಲ್ಲಿ ನಾರಾಯಣ, ಗರ್ಭೋದಕದಲ್ಲಿ ಮೋಡದ ನೀರಿನಲ್ಲಿ ವಾಸುದೇವ, ಮಳೆಯ ಹನಿಗಳಲ್ಲಿ ಅನಿರುದ್ಧ, ಸಿಡಿಲು-ಗುಡುಗುಗಳಲ್ಲಿ ಸಂಕರ್ಷಣ, ಮಿಂಚಿನಲ್ಲಿ ಪ್ರದ್ಯುಮ್ನ - ಪರಮಾತ್ಮನ ಈ ರೂಪಗಳನ್ನು ಚಿಂತಿಸಿ ಆ ಯೋಗವನ್ನು ಹರಿಗೆ ಅರ್ಪಿಸಿ ಸಂತೋಷಪಡುವುದು. ಮಳೆಯಲ್ಲಿ ನೆನೆದು ಬಟ್ಟೆ ಒದ್ದೆ ಆಗುವುದಂತೂ ತಪ್ಪುವ ಹಾಗಿಲ್ಲ. ಇದಕ್ಕೋಸ್ಕರ ಮಳೆಯನ್ನು ಬೈದರೆ ಪರಮಾತ್ಮನನ್ನು ಬೈದಂತೆಯೇ. ಬೈದು ಇಲ್ಲದ ದುಃಖ ಹೊಂದುವುದಕ್ಕಿಂತ ಪರಮಾತ್ಮನ ಇಚ್ಛೆಯಿಂದ ಈ ಕಾರ್ಯ ನಮ್ಮ ಕರ್ಮಾನುಸಾರವಾಗಿ ಆಯಿತು ಎಂದು ತಿಳಿದುಕೊಂಡು ಗೊಣಗದೇ ಸಂತೋಷದಿಂದ ಅನುಭವಿಸುವುದೇ ತಪಸ್ಸು ಮತ್ತು ಸಾಧನೆ.
- ಬಿರುಗಾಳಿ, ಸುಂಟರಗಾಳಿ ಬಂದಾಗ, ಎಲೆಗಳು ಆಕಾಶಕ್ಕೆ ಹಾರಿಹೋದಾಗ, ಶ್ರೀಕೃಷ್ಣನು ತೃಣಾವರ್ತನನ್ನು ಸಂಹರಿಸಿದುದನ್ನು ಸ್ಮರಿಸಿಕೊಳ್ಳುವುದು.

- ಜಗಳ, ಹೊಡೆದಾಟ, ಬಡಿದಾಟ, ಗದ್ದಲ, ಗಲಾಟೆ, ಭಯೋತ್ಪಾದಕ ಸನ್ನಿವೇಶಗಳು ಬಂದಾಗ - ಶ್ರೀರಾಮಚಂದ್ರದೇವರು ಯುದ್ಧದಲ್ಲಿ ರಾವಣನನ್ನು ಸಂಹರಿಸಿ ಜಗತ್ತಿಗೆ ಶಾಂತಿಯನ್ನು ಕೊಟ್ಟಿದ್ದನ್ನೂ ಸ್ಮರಿಸಿಕೊಳ್ಳುವುದು. ಇದರಿಂದ ನಮ್ಮ ಆಪತ್ತುಗಳು ಪರಿಹಾರವಾಗಿ ನೆಮ್ಮದಿ ಉಂಟಾಗುತ್ತದೆ.

- ಧರ್ಮ, ಅಧರ್ಮಗಳ ನಡುವೆ ಜಗಳ ವಾಗ್ವಾದಗಳು ಉಂಟಾದಾಗ ಶ್ರೀಕೃಷ್ಣಾರ್ಜುನರು ರಥಸ್ಥರಾಗಿ ಕುರು-ಪಾಂಡವರ ಸೈನ್ಯಗಳ ಮಧ್ಯೆ ನಿಂತುಕೊಂಡು, ಆ ಕಾಲದಲ್ಲಿ ಶ್ರೀಹರಿಯು ಧ್ವಜಸ್ಥರಾದ ಹನುಮಂತದೇವರ ಸಮ್ಮುಖದಲ್ಲಿ ಅರ್ಜುನರಿಗೆ ಗೀತೋಪದೇಶವನ್ನು ಮಾಡಿದ ಸನ್ನಿವೇಶವನ್ನು ಸ್ಮರಿಸಿಕೊಳ್ಳುವುದು. ಇದರಿಂದ ಪಾರ್ಥರನ್ನು ಮುಖ್ಯಪ್ರಾಣದೇವರನ್ನು ಶ್ರೀಹರಿಯನ್ನು ಸ್ಮರಿಸಿಕೊಂಡಂತಾಯಿತು. ಇದರಿಂದ ನಮ್ಮ ಅನಿಷ್ಟಗಳು ತೊಲಗಿ ಇಷ್ಟಪ್ರಾಪ್ತಿಯಾಗುತ್ತದೆ.

- ರಾಯಭಾರ ಕೆಲಸ ಮಾಡುವ ಪ್ರಸಂಗ ಬಂದಾಗ - ಶ್ರೀಕೃಷ್ಣ ಸಂಧಾನವನ್ನು ಸ್ಮರಿಸಿಕೊಳ್ಳುವುದು.

- ಸುದ್ದಿಯನ್ನು ಇನ್ನೊಬ್ಬರಿಗೆ ತಿಳಿಸಲು ಹೋಗಬೇಕಾದಾಗ - ಶ್ರೀಹನುಮಂತದೇವರು ಸೀತಾನ್ವೇಷಣಕ್ಕಾಗಿ ಲಂಕಾಪಟ್ಟಣಕ್ಕೆ ಹೋದುದನ್ನು ಸ್ಮರಿಸಿಕೊಳ್ಳುವುದು.

- ಕಳೆದುಕೊಂಡ ವಸ್ತುಗಳನ್ನು ಹುಡುಕಲು ಪ್ರಯತ್ನಿಸುವಾಗ, ಕಾರ್ತವೀರ್ಯಾರ್ಜುನರನ್ನು ಹಾಗೂ ಪರಶುರಾಮದೇವರನ್ನು ಸ್ಮರಿಸಿಕೊಳ್ಳುವುದು. ಇದರ ಜೊತೆಗೆ ಶ್ರೀಹನುಮಂತದೇವರು ಸೀತೆಯನ್ನು ಹುಡುಕಿದ ಪ್ರಸಂಗವನ್ನು ಮತ್ತು ಶ್ರೀಕೃಷ್ಣ ಶ್ಯಮಂತಕಮಣಿಯನ್ನು ಹುಡುಕಿದ ಪ್ರಸಂಗವನ್ನು ಸ್ಮರಿಸಿಕೊಳ್ಳುವುದು.

- ಏಟುಗಳು ಬಿದ್ದು ಮೈಮೇಲೆ ಗಾಯ, ರಕ್ತದ ಸುರಿತ, ಮುಂತಾದ ಪ್ರಸಂಗ ಒದಗಿದಾಗ - ಶ್ರೀನಿವಾಸದೇವರು ಗೋಪಾಲಕನಿಂದ ಕೊಡಲಿಯ ಪೆಟ್ಟು ತಿಂದವನಂತೆ, ಗಾಯಗೊಂಡವನಂತೆ, ರಕ್ತ ಸುರಿಸಿಕೊಂಡವನಂತೆ, ಅಸುರಮೋಹಕ ವ್ಯಾಪಾರವನ್ನು ಮಾಡಿದುದನ್ನು ಸ್ಮರಿಸಿಕೊಳ್ಳುವುದು. ಪರಮಾತ್ಮನು ದುಃಖರಹಿತ ಸುಖಪೂರ್ಣನಾದುದರಿಂದ ನಿಜವಾಗಿಯೂ ಏಟುತಿಂದು ದುಃಖಪಟ್ಟವನೆಂದು ತಿಳಿದುಕೊಳ್ಳದೆ ಅಯೋಗ್ಯರಿಗೆ ಅನ್ಯಥಾಜ್ಞಾನದಾರ್ಢ್ಯವಾಗುವುದಕ್ಕೋಸ್ಕರಹೀಗೆ ಪ್ರದರ್ಶನ ಮಾಡಿದನೆಂದು ಚಿಂತಿಸುವುದು.

- ಕಾಲು ತೊಳೆಯುವಾಗ - ಶ್ರೀಮಧ್ವಾಚಾರ್ಯರು ಸ್ನಾನ ಮಾಡಿಕೊಂಡು ಬಂದು ದೇವರ ಮನೆಗೆ ಪ್ರವೇಶ ಮಾಡುವಾಗ ಕಾಲು ತೊಳೆದುಕೊಂಡದ್ದನ್ನು ಸ್ಮರಿಸಿಕೊಳ್ಳುವುದು.

- ಅವಮಾನವಾಗುವ ಪ್ರಸಂಗ ಬಂದಾಗ - ದ್ರೌಪದಿ ಅಭಿಮಾನವನ್ನು ಶ್ರೀಕೃಷ್ಣನು ಕಾಯ್ದುದನ್ನು ಸ್ಮರಿಸಿಕೊಳ್ಳುವುದು.

- ನಿದ್ರೆಯಿಂದ ಎದ್ದಕೂಡಲೆ ಪ್ರಾಜ್ಞನಾಮಕ ಪರಮಾತ್ಮನನ್ನು ಸ್ಮರಿಸಿಕೊಳ್ಳುವುದು.

- ಕನಸಿನಿಂದ ಎಚ್ಚರವಾದ ಕೂಡಲೇ ತೈಜಸರೂಪಿಯಾದ ಹರಿಯನ್ನು ಸ್ಮರಿಸುವುದು.

- ಮಿಥ್ಯಾಪವಾದ ಬಂದರೆ - ಶ್ಯಮಂತಕಮಣಿಯ ಪ್ರಸಂಗ ಸ್ಮರಿಸಿಕೊಳ್ಳುವುದು.

- ಪಾಠ ಪ್ರವಚನ ಮಾಡುವಾಗ ಶ್ರೀವೇದವ್ಯಾಸದೇವರು ಹಾಗೂ ಶ್ರೀಮಧ್ವಾಚಾರ್ಯರನ್ನು ಸ್ಮರಿಸಿಕೊಳ್ಳುವುದು.

- ಪುರಾಣಶ್ರವಣ ಮಾಡುವಾಗ - ಶ್ರೀ ಶುಕ-ಪರೀಕ್ಷಿತ್‌ರಾಜರನ್ನು, ಸೂತ-ಶೌನಕಾದಿಗಳನ್ನು, ವಿದುರ-ಮೈತ್ರೇಯರನ್ನು, ಶತಾನಂದ-ಜನಮೇಜಯರಾಯರನ್ನು ಸ್ಮರಿಸಿಕೊಳ್ಳುವುದು.

- ಭಕ್ತಿಯಿಂದ ಭಜನೆ ಮಾಡುವಾಗ - ಪ್ರಹ್ಲಾದರಾಜರನ್ನು ಸ್ಮರಿಸುವುದು.
- ಜಪ-ತಪ ಮಾಡುವಾಗ, ಧ್ಯಾನ ಮಾಡುವಾಗ ಧ್ರುವವರದ ಎಂದು ಸ್ಮರಿಸುವುದು.
- ಕೀರ್ತನೆ ಮಾಡುವಾಗ - ಶ್ರೀನಾರದವರದ ಎಂದು ಸ್ಮರಿಸುವುದು.
- ಏಕಾದಶಿ ದಿವಸ ರುಕ್ಮಾಂಗದರಾಯನನ್ನು, ದ್ವಾದಶೀ ದಿವಸ ಅಂಬರೀಶರಾಜನನ್ನು ಸ್ಮರಿಸುವುದು.
- ಆಟವಾಡುವಾಗ - ಶ್ರೀಕೃಷ್ಣನು ಗೋಪಾಲಕರ ಜೊತೆಯಲ್ಲಿ ಆಟ ಆಡಿದುದನ್ನು ಸ್ಮರಿಸಿಕೊಳ್ಳುವುದು.
- ಆಟದಿಂದ ಮನೆಗೆ ಬರುವಾಗ, ಶ್ರೀಕೃಷ್ಣ ಸಾಯಂಕಾಲ ಸೂರ್ಯಾಸ್ತಸಮಯದಲ್ಲಿ ಗೋಪಾಲಕರ ಜೊತೆಯಲ್ಲಿ ಗೋವುಗಳ ಸಮೂಹದೊಡನೆ ಗೋಕುಲಕ್ಕೆ ಬಂದ ಸೊಗಸನ್ನು ಸ್ಮರಿಸಿ ಹಿಗ್ಗುವುದು.
- ಯಕ್ಷಿಣಿ ನೋಡುವಾಗ - ಶ್ರೀಮದಾಚಾರ್ಯರು ಮಂತ್ರೋಚ್ಚಾರಣೆ ಮಾಡುತ್ತ ಬೀಜದಿಂದ ಗಿಡ, ಹೂವು, ಕಾಯಿ, ಹಣ್ಣು ಸೃಷ್ಟಿ ಮಾಡಿದ್ದನ್ನು ಸ್ಮರಿಸಿಕೊಳ್ಳುವುದು. ಯಕ್ಷಿಣಿ ದೃಷ್ಯ ಮಿಥ್ಯ, ಆಚಾರ್ಯರ ಸೃಷ್ಟಿ ಸತ್ಯ.
- ನರ್ತನ ನೋಡಿದಾಗ - ಮೋಹಿನೀ, ಭಸ್ಮಾಸುರರ ಕಥೆಯನ್ನು ಸ್ಮರಿಸಿಕೊಳ್ಳುವುದು.
- ಸುಂದರ ಸ್ತ್ರೀಯನ್ನು ನೋಡಿದಾಗ, ಪರಮಾತ್ಮನ ಮೋಹಿನೀರೂಪವನ್ನು ಸ್ಮರಿಸಿಕೊಳ್ಳುವುದು. ಇದರಿಂದ ಸ್ತ್ರೀಯರನ್ನು ಕೆಟ್ಟದೃಷ್ಟಿಯಿಂದ ನೋಡಿದ ದೋಷ ಪರಿಹಾರವಾಗುವುದು.
- ಸುಂದರವಾದ ಗೋವನ್ನು ನೋಡಿದಾಗ - ಗೋಪಾಲಕೃಷ್ಣನನ್ನು ಸ್ಮರಿಸುವುದು.
- ಮುದ್ದಾದಮಕ್ಕಳನ್ನು ಮುದ್ದಾಡಿದಾಗ, ಯಶೋದೆಯ ಸಹಿತನಾದ ಶ್ರೀಬಾಲಕೃಷ್ಣನನ್ನು ಸ್ಮರಿಸುವುದು.
- ಮನೆಬಿಟ್ಟು ಆಚೆಗೆ ಹೋಗುವಾಗ - ಅಂತರ್ಬಹಿವ್ಯಾಪ್ತನಾದ ಶ್ರೀಹರಿಯನ್ನು ಸ್ಮರಿಸುವುದು. ಇದರಿಂದ ಮನೆಯ ಒಳಗೆ ಸಂಭವಿಸಬಹುದಾದ ಆಪತ್ತುಗಳು ಮತ್ತು ಮನೆಯ ಹೊರಗೆ ಒದಗಬಹುದಾದ ಆಪತ್ತುಗಳು ಪರಿಹಾರವಾಗುತ್ತವೆ.
- ಕಟ್ಟಿಗೆಯನ್ನು ಸೀಳುವಾಗ, ಶ್ರೀಭೀಮಸೇನದೇವರು ಜರಾಸಂಧನನ್ನು ಸೀಳಿಹಾಕಿದ ಪ್ರಸಂಗ ಸ್ಮರಿಸುವುದು.
- ಬಚ್ಚಲುಮನೆಯ ಒಲೆಗೆ ಬೆಂಕಿ ಇಡುವಾಗ ಶ್ರೀಭೀಮಸೇನದೇವರು ಅರಗಿನ ಮನೆಗೆ ಬೆಂಕಿ ಹಚ್ಚಿದುದನ್ನು, ಅರ್ಜುನನು ಖಾಂಡವವನವನ್ನು ದಹಿಸಿದುದನ್ನು, ಹನುಮಂತದೇವರು ಲಂಕಾಪಟ್ಟಣವನ್ನು ಸುಟ್ಟುದನ್ನು ಸ್ಮರಿಸಿಕೊಳ್ಳುವುದು.
- ನಂದಾದೀಪ ಹಚ್ಚುವಾಗ - ಮಧ್ಯತಾಳಮಠವನ್ನು ಸ್ಮರಿಸುವುದು (ತೀರ್ಥಪ್ರಬಂಧ). ಮಧ್ಯತಾಳಮಠ ಎಂಬುದು ಒಂದು ಬಂಗಾರದ ದೀಪಸ್ತಂಭ. ಶ್ರೀಮಧ್ವಾಚಾರ್ಯರ ಹೃದಯ ಎಂಬುವುದೇ ಬತ್ತಿ. ವ್ಯಾಸ ಎಂಬುವುದೇ ದೀಪ. ಈ ದೀಪವು ನಮ್ಮ ಅಜ್ಞಾನವನ್ನು ನಾಶಮಾಡುತ್ತದೆ.
- ಅಂಚೆಯವನು ಮನೆಗೆ ಕಾಗದವನ್ನು ತಂದುಕೊಡುವಾಗ, ರುಕ್ಮಿಣೀ ದೇವಿಯಿಂದ ಕಳುಹಿಸಲ್ಪಟ್ಟ ಬ್ರಾಹ್ಮಣರು ಶ್ರೀಹರಿಗೆ ಪತ್ರವನ್ನು ತಲುಪಿಸಿದುದನ್ನು ಜ್ಞಾಪಿಸಿಕೊಳ್ಳುವುದು.
- ಹೀಗೆ ನಿಮ್ಮ ಮನಸ್ಸಿಗೆ ಹಿತವಾಗುವಂತಹ ನಿತ್ಯಜೀವನದ ನಡುವೆ ಸಂದರ್ಭಕ್ಕೆ ಹೊಂದುವ ಭಗವಂತನ ಮತ್ತು ಭಾಗವತರ ಕಥೆಗಳನ್ನು ಸ್ಮರಿಸಿಕೊಳ್ಳುವ ಅಭ್ಯಾಸ ಮಾಡಿಕೊಳ್ಳಬೇಕು.

# ಕಾಲದಿಂದ ಹರಿಸ್ಮರಣೆ ಮಾಡುವ ವಿಚಾರ

ಅರುಣೋದಯದಲ್ಲಿ **ಬೆಳಿಗ್ಗೆ ೪.೩೦ ಗಂಟೆಗೆ** - ಶ್ರೀಮಧ್ವಾಚಾರ್ಯರು ಶೀತಲ ಗಂಗಾದಲ್ಲಿ ಸ್ನಾನ ಮಾಡಿದರು, ಶ್ರೀಮಧ್ವಸರೋವರದಲ್ಲಿ ಸ್ನಾನ ಮಾಡಿದರು ಎಂದು ಸ್ಮರಿಸಿಕೊಂಡರೆ ನಾವು ಅವರ ಜೊತೆಯಲ್ಲಿ ಸ್ನಾನ ಮಾಡಿದಂತಾಯಿತು. (ಇದರಂತೆ ಮುಂದಿನ ಎಲ್ಲಾ ಪ್ರಸಂಗಕ್ಕೂ ತಿಳಿದುಕೊಳ್ಳುವುದು).

| | |
|---|---|
| ಬೆಳಿಗ್ಗೆ ೭ ಗಂಟೆಗೆ : | ಶ್ರೀಮಧ್ವಾಚಾರ್ಯರು ಪಾಠಪ್ರವಚನ ಮಾಡುತ್ತಿದ್ದರು ಎಂದುಸ್ಮರಣೆ. |
| ಬೆಳಿಗ್ಗೆ ೯ ಗಂಟೆಗೆ : | ಸ್ತ್ರೀ ಪ್ರಸಂಗ, ಶ್ರೀಮದ್ರಾಮಾಯಣ ಎಂದು ಹೇಳಿಕೊಳ್ಳಿ ಇದರಿಂದ ರಾಮಾಯಣ ಸ್ಮರಣೆ ಬರುತ್ತದೆ. |
| ಮಧ್ಯಾಹ್ನ ೧೨ ಗಂಟೆಗೆ | ಶ್ರೀಮಧ್ವಾಚಾರ್ಯರು ದೇವರಪೂಜೆ ಮಾಡಿ ಭೋಜನ ಮಾಡಿದರು ಎಂದು ಸ್ಮರಣೆ |
| ಮಧ್ಯಾಹ್ನ ೨ ಗಂಟೆಗೆ | ಶ್ರೀಮಧ್ವಾಚಾರ್ಯರು ಭೋಜನವಾದ ಮೇಲೆ ಮಂಟಪದಲ್ಲಿ ರತ್ನ-ಕಂಬಳಿಯ ಮೇಲೆ ಕುಳಿತುಕೊಂಡು ಅನೇಕ ಸಜ್ಜನರಿಗೆ ಭಗವಂತನ ವಿಚಾರಗಳನ್ನು ಹೇಳಿ ಸಂತೋಷಪಡಿಸುತ್ತಿದ್ದರು ಎಂದು ಸ್ಮರಣೆ. |
| ಮಧ್ಯಾಹ್ನ ೩ ಗಂಟೆಗೆ | ದ್ಯೂತ ಪ್ರಸಂಗ, ಶ್ರೀಮನ್‌ಮಹಾಭಾರತ ಎಂದು ಹೇಳಿಕೊಳ್ಳಿ ಇದರಿಂದ ಮಹಾಭಾರತದ ಕತೆಗಳು ಸ್ಮರಣೆ ಬರುತ್ತದೆ. |
| ಸಂಜೆ ೫ ಗಂಟೆಗೆ | ಶ್ರೀನಿವಾಸಕಲ್ಯಾಣ ಎಂದು ಹೇಳಿಕೊಳ್ಳಿ ಇದರಿಂದ ಆ ಕಥೆಯೆಲ್ಲಾ ಸ್ಮರಣೆಗೆ ಬರುತ್ತದೆ. |
| ಸಂಜೆ ೬ ಗಂಟೆಗೆ | ಶ್ರೀಕೃಷ್ಣಪರಮಾತ್ಮ, ಬಲರಾಮ ಗೋಪಾಲಕರಿಂದ ಕೂಡಿ ಗೋವುಗಳನ್ನು ಮೇಯಿಸಿಕೊಂಡು ಗೋಕುಲಕ್ಕೆ ವಾಪಸ್ಸು ಬರುವ ಸಂಭ್ರಮ. ಇದನ್ನು ಸ್ಮರಿಸಿಕೊಂಡರೆ ನಾವು ಅವರ ಜೊತೆಯಲ್ಲಿ ಇದ್ದಂತಾಗುತ್ತದೆ. |
| ಸಂಜೆ ೬.೩೦ ಗಂಟೆಗೆ | ಸೂರ್ಯಾಸ್ತಮಾನ ಸಮಯದಲ್ಲಿ ಶ್ರೀನರಸಿಂಹದೇವರು ಹಿರಣ್ಯಕಶಿಪುವನ್ನು ಸಂಹರಿಸಿ ಶ್ರೀಪ್ರಹ್ಲಾದರಾಜರಿಗೆ ಅನುಗ್ರಹಿಸಿದರು ಎಂದು ಸ್ಮರಣೆ. |
| ರಾತ್ರಿ ೭ ಗಂಟೆಗೆ | ಚೋರಪ್ರಸಂಗ - ಶ್ರೀಮದ್‌ಭಾಗವತ ಎಂದು ಹೇಳಿಕೊಳ್ಳಿ ಇದರಿಂದ ಭಾಗವತದ ಕತೆಗಳು ಸ್ಮರಣೆಗೆ ಬರುತ್ತದೆ. |
| ರಾತ್ರಿ ೯ ಗಂಟೆಗೆ | ಶ್ರೀಭೀಮಸೇನದೇವರು ಕೀಚಕನನ್ನು ಸಂಹಾರ ಮಾಡಿದರು ಎಂದು ಸ್ಮರಿಸಿಕೊಳ್ಳಿ ಇದರಿಂದ ನಮ್ಮಲ್ಲಿದ್ದ ಅನೇಕ ಕೀಚಕರುಗಳು (ಕೆಟ್ಟಗುಣಗಳು) ಸಂಹಾರವಾಗುತ್ತದೆ. |
| ರಾತ್ರಿ ೧೦ ಗಂಟೆಗೆ | ಲಯಚಿಂತನೆ ಮಾಡಿ ಹಾಸಿಗೆಗೆ ಪ್ರವೇಶ. |

## ಹರಿಕಥಾಮೃತಸಾರದಿಂದ ಅನುಸಂಧಾನದ ಅಭ್ಯಾಸ

ನಮ್ಮ ಹೃದಯದಲ್ಲಿ ಅಷ್ಟ ದಳ ಕಮಲದಲ್ಲಿ ದೇವರು ಸಂಚಾರ ಮಾಡಿದಾಗ ಯಾವ ಯಾವ ಭಾವನೆ ಹುಟ್ಟುತ್ತದೆ ಎಂಬುದನ್ನು ತಿಳಿದುಕೊಂಡು ಅಭ್ಯಾಸ ಮಾಡಿ ಆಯಾ ಕಾಲದಲ್ಲಿ ಯೋಚನೆ ಮಾಡುವುದು?

| **ದಿಕ್ಕು** | **ಭಾವನೆ** |
|---|---|
| ಇಂದ್ರ - ಪೂರ್ವ | ಸತ್ಪುಣ್ಯ ಮಾರ್ಗದಲ್ಲಿ ಬುದ್ಧಿ |
| ಅಗ್ನಿ - ಆಗ್ನೇಯ | ಹಸಿವು, ತೃಷೆ, ನಿದ್ರೆ ಆಲಸ್ಯ |
| ಯಮ - ದಕ್ಷಿಣ | ಕೋಪ ರೌದ್ರಾವೇಷದ ಬುದ್ಧಿ |
| ನಿಋತಿ - ನೈರುತ್ಯ | ಪಾಪಕಾರ್ಯದ ಬುದ್ಧಿ |
| ವರುಣ - ಪಶ್ಚಿಮ | ಹಾಸ್ಯ ವಿನೋದ ಮಾಡುವ ಬುದ್ಧಿ |
| ವಾಯು - ವಾಯುವ್ಯ | ಗಮನಾಗಮನ ಸಂಚಾರದ ಬುದ್ಧಿ |
| ಕುಬೇರ - ಉತ್ತರ | ಧರ್ಮ ಮಾಡುವ ಬುದ್ಧಿ |
| ರುದ್ರ - ಈಶಾನ್ಯ | ದಾನ, ಗೋದಾನ, ಭೂದಾನ, ಕನ್ಯಾದಾನ ಮಾಡುವ ಬುದ್ಧಿ |

ಈ ಕೆಳಗಿನ ಮಂತ್ರವನ್ನು ಕಂಠಪಾಠ ಮಾಡಿ, ಪಂಡಿತರು, ಪಾಮರರು, ಆಬಾಲವೃದ್ಧರು, ಸ್ತ್ರೀಯರಾದಿಯಾಗಿ ಸಕಲ ಸಾತ್ವಿಕರು ಅನುಸಂಧಾನ ಮಾಡಿ, ಅನುಷ್ಠಾನ ಮಾಡಬೇಕು.

| ಕಂಠಪಾಠ ಮಾತ್ರ | | ವಿಚಾರ ತಿಳಿದುಕೊಳ್ಳುವುದು (ಕಂಠಪಾಠ ಬೇಡ) |
|---|---|---|
| ತತ್ರ ತತ್ರ ಸ್ಥಿತೋ ವಿಷ್ಣುಃ | = | ಅಲ್ಲಲ್ಲಿ ಇರುವ ವಿಷ್ಣುವು |
| ತತ್ತಚ್ಛಕ್ತಿ ಪ್ರಭೋದಯನ್ | = | ಅದರದರ ಶಕ್ತಿಯನ್ನು ಪ್ರಚೋದಿಸುತ್ತಾ |
| ಏಕಏವಮಹಾಶಕ್ತಿಃ | = | ಒಬ್ಬನೇ ಸರ್ವಶಕ್ತನಾದ ಪರಮಾತ್ಮನು |
| ಕುರುತೇ ಸರ್ವಮಂಜಸಾ | = | ಎಲ್ಲವನ್ನೂ ತಾನೇ ಸರಿಯಾಗಿ ಮಾಡುತ್ತಾನೆ. |

ಸರ್ವತ್ರ ವ್ಯಾಪ್ತನಾದ ಶ್ರೀಹರಿಯು ಸಮಸ್ತ ಜಡಚೇತನಗಳಲ್ಲಿ ಹೇಗೆ ಇರುತ್ತಾನೆ ಎಂದರೆ ಅದು ಹೀಗೆ, ಕೇಳಿ - ಜ್ಞಾನಿಗಳು ತಮ್ಮ ಯೋಗ್ಯತಾನುಸಾರವಾಗಿ ವಿಶೇಷವಾಗಿ ತಿಳಿದುಕೊಳ್ಳುತ್ತಾರೆ. ಸಾಮಾನ್ಯವಾಗಿ ಎಲ್ಲರೂ ಕೂಡ ತಿಳಿದುಕೊಳ್ಳುವುದು ಈ ಕೆಳಗೆ ಕೊಟ್ಟಿದೆ. ಅದರಂತೆ ಚಿಂತಿಸುವುದು-

| **ಕಂಠಪಾಠ ಮಾಡಿ** | | **ಅರ್ಥ ಮಾಡಿಕೊಳ್ಳಿ** |
|---|---|---|
| (ಮೇಲಿಂದ ಕೆಳಗೆ) | | (ಕಂಠಪಾಠವಲ್ಲ) |
| ತದ್ರೂಪ | = | ಅದೇ ಆಕಾರದಿಂದ |
| ತನ್ನಾಮ | = | ಅದೇ ಹೆಸರಿನಿಂದ |
| ತತ್ತೇಜ | = | ಅದರ ಶಕ್ತಿಯನ್ನು ತೋರಿಸುತ್ತಾ |
| ತದ್ಭಿನ್ನ | = | ಅದರಿಂದ ಭಿನ್ನನಾಗಿರುವ |
| ತಂ ಶ್ರೀನಿವಾಸಮ್ | = | ಆ ಶ್ರೀನಿವಾಸನನ್ನು |
| ನಮಾಮಿ | = | ನಮಿಸುತ್ತೇನೆ. |

**ಜಡದಲ್ಲಿ ಉದಾಹರಣೆ** : ಜಡದಲ್ಲಿ ಚಿಂತನೆ ಮಾಡುವ ಕ್ರಮ - ಬೀಗದಲ್ಲಿ ಬೀಗದ ಆಕಾರದಂತೆ ಇದ್ದುಕೊಂಡು ಬೀಗ ಎಂಬ ಹೆಸರಿನಿಂದ ಇದ್ದು, ಬೀಗ ಬಾಗಿಲು ತೆಗೆಯಲು ಅವಕಾಶ

ಕೊಡದೆ ಇರುವುದೇ ಅದರ ತೇಜ. ಈ ತೇಜವನ್ನು ಬೀಗದಲ್ಲಿ ಇಟ್ಟವನು ಶ್ರೀಹರಿ. ತಾನು ಎಲ್ಲದರಿಂದ ಭಿನ್ನನಾಗಿದ್ದು ಮನೆ ಕಾಯುತ್ತಾನೆ ಎಂದು ತಿಳಿಯಬೇಕೇ ಹೊರತು, ಬೀಗವೇ ಮನೆ ಕಾಯುತ್ತದೆಂದು ತಿಳಿದುಕೊಳ್ಳಬೇಡಿ.

**ಚೇತನದಲ್ಲಿ ಉದಾಹರಣೆ** : ಸಕಲ ಚೇತನದಲ್ಲಿ ಅದೇ ರೂಪದಿಂದ, ಅದೇ ಹೆಸರಿನಿಂದ ಅವರಲ್ಲಿಟ್ಟಿರುವ ಮಹಿಮೆಯನ್ನು ತೋರಿಸುತ್ತಾ ಅವರಿಂದ ಭಿನ್ನವಾಗಿದ್ದುಕೊಂಡು, ಶ್ರೀಹರಿಯೇ ಆ ಕೆಲಸವನ್ನು ಅವರಲ್ಲಿ ಮಾಡಿಸುತ್ತಾನೆಂದು ತಿಳಿಯಬೇಕೇ ಹೊರತು, ಅವರೇ ಸ್ವತಂತ್ರವಾಗಿ ಮಾಡಿದರೆಂದು ತಿಳಿಯಬಾರದು.

'ಕ್ಲೇಶಾನಂದಗಳು ಈಶಾಧೀನ' ಎಂಬ ದಾಸವಾಣಿಯಂತೆ ಜಡವಾಗಲೀ ಅಥವಾ ಚೇತನವಾಗಲೀ ಅವುಗಳಿಂದ ನಮಗೆ ತೊಂದರೆಯಾದರೆ ಅಲ್ಲಿ ಭಗವಂತನು ಆಗ್ರಹರೂಪದಿಂದ ಇರುತ್ತಾನೆಂತಲೂ, ಸುಖವಾದರೆ ಅನುಗ್ರಹರೂಪದಿಂದ ಇರುತ್ತಾನೆಂತಲೂ ತಿಳಿದುಕೊಳ್ಳಬೇಕು. ಇದು ನಮ್ಮ ಕರ್ಮಾನುಸಾರವಾಗಿ ದೇವರು ಮಾಡುವ ವ್ಯಾಪಾರ. ಇದಕ್ಕಾಗಿ ದೇವರನ್ನು ನಿಂದಿಸಬಾರದು.

ಪಂಡಿತ ಪಾಮರರಾದಿಯಾಗಿ ಆಬಾಲ-ವೃದ್ಧ-ಸ್ತ್ರೀ-ಪುರುಷರು ಈ ಮಂತ್ರವನ್ನು ಅರ್ಥ ಮಾಡಿಕೊಂಡು ಬಾಯಲ್ಲಿ ಹೇಳುತ್ತಾ ಮನಸ್ಸಲ್ಲಿ ಚಿಂತಿಸುತ್ತಾ ಸಕಲ ವೈದಿಕ ಲೌಕಿಕ ಕರ್ಮಗಳನ್ನು ಮಾಡಿದಾಗ ಕೊನೆಯಲ್ಲಿ ದೇವರಿಂದ ನಮ್ಮಲ್ಲಿ ನಮ್ಮ ಶಕ್ತಿಯಂತೆ ಈ ಕಾರ್ಯವಾಯಿತೆಂದು ತಿಳಿದುಕೊಳ್ಳಬೇಕೇ ಹೊರತು, ನಾವೇ ಸ್ವತಂತ್ರವಾಗಿ ಮಾಡಿದನೆಂದು ತಿಳಿದುಕೊಳ್ಳಬಾರದು.

### ವಿಶೇಷ ವಿಚಾರ

ಮಲಮೂತ್ರ ವಿಸರ್ಜನೆ ಸಮಯದಲ್ಲಿ ದೈತ್ಯರ ಚಿಂತನೆ ಮಾಡಬೇಕು. ಉಳಿದ ಕಾಲದಲ್ಲಿ ಯಾವ ಅವಸ್ಥೆಯಲ್ಲೇ ಇರಲಿ ಕಛೇರಿಯಲ್ಲಿರಲಿ, ಶಾಲೆಯಲ್ಲಿರಲಿ, ಸಂಚಾರಮಾಡುತ್ತಿರಲಿ, ಆಸ್ಪತ್ರೆಯಲ್ಲಿರಲಿ ಅಥವಾ ಪ್ಯಾಂಟು ಹಾಕಿಕೊಂಡಿದ್ದೇವೆ ಮತ್ತು ಬೂಟ್ಸ್ ಹಾಕಿಕೊಂಡಿದ್ದೇವೆ ಎಂಬ ಯಾವ ನಿರ್ಬಂಧವೂ ಇಲ್ಲದೇ ಮಾನಸ ಸ್ಮರಣೆ ಮಾಡುವುದು, ಆದರೆ ಒಂದು ಗಮನಿಸಬೇಕಾದದ್ದು ಏನೆಂದರೆ ಸ್ಮರಣೆ ಮಾಡುವುದಕ್ಕೆ ಮುಂಚೆ ಬಲಗಿವಿಯನ್ನು ಮುಟ್ಟಿಕೊಂಡು "ಗಂಗಾಜನಕ ಪುಂಡರೀಕಾಕ್ಷ" ಎಂದು ಸ್ಮರಣೆ ಮಾಡಿ ಇದರಿಂದ ತಕ್ಷಣ ಗಂಗಾಸ್ನಾನ ಮಾಡಿ ಶುದ್ಧಿಯಾದಂತೆ ಆಗುತ್ತದೆ. ಹೀಗೆ ಇದನ್ನು ಕಂಠಪಾಠ ಮಾಡಿ ಆ ಹೊತ್ತಿಗೆ ಸ್ಮರಿಸಿಕೊಳ್ಳುವ ಅಭ್ಯಾಸ ಮಾಡಿದರೆ, ಸ್ವಲ್ಪದಿವಸದ ನಂತರ ನಿಮಗೆ ಅದೇ ಅಭ್ಯಾಸವಾಗಿರುತ್ತದೆ. ಗಡಿಯಾರ ಕಟ್ಟಿಕೊಂಡಿದ್ದರೆ ಗಡಿಯಾರ ನೋಡಿಕೊಂಡು ಕಾಲಕ್ಕೆ ತಕ್ಕಂತೆ ತಿಳಿದುಕೊಳ್ಳುವುದು.

ವಾಹನ ಸಂಚಾರ ಮಾಡುವಾಗ ಆಟೋ, ಕಾರು, ಬಸ್ಸು, ರೈಲು ಮುಂತಾದ ಯಾವ ವಾಹನವನ್ನು ಪ್ರವೇಶಮಾಡುವಾಗ ಮತ್ತು ಇಳಿದಮೇಲೆ ಎರಡು ಸಲವು ಬಲಗಿವಿ ಮುಟ್ಟಿಕೊಂಡು 'ಗಂಗಾಜನಕ ಪುಂಡರೀಕಾಕ್ಷ' ಎಂದು ಹೇಳಿಕೊಳ್ಳಿ. ಒಳಗೆ ಪ್ರವೇಶ ಮಾಡಿದಾಗ ಇದರಿಂದ ಅಲ್ಲಿ ಮೊದಲಿದ್ದ ಅಷ್ಟೋತ್ತರ ಶತಮೈಲಿಗೆ ಸಂಪರ್ಕವಾದರೂ ನಾವು ಪವಿತ್ರವಾಗುತ್ತೇವೆ. ಆದರೆ 'ಗಂಗಾಜನಕ ಪುಂಡರೀಕಾಕ್ಷ' ಎಂದು ಹೇಳುವುದರಿಂದ ನಾವು ಪವಿತ್ರರಾದೆವು ಎಂಬ ನಂಬಿಕೆ ನಿಮ್ಮ ಮನಸ್ಸಿನಲ್ಲಿರಬೇಕು, ಇಲ್ಲದಿದ್ದರೆ ಇದು ಕೆಲಸ ಮಾಡುವುದಿಲ್ಲ. ಆದುದರಿಂದ ಇದನ್ನು ಅವಶ್ಯವಾಗಿ ಅಭ್ಯಾಸ (ನಂಬಿಕೆ) ಮಾಡಬೇಕು.

# ನಮ್ಮ ದೇಹದಲ್ಲಿರುವ ಏಕಾದಶ ಇಂದ್ರಿಯಗಳಲ್ಲಿ ಇರತಕ್ಕ ಭಗವದ್ರೂಪಗಳ ಚಿಂತನ

(ಶ್ರೀಹರಿಕಥಾಮೃತಸಾರ)

(ಭಾ.ಮು.) ಭಾರತೀರಮಣಮುಖ್ಯಪ್ರಾಣಾಂತರ್ಗತ ಎಂದು ಅರ್ಥ.

| ಇಂದ್ರಿಯ | ತತ್ವಾಭಿಮಾನಿ ದೇವತಾ | ಭಗವದ್ರೂಪ |
|---|---|---|
| ಮನದಲ್ಲಿ (ಮನಸ್ಸು) | ಶ್ರೀರುದ್ರದೇವರು | ಭಾ.ಮು. ಶ್ರೀನಾರಾಯಣರೂಪ |
| ಶ್ರವಣೇಂದ್ರಿಯ (ಕಿವಿಗಳು) | ಶ್ರೀದಿಗ್ದೇವತೆಗಳು | ಭಾ.ಮು. ಶ್ರೀಮತ್ಸ್ಯ ರೂಪ |
| ಆಲಿಯೊಳಗೆ (ಕಣ್ಣು) | ಶ್ರೀಸೂರ್ಯಚಂದ್ರರು | ಭಾ.ಮು. ಶ್ರೀಕೂರ್ಮರೂಪ |
| ತ್ವಗೀಂದ್ರಿಯದಲ್ಲಿ (ಚರ್ಮ) | ಶ್ರೀಅಹಂಕಾರಿಕ ಪ್ರಾಣದೇವರು | ಭಾ.ಮು. ಶ್ರೀವರಾಹ ರೂಪ |
| ರಸನದೊಳು (ನಾಲಿಗೆ) | ಶ್ರೀವರುಣದೇವರು | ಭಾ.ಮು. ಶ್ರೀನರಸಿಂಹರೂಪ |
| ನಾಸಿಕದಲ್ಲಿ (ಮೂಗು) | ಶ್ರೀಅಶ್ವಿನಿದೇವತೆಗಳು | ಭಾ.ಮು. ಶ್ರೀವಾಮನರೂಪ |
| ವದನದಲ್ಲಿ (ವಾಗಿಂದ್ರಿಯ) | ಶ್ರೀಅಗ್ನಿದೇವರು | ಭಾ.ಮು. ಶ್ರೀಪರಶುರಾಮರೂಪ |
| ಹಸ್ತಗಳಲ್ಲಿ (ಕೈಗಳು) | ಶ್ರೀದಕ್ಷಪ್ರಜಾಪತಿಗಳು | ಭಾ.ಮು. ಶ್ರೀಶ್ರೀರಾಮರೂಪ |
| ಪಾದದಲ್ಲಿ (ಕಾಲುಗಳು) | ಶ್ರೀಜಯಂತದೇವರು | ಭಾ.ಮು. ಶ್ರೀಶ್ರೀಕೃಷ್ಣರೂಪ |
| ಪಾಯುವಿನಲ್ಲಿ (ಗುದದ್ವಾರ) | ಶ್ರೀಮಿತ್ರನಾಮಕಸೂರ್ಯ | ಭಾ.ಮು. ಶ್ರೀಬುದ್ಧರೂಪ |
| ಮೇಢ್ರದಿ (ಮೂತ್ರದ್ವಾರ) | ಶ್ರೀಸ್ವಾಯಂಭುಮನುಗಳು | ಭಾ.ಮು. ಶ್ರೀಕಲ್ಕಿರೂಪ |

ಆಯಾಯ ಇಂದ್ರಿಯಗಳಲ್ಲಿ ಇಂದ್ರಿಯಗಳ ಕಾರ್ಯಗಳನ್ನು ಚಿಂತಿಸಿ ಅನುಸಂಧಾನ ಮಾಡಿ ಅನುಭವ ಮನಸ್ಸಿಗೆ ಉಂಟುಮಾಡಿಕೊಳ್ಳುವುದು.

## ಅನುಭವಾಮೃತ

ರಾಗ - ಜೋಗಿ, ಆದಿತಾಳ

ಗೋವಿಂದಾ ನಿನ್ನಾನಂದ । ಸಾಧನ ಸಕಲವು ನಿನ್ನಾನಂದ ॥ ಪ ॥

ಅಣುರೇಣುತೃಣಕಾಷ್ಠ ಪರಿಪೂರ್ಣ ಗೋವಿಂದ
ನಿರ್ಮಲಾತ್ಮಕನಾಗಿ ಇರುವುದೇ ಆನಂದ ॥ ೧ ॥

ಸೃಷ್ಟಿಸ್ಥಿತಿಲಯಕಾರಣ ಗೋವಿಂದ ।
ಈಪರಿ ಮಹಿಮೆಯ ತಿಳಿಯೋದೆ ಆನಂದ ॥ ೨ ॥

ಮಂಗಲ ಮಹಿಮೆಯ ಶ್ರೀಪುರಂದರವಿಠಲ
ಹಿಂಗದೆ ದಾಸರ ಸಲಹೋದೆ ಆನಂದ ॥ ೩ ॥

ಇದನ್ನು ಅರ್ಥಮಾಡಿಕೊಂಡು ಜೀವನದಲ್ಲಿ ಅಳವಡಿಸಿಕೊಂಡು ಅನುಭವ ಪಡೆಯಿರಿ.

# ನಮ್ಮ ದೇಹದ ಕಾರ್ಯಗಳಿಂದ ಹರಿಸ್ಮರಣೆ

ಕಂಠಪಾಠ ಮಾಡಿ ಅಭ್ಯಾಸ ಮಾಡಿಕೊಳ್ಳಿ

| | | | | | |
|---|---|---|---|---|---|
| ನಿಂತರೆ | | ಶ್ರೀನಿವಾಸ | ಎದ್ದರೆ | | ಬಕವೈರಿ |
| ಕೂತರೆ | | ವೇದವ್ಯಾಸ | ಒದ್ದರೆ | | ಶಕಟಾರಿ |
| ನಡೆದರೆ | | ಹರಿಕೃಷ್ಣ | ಬಿದ್ದರೆ | | ತೃಣಾವರ್ತವೈರಿ |
| ಓಡಿದರೆ | | ಬೆಣ್ಣೆಕಳ್ಳ | ನಾಟ್ಯಮಾಡಿದರೆ | | ಕಾಳಿಂಗಮರ್ದನ |
| ನಕ್ಕರೆ | | ನಂದಬಾಲ | ಬಲಗಾಲಲ್ಲಿ ಎಡವಿದರೆ | | ಅಹಲ್ಯಾವರದ ರಾಮ |
| ಅತ್ತರೆ | | ದುಃಖರಹಿತ ಹರಿ | ಎಡಗಾಲಲ್ಲಿ ಎಡವಿದರೆ | | ಗಂಗಾಜನಕ ತ್ರಿವಿಕ್ರಮ |
| ತೂಕಡಿಸಿದರೆ | | ಕುಂಭಕರ್ಣವೈರಿ ರಾಮಚಂದ್ರ | ಹಣ್ಣುತಿಂದರೆ | | ಶಬರೀವರದ ರಾಮಚಂದ್ರ |
| ಆಕಳಿಸಿದರೆ | | ಯಶೋದೆನಂದನ, ಅಣುಭಾಷ್ಯ, ಜಾಂಬುವಂತ | ಇಡ್ಲಿ, ದೋಸೆ, ಚಪಾತಿ, ರೊಟ್ಟಿ, ಬಕರಿ, ಹೋಳಿಗೆ ತಿಂದರೆ | | ಬೆಟ್ಟದ ವೆಂಕಟೇಶನಿಗೆ ಅರ್ಪಣೆ |
| ಉಸಿರಾಡಿದರೆ | | ಮುಖ್ಯಪ್ರಾಣ | | | |
| ಮಲಗಿದರೆ | | ರಂಗನಾಥ | ಒರಳಲ್ಲಿ ರುಬ್ಬಿದರೆ | | ಕೂರ್ಮಾವತಾರಿ |
| ಸೀನುಬಂದರೆ | | ಇಕ್ಷ್ವಾಕು ರಾಮಚಂದ್ರ | ಮಕ್ಕಳ ಚೇಷ್ಟೆ ಮತ್ತು ಆಟ ನೋಡಿದರೆ | | ಶ್ರೀಕೃಷ್ಣ ಬಾಲಲೀಲಾ |
| ಸ್ನಾನ ಮಾಡಿದರೆ | | ಉಡುಪಿ ಕೃಷ್ಣ | ಮಕ್ಕಳನ್ನು ಮುದ್ದಾಡಿದಾಗ | | ಮುದ್ದುಕೃಷ್ಣ |
| ಪಾದ ತೊಳೆದರೆ | | ಶ್ರೀಮನ್‌ಮಧ್ವಾಚಾರ್ಯರು | ಗೋವನ್ನು ಕಂಡರೆ | | ಗೋಪಾಲ ಕೃಷ್ಣ |
| ಊಟ ಮಾಡಿದರೆ | | ಅಂತರ್ಯಾಮಿ ನರಸಿಂಹ | ದೇವರ ನಾಮ ಕೇಳಿದರೆ | | ಸಾಮಗಾನಲೋಲ |
| ಕಿವಿ ಕೆರೆದುಕೊಂಡರೆ | | ಮಧುವೈರಿ | ಹೊಕ್ಕಳನ್ನು ಕಂಡರೆ | | ಪದ್ಮನಾಭ |
| ನವೆಗೆ ಕೆರೆದುಕೊಂಡರೆ | | ರಯಿಕ ಋಷಿಗಳು | ಪುರಾಣ ಹೇಳಿದರೆ ಪುರಾಣ ಕೇಳಿದರೆ | | ಶುಕಾಚಾರ್ಯರು ಪರೀಕ್ಷಿತ ರಾಜರು |
| ನಲಿದರೆ (ಮೈಮುರಿದು ಎದ್ದರೆ) | | ಮೋಹಿನಿರೂಪ | ಹಾಲು ಕುಡಿದರೆ | | ನಂದಗೋಪ ಕುಮಾರ |
| ಸುಂದರಸ್ತ್ರೀಯನ್ನು ನೋಡಿದರೆ | | ಮೋಹಿನಿರೂಪ | ಮೊಸರು ಬೆಣ್ಣೆಗಳನ್ನು ತಿಂದರೆ | | ನವನೀತಚೋರ |
| ಮೂತ್ರವಿಸರ್ಜನೆ ಮಾಡಿದರೆ | | ಕಲ್ಕಿ | ದಾನ ಮಾಡಿದರೆ | | ರಾಮಚಂದ್ರ |
| ಮಲವಿಸರ್ಜನೆ ಮಾಡಿದರೆ | | ಬುದ್ಧ | ದಾನತೆಗೆದುಕೊಂಡರೆ | | ವಾಮನಮೂರ್ತಿ |

ಹಾಲುಕುಡಿದಾಗ ಗೋಪಿಕಾಸ್ತ್ರೀಯರ ಮನೆಯಲ್ಲಿ ಕೃಷ್ಣ ಹಾಲು ಕುಡಿದದ್ದನ್ನು ಸ್ಮರಿಸಿಕೊಳ್ಳುವುದು ಇದರಿಂದ ನಾವೇ ಹಾಲು ಕುಡಿಯುತ್ತಿದ್ದರೂ ನಮ್ಮ ಮನಸ್ಸು ಗೋಪಾಲಕೃಷ್ಣನ ಸ್ಮರಣೆ ಬರುತ್ತದೆ. ಹಾಲಿನಲ್ಲಿ ೩೫೪ ವಿಷದ ಎಂಬ ಭಗವದ್ರೂಪಗಳಿವೆ. ಹಾಲಿಗೆ ಅಭಿಮಾನಿ ಸರಸ್ವತೀದೇವಿ, ಭಗವದ್ರೂಪ ವಿಷ್ಣು, ಹಾಲು ಯಾವ ಹಸುವು ಕೊಟ್ಟಿದೆಯೋ ಹಸುವಿಗೆ ಒಳ್ಳೆಯದಾಗಲಿ ಎಂದು ಚಿಂತನೆ.

ಇದರಂತೆ ನೀವೇ ತಿಳಿದುಕೊಂಡು ಭದವದ್ರೂಪಗಳನ್ನು ಸ್ಮರಣೆ ಮಾಡುವುದು

೧. ಯಶೋದೆನಂದನ ಎಂದರೆ ಯಶೋದೆ ನಂದನನಾದ ಕೃಷ್ಣನು ತನ್ನ ತಾಯಿಯಾದ ಯಶೋದೆಗೆ ತನ್ನ ಬಾಯಿಯಲ್ಲಿ ಬ್ರಹ್ಮಾಂಡವನ್ನೇ ತೋರಿದ ಎಂದು ಸ್ಮರಣೆ ಮಾಡುವುದು.

**ಅಣುಬಾಷ್ಯ** : ಶ್ರೀಮಧ್ವಾಚಾರ್ಯರು ಮಾಡಿದ ಸರ್ವಮೂಲಗಳಲ್ಲಿ ಒಂದು ಸಣ್ಣ ಗ್ರಂಥವಾದರೂ ಅಪಾರವಾದ ಮಹಿಮೆಯುಳ್ಳ ಅರ್ಥವನ್ನು ಇಟ್ಟಿದ್ದಾರೆ ಎಂದು ಸ್ಮರಿಸುವುದು.

**ಜಾಂಬುವಂತ** : ಬ್ರಹ್ಮದೇವರು ಆಕಳಿಸಿದಾಗ ಜಾಂಬುವಂತರು ಹುಟ್ಟಿದರು.

೨. ಮುಖ್ಯಪ್ರಾಣದೇವರು ನಮ್ಮ ಶರೀರದಲ್ಲಿ ಒಂದು ದಿವಸಕ್ಕೆ ೨೧,೬೦೦ ಉಸಿರಾಟಗಳನ್ನು ಹಂಸಮಂತ್ರ ಜಪರೂಪದಲ್ಲಿ ಮಾಡುತ್ತಾರೆ, ಎಂದು ಸ್ಮರಿಸಿಕೊಳ್ಳುವುದು. ಇದನ್ನು ಬೆಳಿಗ್ಗೆ ಒಂದು ಸಾರಿ ರಾತ್ರಿ ಒಂದು ಸಾರಿ ಸ್ಮರಿಸಿಕೊಳ್ಳಿ.

೩. ಸೀನುತ್ತಿರುವ ಮನುಚಕ್ರವರ್ತಿಗಳ ಮೂಗಿನ ದೆಸೆಯಿಂದ ಇಕ್ಷ್ವಾಕು ರಾಜರು ಹುಟ್ಟಿದರು. ಇವರ ವಂಶದಲ್ಲಿ ರಾಮಚಂದ್ರದೇವರು ಅವತಾರಮಾಡಿದರು. ಎಂದು ಸ್ಮರಣೆ.

೪. ರಯಿಕರು ಎಂಬ ಋಷಿಗಳು ತಮಗೆ ಬಂದಿದ್ದ ಕಜ್ಜಿಗಾಗಿ ಕೆರೆದುಕೊಳ್ಳುತ್ತಾ ಸಾಮಗಾನ ಮಾಡುತ್ತಾ ಒಂದು ಸಂತೆಯಲ್ಲಿ ಗಾಡಿಯ ಕೆಳಗೆ ಕುಳಿತಿದ್ದರು. ಎಂದು ಸ್ಮರಿಸಿಕೊಳ್ಳುವುದು.

೫. ಸುಂದರಸ್ತ್ರೀಯರನ್ನು ನೋಡಿದಾಗ ಮನಸ್ಸು ವಿಕಾರವಾಗುತ್ತದೆ. ಇದರಿಂದ ಪಾಪಸಂಪಾದನೆಯಾಗುತ್ತದೆ. ಅದಕ್ಕೋಸ್ಕರವಾಗಿ ಈ ಸೌಂದರ್ಯವನ್ನು ಈ ಸ್ತ್ರೀಯರಲ್ಲಿ ಇಟ್ಟಿರುವವನು ಮೋಹಿನಿರೂಪಿಯಾದ ಶ್ರೀಹರಿ ಎಂದು ಸ್ಮರಿಸಿಕೊಂಡರೆ ದೇವರ ಮಹಿಮೆ ಎಂತಹದು ಎಂದು ಮನಸ್ಸಿಗೆ ಬರುತ್ತದೆ. ಇದರಿಂದ ಪಾಪನಾಶವಾಗುತ್ತದೆ. ಮತ್ತು ಆ ಸ್ತ್ರೀಯರ ದೇಹದಲ್ಲಿ ಇರತಕ್ಕ ಹೇಸಿಗೆ ಪದಾರ್ಥಗಳನ್ನು ಸ್ಮರಿಸಿಕೊಂಡರೆ ಅದರ ಬಗ್ಗೆ ಮನಸ್ಸಿಗೆ ಅಸಹ್ಯ ಭಾವನೆ ಹುಟ್ಟಿ ಜಿಗುಪ್ಸೆಯಿಂದ ಬರುವ ಪಾಪ ಲೇಪವಾಗುವುದಿಲ್ಲ. "ನವಮೋಹನಾಂಗಿಯರ ರೂಪವ ಕಣ್ಣಿಂದ ಎವೆ ಇಕ್ಕದೆ ನೋಡುವ ನೋಟ ನಿನ್ನದಯ್ಯ" ಎಂದರೆ ಭಗವಂತನ ಸ್ವತಂತ್ರ ಕರ್ತೃತ್ವವನ್ನು ಜೀವನ ಪರಾಧೀನ ಕರ್ತೃತ್ವವನ್ನು ತಿಳಿಸುವ ಅಭಿಪ್ರಾಯವನ್ನು ಶ್ರೀಕನಕದಾಸರು ತಿಳಿಸಿದ್ದಾರೆ. ಭಗವಂತ ನನ್ನಲ್ಲಿ ಇಂಥ ಕೆಲಸವನ್ನು ಮಾಡಿಸಬೇಡ ಎಂದು ಪ್ರಾರ್ಥನೆಮಾಡಿಕೊಳ್ಳುವುದು.

೬. **ನಾಟ್ಯಮಾಡಿದರೆ** : ಕಾಳಿಂಗಸರ್ಪದ ಮೇಲೆ ನಾಟ್ಯವಾಡಿದ ಶ್ರೀಕೃಷ್ಣನನ್ನು ಸ್ಮರಿಸಿದರೆ ಹಾವು, ಚೇಳುಗಳ ದರ್ಶನ ನಮಗೆ ಆಗುವುದಿಲ್ಲ.

೭. ಇಡ್ಲಿ, ದೋಸೆ.... : ಭವಿಷ್ಯೋತ್ತರ ಪುರಾಣದಲ್ಲಿ ವೆಂಕಟೇಶ ಮಹಾತ್ಮೆ - ಶ್ರೀನಿವಾಸದೇವರು ಭೀಮ ಎಂಬ ಕುಂಬಾರನ ಮನೆಗೆ ಹೋಗಿ ಅವನು ಭಕ್ತಿಯಿಂದ ಕೊಟ್ಟ ರೊಟ್ಟಿಯನ್ನು ತಿಂದಿರುತ್ತಾನೆ. ಆದುದರಿಂದ ಇಡ್ಲಿ ಗೋತ್ರಕ್ಕೆ (ಗುಂಪಿಗೆ) ಸೇರಿದ ಪದಾರ್ಥಗಳನ್ನು ತಿನ್ನುವುದಕ್ಕೆ ಮುಂಚೆ ಬೆಟ್ಟದ ವೆಂಕಟೇಶನಿಗೆ ಅರ್ಪಿಸುವುದು.

೮. ರುಬ್ಬುವುದು : ರುಬ್ಬುವಾಗ ಒರಳಿನಲ್ಲಿ ರುಬ್ಬುಗುಂಡು ತಿರುಗುತ್ತಿರುತ್ತದೆ ಇದರಿಂದ ಕೂರ್ಮಾವತಾರವನ್ನು ಮಾಡಿ ಮಂದರಪರ್ವತವನ್ನು ತನ್ನ ಮೇಲೆ ಇಟ್ಟುಕೊಂಡು ತಿರುಗಿಸಲು ಅವಕಾಶಕೊಟ್ಟ. ಆಗ ಅನೇಕ ಮಹಿಮೆಗಳನ್ನು ತೋರಿಸಿದ್ದಾನೆ. ಇದನ್ನೆಲ್ಲ ಸ್ಮರಿಸಿಕೊಂಡರೆ ಆ ರುಬ್ಬಿದ ಪದಾರ್ಥಗಳಲ್ಲಿ ಈ ಮಹಿಮೆ ಸೇರಿರುತ್ತದೆ.

೯. ನಾವು ಲೋಟದಿಂದ ಹಾಲು ಕುಡಿಯುವಾಗ - ಶ್ರೀಕೃಷ್ಣ ಗೋಪಿಯರ ಮನೆಯಲ್ಲಿ ಹಾಲು ಕುಡಿಯುತ್ತಿದ್ದುದನ್ನು ಸ್ಮರಿಸಿಕೊಂಡರೆ ನಮ್ಮ ಮನಸ್ಸು ನಂದಗೋಕುಲಕ್ಕೆ ಹೋಗಿ ಕೃಷ್ಣ ಹಾಲು ಕುಡಿಯುವ ದೃಶ್ಯ ನಮ್ಮ ಮನಸ್ಸಿಗೆ ಬರುತ್ತದೆ. ಇದರಿಂದ ನಾವೇ ಹಾಲು ಕುಡಿಯುತ್ತಿದ್ದರೂ ನಮ್ಮ ಮನಸ್ಸು ಗೋಕುಲಕ್ಕೆ ಹೋಯಿತು. ಇದರಿಂದ ಎಷ್ಟು ಸುಖವಾಗುತ್ತದೆ ಅಲ್ಲವೇ? ಇದೇ ಉಪಾಯ.

ತುಂಬಾ ಜಾಸ್ತಿ ಬರೆದುಬಿಟ್ಟಿರಿ ಎಂದು ಆಕ್ಷೇಪಣೆ ಮಾಡಬೇಡಿ ಅಥವಾ ಹಾಸ್ಯ ಮಾಡಬೇಡಿ "ಹರಿಹರಿ ಎನ್ನಿಲಿಕ್ಕೆ ಹೊತ್ತು ಇಲ್ಲ ಸ್ವಾಮಿ". - (ದಾಸವಾಣಿ). ಎಂದು ದಾಸರು ಹೇಳುತ್ತಿದ್ದಾರೆ. ಅದಕ್ಕೆ ಹೊತ್ತು ಹೊತ್ತಿಗೆ ಹರಿ ಹರಿ ಎನ್ನಿ 'ಕಲಿಯುಗದಲಿ ಹರಿನಾಮವ ನೆನೆದರೆ ಕುಲಕೋಟಿಗಳು ಉದ್ಧರಿಸುವವು. ಅಪಾರಮಹಿಮ ಶ್ರೀ ಪುರಂದರವಿಠಲನ ಉಪಾಯದಿಂದ ನೆನೆಮನವೇ' ಎಂದರೆ ಅಪಾರಮಹಿಮನಾದ ಪರಮಾತ್ಮನ ಸ್ಮರಣೆ ಯಾವ ರೀತಿಯಿಂದಲಾದರೂ ಮಾಡಿದರೆ ಕಲಿಯುಗದಲ್ಲಿ ಕುಲಕೋಟಿಗಳು ಉದ್ಧಾರವಾಗುತ್ತವೆ ಎಂದು ಹೇಳಿರುತ್ತಾರೆ. ಆದ್ದರಿಂದ ಅದನ್ನು ಹೊಂದುವ ಮಾರ್ಗವನ್ನು ಉಪಾಯದಿಂದ ಸಾಧಿಸಬಹುದು. ಇದಕ್ಕೆ ಯಾವ ನಿಷೇಧಗಳು ಮತ್ತು ಅವಸ್ಥೆಗಳು ಎಂಬ ನಿಯಮಗಳಿಲ್ಲ. ಭಗವಂತನ ಸ್ಮರಣೆ ಮಾಡಿದ್ದೇ ವಿಧಿ, ಮರೆಯವುದೇ ನಿಷೇಧ. ಈ ಕಾರಣದಿಂದ ಇದನ್ನು ಅಭ್ಯಾಸ ಮಾಡಿಕೊಂಡು ಸ್ವಲ್ಪ ದಿವಸವಾದ ಮೇಲೆ ನಿಮಗೆ ಅದರ ಮಹಿಮೆ ಗೊತ್ತಾಗುತ್ತದೆ.

ಹೀಗೆ ಸಂದರ್ಭಕ್ಕೆ ಒದಗುವಂತಹ ಯಾವುದಾದರು ಒಂದು ಭಗವಂತನ ಭಾಗವತರ ಸ್ಮರಣೆಯನ್ನು ಮಾಡಿಕೊಂಡು ಸ್ಮರಿಸುವುದೇ ಅಪಾರಮಹಿಮ ಶ್ರೀಪುರಂದರವಿಠಲನ ನೆನೆಯುವ ಉಪಾಯ.

## ಏಕಾದಶೀ ಮಹಿಮೆ

ರಾಗ - ಕಾಂಬೋದಿ ಆದಿತಾಳ

ಹರಿದಿನದಲಿ ಉಂಡ ನರನಿಗೆ । ಘೋರ । ನರಕ ತಪ್ಪದುಯೆಂದು ಶ್ರುತಿ ಸಾರುತಲಿದೆಕೋ ॥ ಪ ॥

ಗೋವು ಕೊಂದ ಪಾಪ ವಿಪ್ರರ ಸಾವಿರ । ಜೀವ ಹತ್ಯವ ಮಾಡಿದ ಪಾಪವು
ಭಾವಜನಯ್ಯನ ದಿನದಿ ಉಂಡವರನು । ಕೀವಿನೊಳಗೆ ಹಾಕಿ ಕುದಿಸುವ ಯಮನು ॥ ೧ ॥

ಒಂದೊಂದು ಅಗಳಿಗೆ ಕೋಟಿ ಕೋಟಿ ಕ್ರಿಮಿಗಳು । ಅಂದಿನ ಅನ್ನವು ನಾಯಿ ಮಾಂಸವು
ಮಂದರೋದ್ಧಾರನ ದಿನದಿ ಉಂಡವರನ್ನು । ಹಂದಿಯ ಸುಡುವಂತೆ ಸುಡಿಸುವ ಯಮನು ॥ ೨ ॥

ಅನ್ನ ಪಾನ ತಾಂಬೂಲ ದರ್ಪಣಗಳು । ಚೆನ್ನ ವಸ್ತ್ರಗಳೆಲ್ಲ ವರ್ಜಿತವು ॥
ತನ್ನ ಸತಿಯರ ಸಂಗ ಮಾಡಿದ ನರರಿಗೆ । ಬೆನ್ನಲಿ ಕರುಳ ತೆಗೆವ ಕಂಡ್ಯ ಯಮನು ॥ ॥ ೩ ॥

ಜಾವದ ಜಾಗರ ಕ್ರತು ನಾಲ್ಕು ಸಾವಿರ । ಜಾವ ನಾಲ್ಕರ ಫಲಕೆ ಮಿತಿಯಿಲ್ಲವು ॥
ದೇವದೇವನ ದಿನದಿ ನಿದ್ರೆಗೈವನ । ಕಾವಲಿಯೊಳು ಹಾಕಿ ಹುರಿಸುವ ಯಮನು ॥ ॥ ೪ ॥

ಇಂತು ಏಕಾದಶಿ ಉಪವಾಸ ಜಾಗರ । ಸಂತತ ಕ್ಷೀರಾಬ್ಧಿಶಯನನ ಪೂಜೆ
ಸಂತುಷ್ಟಿಯಿಂದಲಿ ಮಾಡಿದ ಜನರಿಗೆ । ತ್ವಂತ ಫಲವೀವ ಪುರಂದರವಿಠಲ. ॥ ೫ ॥

"ಈ ದೇವರನಾಮವನ್ನು ಓದಿದವರೂ ಏಕಾದಶೀ ಉಪವಾಸ ಮಾಡಲು ಆಚರಣೆಗೆ ತಂದುಕೊಳ್ಳಿ"

# ರಾತ್ರಿ ಮಲಗುವುದಕ್ಕೆ ಮುಂಚೆ ದೇವರಲ್ಲಿ ಮಾಡುವ ಪ್ರಾರ್ಥನೆ

ಮಲಗುವುದಕ್ಕೆ ಮುಂಚೆ ದೇವರ ಮನೆಗೆ ಹೋಗಿ ದೇವರ ನಂದಾದೀಪ ಉರಿಯುತ್ತಿದೆಯೇ ಎಂದು ಗಮನಿಸಿ, ಆರಿಹೋಗಿದ್ದರೆ ಹಚ್ಚಿ ನಂತರ ಕೈಮುಗಿದು ನಿಂತುಕೊಂಡು ಮನಸಾ ಚಿಂತನೆ ಮಾಡುವುದು. (ದೇವರು ಮನೆ ಇಲ್ಲದಿದ್ದರೆ ದೇವರ ಪಠದ ಮುಂದಾದರೂ ಪ್ರಾರ್ಥಿಸುವುದು).

ನೆನ್ನೆಯಿಂದ ಇವತ್ತಿನವರೆಗೆ ನಮ್ಮಲ್ಲಿ ಆಗಿರುವ ಕೆಟ್ಟದ್ದೆಲ್ಲ (ಲೌಕಿಕ ವೈದಿಕ) ನಮ್ಮ ಅಂತರ್ಯಾಮಿ ತತ್ತ್ವೇಶದೈತ್ಯಾಂತರ್ಯಾಮಿ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಲಕ್ಷ್ಮೀನಾರಾಯಣ ನಿನ್ನಿಂದ ಸ್ವತಂತ್ರವಾಗಿ ಮಾಡಿ ನನ್ನಿಂದ ಪರಾಧೀನವಾಗಿ ಮಾಡಿಸಲ್ಪಟ್ಟಿದೆ. ಇದು ನಿನ್ನ ಪಾದಕ್ಕೆ ಪಾದುಕೆಯಂತೆ ಅರ್ಪಣೆ ಎಂದು ಸ್ಮರಿಸಬೇಕು. ಒಳ್ಳೆಯದೆಲ್ಲಾ (ಲೌಕಿಕ ವೈದಿಕ) ನಮ್ಮಂತರ್ಯಾಮಿ ತತ್ತ್ವೇಶದೇವತೆಗಳ ಅಂತರ್ಯಾಮಿ ಶ್ರೀಭಾರತೀರಮಣ-ಮುಖ್ಯಪ್ರಾಣಾಂತರ್ಗತ ಲಕ್ಷ್ಮಿನಾರಾಯಣ ನಿನ್ನಿಂದ ಸ್ವತಂತ್ರವಾಗಿ ಮಾಡಿ ನನ್ನಿಂದ ಪರಾಧೀನವಾಗಿ ಮಾಡಿಸಲ್ಪಟ್ಟಿದೆ. ಇದು ನಿನಗೆ ಗಂಧ ಸಮರ್ಪಣೆಯಂತೆ ಸಮರ್ಪಣೆ. ಕುಬ್ಜೆ ಕೊಟ್ಟ ಗಂಧವನ್ನು ಶ್ರೀಕೃಷ್ಣಪರಮಾತ್ಮ ಲೇಪನ ಮಾಡಿಕೊಂಡ ಅದರಂತೆ ಚಿಂತನೆ ಮಾಡಬೇಕು. (ಕುಬ್ಜ ಗಂಧಾನುಲಿಪ್ತಾಂಗೋ ಮಾಯಿ ಪರಮ ಪೂರುಷಃ' ಇದರಂತೆ ಸ್ಮರಣೆ.

ಜ್ಞಾನಕಾರ್ಯಗಳೆಲ್ಲ ತುಳಸೀದಳದಂತೆ ಸಮರ್ಪಣೆ. ನನಗೇನೂ ಗೊತ್ತಿಲ್ಲ ನಿಮ್ಮ ಪಾದಕ್ಕೆ ಬಿದ್ದೆ ಉದ್ಧಾರ ಮಾಡು ಸ್ವಾಮಿ ಗುರುಗಳಂತರ್ಯಾಮಿ (ಎಲ್ಲಾ ಕೆಲಸಗಳನ್ನು ನಾನೇ ಸ್ವತಂತ್ರವಾಗಿ ಮಾಡಿದೆ ಎಂಬ ಭಾವನೆಯನ್ನು ಬಿಟ್ಟು ದೇವರು ನನ್ನಲ್ಲಿ ಮಾಡಿಸಿದ ಎಂದು ಸ್ಮರಸುವುದೇ ಇದರ ಅಭಿಪ್ರಾಯ). ಇದು ನಿಷ್ಕಾಮ ಕರ್ಮಕ್ಕೆ ದಾರಿಯಾಗುತ್ತದೆ. ಅದರಿಂದ ಸಂಸಾರದ ಬಿಡುಗಡೆಯಾಗುತ್ತದೆ. ಇದನ್ನು ಕಂಠಪಾಠ ಮಾಡಿ ಬಾಯಿಗೆ ಬಂದಮೇಲೆ ಮನಸಾ ಸ್ಮರಿಸುವುದು.

## ರಾತ್ರಿ ಹಾಸಿಗೆಯ ಮೇಲೆ ಲಯಚಿಂತನೆ

॥ ರಾಮಂ ಸ್ಕಂದಂ ಹನುಮಂತಂ ವೈನತೇಯಂ ವೃಕೋದರಂ
ಶಯನೇಯಃ ಸ್ಮರೇತ್ ನಿತ್ಯಂ ದುಃಸ್ವಪ್ನಂ ತಸ್ಯನಶ್ಯತಿ ॥

ರಾಮದೇವರು ಷಣ್ಮುಖ, ಹನುಮಂತದೇವರು, ಗರುಡದೇವರು ಭೀಮಸೇನದೇವರು ಇವರುಗಳನ್ನು ರಾತ್ರಿ ಮಲಗುವಾಗ ಯಾರು ಸ್ಮರಿಸುತ್ತಾರೋ ಅವರಿಗೆ ದುಃಸ್ವಪ್ನಗಳು ಆಗುವುದಿಲ್ಲ

ಗಜೇಂದ್ರವರದ, ಮುಚುಕುಂದವರದ, ಪ್ರಹ್ಲಾದವರದ, ಧ್ರುವವರದ ಕರಿವರದ, ಕಂಚೀಪುದ - ವೃಷಭಾಚಲ, ಅಂಜನಾಚಲ, ಶೇಷಾಚಲ, ವೆಂಕಟಾಚಲ - ವಾಯುದೇವರು ನಮ್ಮಲ್ಲಿ ಒಂದು ದಿವಸಕ್ಕೆ 21,600 ಹಂಸಜಪಗಳನ್ನು (ಉಸಿರಾಟಗಳನ್ನು) ಮಾಡುತ್ತಾರೆ ಎಂದು ಚಿಂತಿಸಬೇಕು. 100 ವರುಷ ಗಾಳಿ, 100 ವರುಷ ಬಿಸಿಲು, 100 ವರುಷ ಮಳೆ - ಎಲ್ಲಾ ಜಲಮಯ ಪೃಥವೀತತ್ವ ಅಪ್ (ನೀರು) ತತ್ವದಲ್ಲಿ ಲಯ ಇವರೆಡೂ, ಅಗ್ನಿ ತತ್ವದಲ್ಲಿ ಲಯ ಇವು ಮೂರು, ವಾಯು ತತ್ವದಲ್ಲಿ ಲಯ ಇವು ನಾಲ್ಕು, ಆಕಾಶತತ್ವದಲ್ಲಿ ಲಯ ಇವೆಲ್ಲವೂ ಅಹಂಕಾರ ತತ್ವದಲ್ಲಿ ಲಯ, ಅಹಂಕಾರ ತತ್ವವು ಮಹತತ್ವದಲ್ಲಿ ಲಯ, ಮಹತತ್ವವು ಅವ್ಯಕ್ತ ತತ್ವದಲ್ಲಿ ಲಯ, ಅವ್ಯಕ್ತತತ್ವವು ಸೂಕ್ಷ್ಮ ಸ್ವರೂಪದಲ್ಲಿರುತ್ತದೆ.

ಅವರ (ತಾರತಮ್ಯದಲ್ಲಿ ಕಡಿಮೆಯಾದ) ದೇವತೆಗಳು ಇಂದ್ರದೇವರಲ್ಲಿ ಪ್ರವೇಶ, ಇಂದ್ರದೇವರು ರುದ್ರದೇವರಲ್ಲಿ ಪ್ರವೇಶ, ರುದ್ರದೇವರು ವಾಯುದೇವರಲ್ಲಿ ಪ್ರವೇಶ, ವಾಯುದೇವರು ಶ್ರೀಲಕ್ಷ್ಮೀದೇವಿಯವರಲ್ಲಿ ಪ್ರವೇಶ, ಲಕ್ಷ್ಮೀದೇವಿಯವರು ಪರಮಾತ್ಮನ ಅತ್ಯಂತ ಸಾಮೀಪ್ಯ.

ಪ್ರಳಯಜಲಧಿಯಲ್ಲಿ ಶ್ರೀಲಕ್ಷ್ಮೀಸ್ವರೂಪ ವಟದೆಲೆಯಮೇಲೆ (ಆಲದೆಲೆ)ಯ ಮೇಲೆ ಏಳುವರೆಕೋಟಿ ಯೋಜನ ಉದ್ದದ ಬಾಲಕೃಷ್ಣ ಮಲಗಿರುತ್ತಾನೆ, ಮಾರ್ಕಂಡೇಯ ವರದ ಪುಷ್ಪಭದ್ರಾ ನದಿತೀರ, ಸ್ಮರಿಸುವುದು. (ಇದರಿಂದ ಅಪಮೃತ್ಯು ಪರಿಹಾರ).

ಮೇಲಿನ ವಿಚಾರವನ್ನು ಕಂಠಪಾಠ ಮಾಡಿ ಅದು ಸ್ವಾಧೀನವಾದ ಮೇಲೆ ಕಣ್ಣು ಮುಚ್ಚಿಕೊಂಡು ಮನಸಾ ಚಿಂತನೆ ಮಾಡುವುದು.

## ಹಾಸಿಗೆಯ ಅನುಸಂಧಾನ

'ಇಟ್ಟಂಗೆ ಇರುವೇನೋ ಹರಿಯೇ ಎನ್ನ ದೊರೆಯೇ ಶ್ರೇಷ್ಠರೊಂದಿತ ಪಾದಪದುಮ ಶ್ರೀಪರಿಯೇ, ಚಂದ್ರ ಶಾಲೆ ಚಂದ್ರಕಿರಣದಿಂದೊಪ್ಪುವ, ಚಂದದ ಮಂಚದೊಳ್ ಮಲಗಿಸುವಿ, ಮಂದರೋದ್ಧರ ನಿನ್ನ ಮಮತೆ ತಪ್ಪಿದ ಮೇಲೆ ಧರ್ಮಮಂದಿರದಿತೋಳ್ ತಲೆದಿಂಬು ಮಾಡಿಸುವಿ ಹರಿಯೇ'

ಮಂಚ, ಸುಪ್ಪತ್ತಿಗೆ, ತಲೆದಿಂಬು, ಸೊಳ್ಳೆಪರದೆ, ಹೊದ್ದುಕೊಳ್ಳುವ ರಗ್ಗು, ಚಿತ್ರವಿಚಿತ್ರವಾಗಿ ನೇಯ್ದಿರುವ ಮಗ್ಗಾಸಿಕೆಗಳು ಇವುಗಳ ಮೇಲೆ ಕುಳಿತುಕೊಂಡಾಗ ಒಂದು ವಿಧವಾದ ಆನಂದವಾಗುತ್ತದೆ. ಹಾಸಿಗೆಯಲ್ಲಿರುವ ಹತ್ತಿಯ ಬಿಳಿಯ ಬಣ್ಣ, ಮೃದುಸ್ವಭಾವ, ಬೆಚ್ಚಗೆ ಮಾಡುವ ಶಕ್ತಿ ಕಂಬಳಿಯಲ್ಲಿರುವ ನೂಲುಗಳು ಅದರೊಳಗಿರುವ ಬೆಚ್ಚಗೆ ಉಂಟುಮಾಡುವ ಶಕ್ತಿ, ಇವುಗಳಿಂದ ಮಲಗಿಕೊಂಡವರಿಗೆ ಒಂದುತರಹ ಹಿತವಾಗಿರುತ್ತದೆ. ಈ ಹಿತ ಯಾರಿಂದಾಯಿತು ಗೊತ್ತೇ? ಕಂಬಳಿಯಿಂದಾಯಿತೇ, ದಿಂಬಿನಿಂದಾಯಿತೇ, ಹಾಸಿಗೆಯಿಂದಾಯಿತೇ, ಸೊಳ್ಳೆಪರದೆಯಿಂದಾಯಿತೇ ಎಂದು ಚಿಂತಿಸಿದರೆ ಅದೆಲ್ಲಾ ಜಡಪದಾರ್ಥಗಳು. ಆದ್ದರಿಂದ 'ತತ್ರಸ್ಥಿತೋವಿಷ್ಣುಃ ತತ್ ಚ್ಛಕ್ತಿಪ್ರಭೋದಯನ್ ಏಕಏವ ಮಹಾಶಕ್ತಿಃ ಕುರುತೇ ಸರ್ವಮಂಜಸ ತತ್ತದ್ರೂಪ, ತತ್ತನ್ನಾಮ, ತತ್ತತ್ತೇಜ, ತತ್ತದ್ಭಿನ್ನ, ತಂ, ತಂ ಶ್ರೀನಿವಾಸಂ ನಮಾಮಿ ಎಂದರೆ ಇಷ್ಟು ವಸ್ತುಗಳಲ್ಲಿ ದೇವರು ಅದೇ ಆಕಾರದಲ್ಲಿದ್ದುಕೊಂಡು ಅದೇ ಹೆಸರಿನಿಂದ ಅದರಲ್ಲಿರುವ ಬೆಚ್ಚಗಿಡುವ ಶಕ್ತಿ ಇಟ್ಟು ತಾನು ಅದರಿಂದ ಭಿನ್ನನಾಗಿರುತ್ತಾನೆ ಎಂದು ಚಿಂತಿಸಿ ಆ ಸುಖವನ್ನು ಶ್ರೀಹರಿಗೆ ಅರ್ಪಿಸಬೇಕು. ಇದರಿಂದ ನಾವು ಭಗವಂತನನ್ನು ಸ್ಮರಿಸಿದಂತಾಯಿತು. ಹಾಸಿಗೆಯ ಮೇಲೆ ದಂಪತಿಗಳು ಮಲಗುವುದಾದರೆ ಪತಿಯಲ್ಲಿ ಜೀವ, ತತ್ವೇಶ ದೇವತೆ, ವಾಯುದೇವರು, ನಾರಾಯಣದೇವರು. ಪತ್ನಿಯಲ್ಲಿ ಜೀವ ತತ್ವೇಶ ದೇವತಾಪತ್ನಿ, ಭಾರತೀದೇವಿಯವರು ಲಕ್ಷ್ಮೀದೇವಿಯವರು ಇದ್ದು ವಿಹಾರಮಾಡುತ್ತಾರೆಂದು ಚಿಂತನೆಮಾಡಬೇಕು. ಎಂದರೆ ಲಕ್ಷ್ಮೀನಾರಾಯಣರು ವಿಹಾರ ಮಾಡಿದ ಮೇಲೆ ಪ್ರಸಾದರೂಪವಾಗಿ ವಾಯುಭಾರತೀದೇವಿಯವರು ವಿಹಾರಮಾಡಿದ ಮೇಲೆ ಪ್ರಸಾದ ರೂಪವಾಗಿ ತತ್ತ್ವೇಶ ದೇವತಾ ದಂಪತಿಗಳು ವಿಹಾರ ಮಾಡಿದ ಮೇಲೆ ಪ್ರಸಾದ ರೂಪವಾಗಿ ನಮಗೆ ಸುಖವಾಗುತ್ತದೆ ಎಂದು ಚಿಂತನೆಮಾಡಬೇಕು. ಇದರಿಂದ ಸುಪ್ಪತ್ತಿಗೆ ಮೇಲೆ ಮಲಗಿ ವಿಹಾರ ಮಾಡಿದ್ದೂ ಕೂಡ ಮಹಾಯಜ್ಞ ಹರಿಪೂಜೆ ಎನಿಸಿಕೊಳ್ಳುತ್ತದೆ.

ಗೋಣಿಚೀಲದ ಮೇಲೆ ಅಥವಾ ಚಾಪೆಯ ಮೇಲೆ ಒಂಟಿಯಾಗಿ ಮಲಗಿಕೊಳ್ಳುವಾಗ ಆಗಲೂ ಕೂಡ ಆ ಪರಿಸರಕ್ಕೆ ಸರಿಯಾಗಿ ಅಲ್ಲಿ ಚಿಂತನೆ ಮಾಡಬೇಕು. ಸುಪ್ಪತ್ತಿಗೆಯ ಮೇಲೆ ಮಲಗಿದ್ದಾಗ, ತುಂಬಾ ಹಿಗ್ಗಿ ಹೀರೇಕಾಯಿಯಾಗದೆ, ಗೋಣಿಚೀಲದ ಮೇಲೆ ಮಲಗಿದಾಗ ಸೊರಗಿ ಸೋರೇಕಾಯಿ ಆಗದೆ ಎರಡನ್ನೂ ಭಗವಂತ ಕೊಟ್ಟ ಮಹಾಪ್ರಸಾದ ಎಂದು ಅನುಭವಿಸುವ ಸ್ವಭಾವ ಬೆಳೆಸಿಕೊಳ್ಳಬೇಕು. ಇದರಿಂದ ಸುಖ, ದುಃಖಗಳು ಆದಾಗ ಮನಸ್ಸಿನಲ್ಲಿ ವಿಕಾರಗೊಳ್ಳದೇ ಸಮಾಧಾನ ಸ್ಥಿತಿಯಲ್ಲಿ ಇರುವ ಅಭ್ಯಾಸವಾಗುತ್ತದೆ. ಇದೇ ಸಾಧನೆಗೆ ದಾರಿಗಳು. ಪ್ರಾಜ್ಞನಾಮಕ ಪರಮಾತ್ಮನ ಆಲಿಂಗನ ಜೀವನಿಗೆ ಆದರೆ ಆಗ ಸುಖ ನಿದ್ರೆ ಬರುತ್ತದೆ. ಬೆಳಗಾಗೆದ್ದ ಮೇಲೆ ಈ ಸುಖವನ್ನು ಶ್ರೀಹರಿಗೆ ಅರ್ಪಿಸುವುದು.

# ಉಪಸಂಹಾರ

ಉಪಕ್ರಮಉಪಸಂಹಾರವೇ ಮೊದಲಾದ ತಾತ್ಪರ್ಯಲಿಂಗಗಳಲ್ಲಿ ಉತ್ತರೋತ್ತರ ಬಲಿಯಸೀ ಎಂಬಂತೆ ಪೂರ್ವೋಕ್ತ ಅಭಿಪ್ರಾಯಗಳ ತಾತ್ಪರ್ಯ ರೂಪವಾದ ನಿರ್ಣಯ ನಿರೂಪಣ. ಹುಚ್ಚು ಮುಂಡೆ ಮದುವೆಯಲ್ಲಿ ಉಂಡೋನೇ ಜಾಣ. ಎಂದರೆ ಅರಾಜಕವಾದ ಈ ಅಧರ್ಮದ ಕಾಲದಲ್ಲಿ ಸತ್‌ಸಾಧನೆ ಮಾಡಿಕೊಂಡು ಹೋಗುವವನೇ ಜಾಣ. ಆದುದರಿಂದ ಸಕಲ ಲೌಕಿಕ, ವೈದಿಕ, ಕೆಟ್ಟ ವಿಚಾರಗಳಿಗೆ ಸಂಬಂಧಿಸಿದ (ಕೇಳುವುದು, ನೋಡುವುದು, ಸಹವಾಸ ಮಾಡುವುದು, ತಿನ್ನುವುದು) ಮುಂತಾದ ಕೆಟ್ಟ ಗುಣಗಳನ್ನು ಹೊಂದುವುದೇ ಕಲಿಯುಗ. ಇದನ್ನು ಬಿಡಬೇಕಾದುದು ಸಾಧನೆ ಮಾಡುವವರಿಗೆ ಅತಿ ಮುಖ್ಯವಾದುದು.

ಸಕಲ ಲೌಕಿಕ, ವೈದಿಕ ಒಳ್ಳೆಯ ವಿಚಾರಗಳಿಗೆ ಸಂಬಂಧಿಸಿದ (ಕೇಳುವುದು, ನೋಡುವುದು, ಸಹವಾಸ ಮಾಡುವುದು, ತಿನ್ನುವುದು) ಮುಂತಾದ ಒಳ್ಳೆ ಗುಣಗಳನ್ನು ಹೊಂದುವುದೇ ಕೃತಯುಗ ಆದುದರಿಂದ ಕೆಟ್ಟದ್ದನ್ನು ಹೊರಗೆ ಹಾಕಿದ ಹೊರತು ಒಳ್ಳೆಯದನ್ನು ಒಳಗೆ ಸೇರಿಸಿಕೊಳ್ಳಲು ಸಾಧ್ಯವಿಲ್ಲ. ಆದುದರಿಂದ ಆದಷ್ಟು ಪ್ರಯತ್ನ ಪಟ್ಟು ಕೆಟ್ಟದ್ದನ್ನು ಆಚೆಗೆ ಹಾಕಿ ಒಳ್ಳೆಯದನ್ನು ಸೇರಿಸಿಕೊಳ್ಳುವುದೇ ಮುಖ್ಯವಾದ ಕರ್ತವ್ಯ.

ದುರಾಚಾರಗಳನ್ನು ತ್ಯಜಿಸಿ ಮೃತಿಕಾ ಶೌಚ, ತ್ರಿಕಾಲ ಸಂಧ್ಯಾವಂದನೆ, ದೇವರಪೂಜಾ, ನೇವೇದ್ಯ ಭೋಜನ, ಏಕಾದಶೀ ಉಪವಾಸ, ತಿನ್ನಬಾರದ್ದನ್ನು ತಿನ್ನದೇ, ತಿನ್ನಬೇಕಾದ್ದನ್ನು ತಿನ್ನುತ್ತಾ ಶ್ರೀಮಧ್ವಶಾಸ್ತ್ರ ಶ್ರವಣ ಮಾಡುವುದು, ಸಾಧ್ಯವಾದಷ್ಟನ್ನು ಮಟ್ಟಿಗೆ ಶ್ರೀರಾಘವೇಂದ್ರಸ್ತೋತ್ರ, ಶ್ರೀಹರಿವಾಯುಸ್ತುತಿ, ಶ್ರೀಮಣಿಮಂಜರೀ, ಶ್ರೀಸುಮಧ್ವವಿಜಯ, ಶ್ರೀಮಹಾಭಾರತ ತಾತ್ಪರ್ಯ ನಿರ್ಣಯ, ತತ್ತ್ವಸಂಖ್ಯಾನ, ಇಷ್ಟು ಗ್ರಂಥಗಳನ್ನಾದರೂ ಪಾಠ ಮಾಡಬೇಕು, ಪರಮತಖಂಡನ ಪೂರ್ವಕ ಸ್ವಮತಸ್ಥಾಪನದೀಕ್ಷಾ ಬದ್ಧರಾಗಬೇಕು. (ಸಾಧ್ಯವಿಲ್ಲದಿದ್ದರೆ ಶ್ರವಣವನ್ನಾದರೂ ಮಾಡಬೇಕು, ಪಾರಾಯಣ ಮಾಡಬೇಕು). ವ್ಯರ್ಥವಾಗಿ ಕಳೆಯದೇ ಆದಷ್ಟು ಲೋಕ ವ್ಯವಹಾರವನ್ನು ಕಡಿಮೆ ಮಾಡಿಕೊಂಡು ಸಜ್ಜನರ ಸಹವಾಸದಿಂದ ಬಾಳಿಕೊಂಡು ಪರರಿಗೆ ಪೀಡೆ ಮಾಡದೇ, ಕೇಡನ್ನು ಬಯಸದೇ, ಹರಿನಾಮಸ್ಮರಣೆ ಮಾಡಿಕೊಂಡು, ಅಂತ್ಯ ಕಾಲಕ್ಕೆ ಭಗವಂತನ ಸ್ಮರಣೆಯು ಸಿಗುವಂತೆ ಪ್ರಾರ್ಥಿಸಿಕೊಳ್ಳುವುದು.

ತದ್ರೂಪ, ತನ್ನಾಮ, ತತ್ತೇಜ, ತದ್ಭಿನ್ನ, ತಂ ಶ್ರೀನಿವಾಸಂ ನಮಾಮಿ ಎಂಬ ಮಂತ್ರವನ್ನು ಎಂದೆಂದು ಎಲ್ಲೆಲ್ಲೂ ಮರೆಯದೇ ಸ್ಮರಿಸಿ.

ಆಗ = ವ್ಯಾಸೋಚ್ಛಿಷ್ಟಂ ಜಗತ್ಸರ್ವಂ, ಎಲ್ಲವೂ ಶ್ರೀವೇದವ್ಯಾಸದೇವರಿಂದ ಬಂದದ್ದು ಎಂದರ್ಥ.
ಈಗ = ಗ್ಯಾಸೋಚ್ಛಿಷ್ಟಂ ಜಗತ್ಸರ್ವಂ, ಎಲ್ಲೆಲ್ಲೂ ಗ್ಯಾಸಿನ ಎಂಜಲೇ ಆಗಿದೆ ಎಂದ ಅರ್ಥ.

## ಬ್ರಾಹ್ಮಣರು ತಿನ್ನಬಾರದ ಪದಾರ್ಥಗಳು (ಬ್ರಾಹ್ಮಣ್ಯ ನಾಶಮಾಡುವುದು)

ಈರುಳ್ಳಿ, ಬೆಳ್ಳುಳ್ಳಿ, ಬದನೆಕಾಯಿ, ಟೊಮೊಟೋ, ಕೋಸುಗೆಡ್ಡೆ, ನವಿಲುಕೋಸು, ಬೀಟ್ರೂಟು, ನುಗ್ಗೇಕಾಯಿ, ಅವರೆಕಾಯಿ, ಮೂಲಂಗಿ, ಕ್ಯಾರೆಟ್, ತಂಗಳನ್ನ, ಹೋಟೆಲ್ ಪದಾರ್ಥಗಳು, ಗ್ಯಾಸ್‌ನಲ್ಲಿ ಮಾಡಿದ ಪದಾರ್ಥಗಳು. ಬ್ರಾಹ್ಮಣೇತರರು ನೀರಿನಿಂದ ಮತ್ತು ತೈಲದಿಂದ ಪಕ್ವ ಮಾಡಿದ ಪದಾರ್ಥಗಳು, ಮಾಂಸ, ಮಧ್ಯ, ಹೊಗೆಸೊಪ್ಪು, ಸಿಗರೇಟು, ಬೀಡಿ, ನಶ್ಯ, ಕಾಫಿ, ಟೀ ಮುಂತಾದವುಗಳು.

# ಸಲಹೆ

ಅಹುದಾದರಹುದೆನ್ನಿ, ಇಲ್ಲವಾದರೆಇಲ್ಲವೆನ್ನಿ, ತಿಳಿದವರು ಪೇಳಿದನು । - ಶ್ರೀಕನಕದಾಸರವಾಣಿ

ಸನ್ಯಾಸಾಶ್ರಮ ತೆಗೆದುಕೊಳ್ಳುವವರಿಗೆ ಇರಬೇಕಾದ ಅಧಿಕಾರ. ಸಂಸಾರದ ವಿವಿಧ ಕ್ಲೇಷಗಳನ್ನು ಅನುಭವಿಸಿ ನಿಜವಾದ ವೈರಾಗ್ಯ ಹೊಂದಿರಬೇಕು. ಬಾಲ್ಯದಲ್ಲಿ ಬಂದ ವೈರಾಗ್ಯ ಸ್ಥಿರವಾದುದು ಎಂದು ನಂಬಲಾಗುವುದಿಲ್ಲ. ಆ ವೈರಾಗ್ಯ ಪುನಃ ವಾಪಸ್ಸು ಹೋಗಬಹುದು. ಆದ್ದರಿಂದ ೫೦ ವರ್ಷವಾದರೂ ವಯಸ್ಸಾಗಿರಬೇಕು ಸದಾಚಾರ ಸಂಪನ್ನನಾಗಿದ್ದು, ದೇಹಶುದ್ಧಿ ಇರಬೇಕು. ಮೈಸೂರು ಪಾಕ್ ಕಂಡರೆ ಬಾಯಲ್ಲಿ ನೀರೂರಬಾರದು. ಹುಚ್ಚುಚ್ಚಾಗಿ ಮನಸ್ಸಿಗೆ ಬಂದಂತೆ ಮಾತನಾಡದೇ ಅಧಿಕೃತವಾಗಿ ಮಾತನಾಡುವ ಅಭ್ಯಾಸ ಇರಬೇಕು. ಹೆಂಗಸರನ್ನು ನೋಡಿದರೆ ಮನಸ್ಸಿನ ವಿಕಾರವಾಗಬಾರದು. ಹಣ ನೋಡಿದರೆ ಆಸೆ ಬರಬಾರದು. ಈ ಮೂರರಲ್ಲಿ ಗೆದ್ದರೆ ಆ ಸನ್ಯಾಸ ಸರಿಯಾಗಿರುತ್ತದೆ. (ಇಲ್ಲದಿದ್ದರೆ ಅದು ತೂತಿನ ಪಾತ್ರೆಯಲ್ಲಿ ನೀರು ಹಾಕಿದಂತೆ). ಇಂದ್ರಿಯ ನಿಗ್ರಹದ ಪರಾಕಾಷ್ಟತೆಯನ್ನು ಪೆನಗೊಂಡೆ ಶ್ರೀವೇದವ್ಯಾಸತೀರ್ಥರ ಕಥೆಯಲ್ಲಿ ಕಾಣಬಹುದು. ಸನ್ಯಾಸಾಶ್ರಮ ತೆಗೆದುಕೊಳ್ಳುವವರಿಗೆ ಶ್ರೀಮಣಿಮಂಜರೀಯಿಂದ ಕ್ರಮವಾಗಿ ಶ್ರೀಮನ್ನ್ಯಾಯಸುಧಾವರೆಗೆ ಪಾಠ ಆಗಿರಬೇಕು. ಪರಮತ ಖಂಡನ ಪೂರ್ವಕ ಸ್ವಮತ ಸ್ಥಾಪನ ದೀಕ್ಷೆಯಿರಬೇಕು. ಸನ್ಯಾಸಾಶ್ರಮ ತೆಗೆದುಕೊಳ್ಳುವವರು ಸನ್ಯಾಸಾಶ್ರಮ ಕೊಡುವವರ ಹಿಂದಿನ ಆಶ್ರಮದ ರಕ್ತಸಂಬಂಧಿಗಳಾಗಿರಬಾರದು ವಿಶೇಷವಾಗಿ ಹಡೆದ ಮಕ್ಕಳಾಗಿರಬಾರದು. ಇದು ವ್ಯಾಮೋಹಕ್ಕೆ ಕಾರಣವಾಗುತ್ತದೆ. 'ಮಂಡೆ ಬೋಳಾದರೆ ಮನವು ಬೋಳಾಯಿತೇ' ವಿಧಿ ಪೂರ್ವಕವಾಗಿ ಎಲ್ಲಾ ಕರ್ಮಗಳನ್ನು ಮಾಡಿಕೊಂಡು ಆಸೆಗಳನ್ನು ಬಿಟ್ಟು ಸನ್ಯಾಸಾಶ್ರಮ ತೆಗೆದುಕೊಂಡು ಹಿಂದಿನ ಆಶ್ರಮದ ಎಲ್ಲಾ ಸಂಬಂಧಗಳನ್ನು ಕಳೆದುಕೊಂಡು ಸರ್ವಸಂಗ ಪರಿತ್ಯಾಗ ಮಾಡಿ ಹೊಸ ಜನ್ಮ ಪ್ರಾಪ್ತಿಯಾದಂತೆ ಅಭಿಪ್ರಾಯ. ಆಶ್ರಮದ ತೆಗೆದುಕೊಳ್ಳುವುದಕ್ಕೆ ಮುಂಚೆ ಹೆಂಡತಿ ಒಪ್ಪಿಗೆಯನ್ನು ಪಡೆದಿರಬೇಕು. ಆಸ್ತಿ-ಪಾಸ್ತಿಗಳನ್ನೆಲ್ಲಾ ಹೆಂಡತಿ ಮಕ್ಕಳಿಗೆ ಒಪ್ಪಿಸಿರಬೇಕು. ಪೆನ್ಷನ್ ಬರುತ್ತಿದ್ದರೆ ಬೇರೆಯವರಿಗೆ ಬರೆದುಕೊಟ್ಟಿರಬೇಕು. ಹಿಂದಿನ ಆಶ್ರಮದ ಎಲ್ಲಾ ವ್ಯಾಮೋಹಗಳನ್ನು ಮನಸ್ಸಿನಿಂದ ಬಿಡಬೇಕು. ಇದು ಅಧಿಕಾರ ಪ್ರಾಪ್ತಿಯ ಅರ್ಥ. ಸನ್ಯಾಸಾಶ್ರಮ ತೆಗೆದುಕೊಳ್ಳಬಹುದು ಅದರಲ್ಲಿ ಬಹಳ ಕಷ್ಟವಿದೆ. ಹಸಿವು ಬಾಯಾರಿಕೆ, ಚಳಿ, ಮಳೆ, ಬಿಸಿಲು, ರೋಗದ ಕಾಟ, ಅವಮಾನದ ಅನುಭವ, ಇವುಗಳನ್ನೆಲ್ಲಾ ಸಹಿಸತಕ್ಕಂತ ದೃಢ ಮನಸ್ಸಿರಬೇಕು. ಬೌದ್ಧಾವತಾರದಂತೆ ಬೀದಿಯಲ್ಲಿ ನಡೆದುಕೊಂಡು ಬರುವಂಥ ದೇಹಾಭಿಮಾನ ಬಿಟ್ಟಿರಬೇಕು. ಇದೆಲ್ಲಾ ಸಿದ್ಧವಾಗಿದ್ದರೆ ಸನ್ಯಾಸಾಶ್ರಮ ಚೆನ್ನಾಗಿ ನಡೆಯುತ್ತದೆ. ತಾವು ಉದ್ಧಾರವಾಗಿ ಜಗತ್ತನ್ನೇ ಉದ್ಧಾರ ಮಾಡುತ್ತಾರೆ. ಇಂತಹ ಮನಸ್ಸನ್ನು ಶ್ರೀಜಯತೀರ್ಥರ ಚರಿತ್ರೆಯಲ್ಲಿ ಕಾಣಬಹುದು. ಸನ್ಯಾಶ್ರಮ ಬ್ರಷ್ಟರಾದರೆ ತಾವು ಹಾಳಾಗಿ, ಜಗತ್ತನ್ನು ಹಾಳುಮಾಡುತ್ತಾರೆ.

ಮಠದ ಆಸ್ತಿ ಯಾರದು? ಸ್ವಾಮಿಗಳ ಸ್ವಂತವೇ? ಸ್ವಾಮಿಗಳವರ ಕೌಪೀನ, ದಂಡಕಾಷ್ಟ, ಮೊದಲಾದವುಗಳ ಮೇಲೂ ವ್ಯಾಮೋಹ ಇರಬಾರದು. ಎಂದಮೇಲೆ ಮಠದ ಆಸ್ತಿ ಪಾಸ್ತಿಯ ಮೇಲೆ ಸ್ವಾಭಿಮಾನ ಇರುವುದಕ್ಕೆ ಹೇಗೆ ಸಾಧ್ಯ? ಪರಂಪರೆಯಿಂದ ಬಂದಿರುವ ಆಸ್ತಿಗೆ ಸರಿಯಾದ ರಕ್ಷಕರಾಗಿ ಮುಂದಿನವರಿಗೆ ಒಪ್ಪಿಸತಕ್ಕ ತಾತ್ಕಾಲಿಕ ಅಧಿಕಾರಿಗಳು ಹಾಗಾದರೆ ಸ್ವಾಮಿಗಳ ಕೆಲಸವೇನು? ಸ್ವಾಮಿಗಳು ಸರ್ವಸಂಗಪರಿತ್ಯಾಗ ಮಾಡುವುದರಿಂದ ಅವರು ತಮ್ಮ ಸ್ನಾನ ಜಪ-ತಪ-ಪೂಜಾ-ಪಾಠ-ಪ್ರವಚನ ಗ್ರಂಥ ನಿರ್ಮಾಣ, ಪರಮತಖಂಡನ ಪೂರ್ವಕ ಸ್ವಮತಸ್ಥಾಪನ ತನ್ಮೂಲಕ ವಿಷ್ಣು ಸರ್ವೋತ್ತಮತ್ವವನ್ನು ಸದಾ ಪ್ರತಿಪಾದನೆ ಮಾಡುವುದೇ ಹೊರತು ಬೇರೆ ಏನೂ ಕೆಲಸವು ಇಲ್ಲ. ಇವರು ವೇದಾಂತ ಸಾಮ್ರಾಜ್ಯದ ಚಕ್ರವರ್ತಿಗಳು. ಅನುಭವಸ್ಥ, ಸದ್‌ಗೃಹಸ್ಥರು ಸ್ವಾಮಿಗಳವರಿಗೆ ಮಂತ್ರಿಗಳಂತೆ ಸಲಹೆಗಾರರಾಗಿರುತ್ತಾರೆ. ಮಠದ ಆಸ್ತಿ-ಪಾಸ್ತಿ, ದುಡ್ಡು ಕಾಸು, ಸ್ವೀಕಾರ, ವಿನಿಯೋಗ ಮುಂತಾದ ಖರ್ಚು ವೆಚ್ಚಗಳೆಲ್ಲಾ ಹಾಗೂ ಆಡಳಿತದ ಭಾಗವನ್ನು ಈ ಗೃಹಸ್ಥರು ಒಪ್ಪಿಕೊಂಡು ನಂಬಿಕೆಯಿಂದ ಕೆಲಸ ಮಾಡುವುದು. ಇದರಿಂದ ಸ್ವಾಮಿಗಳವರಿಗೆ ನಿಶ್ಚಿಂತರಾಗಿ ತಮ್ಮ ತಪಸ್ಸನ್ನು ಮಾಡಿಕೊಳ್ಳಲು ಅವಕಾಶವಾಗುತ್ತದೆ. ಉಪಕುಲಪತಿಗಳು ಹಾಗೂ ಉಪನ್ಯಾಸಕರು ಸೇನಾಧಿಪತಿಗಳಿದ್ದಂತೆ ಇವರ ಉಪನ್ಯಾಸದಿಂದ ಜನರು ಪ್ರಭಾವಿತರಾಗುತ್ತಾರೆ. ಮಠದ ಪಂಡಿತರು ಮಲ್ಲರಂತೆ ಅಥವಾ ಸೈನಿಕರಂತೆ ವಾದಿಗಳು ಬಂದಾಗ ಪರಮತ ಖಂಡನ ಪೂರ್ವಕ,

ಸ್ವಮತ ಸ್ಥಾಪನ ಮಾಡಿ ಜಯಗಳಿಸಬೇಕು. ಅದರಂತೆ ಶಿಷ್ಯ ವರ್ಗವನ್ನು ತಯಾರು ಮಾಡಬೇಕು. ಇವರಿಗೆ ಇದನ್ನು ಬಿಟ್ಟು ಬೇರೆ ಯಾವ ಕೆಲಸವೂ ಮಾಡಬಾರದು. ಇದರಿಂದ ಮಠದ ಆಡಳಿತವು ಯಾವ ಆಕ್ಷೇಪಣೆಗಳಿಗೂ ಅವಕಾಶವಾಗದಂತೆ ಸುಗಮವಾಗಿ ಸಾರ್ಥಕವಾಗುತ್ತದೆ. ಒಳ-ಜಗಳಗಳನ್ನು ಪೇಪರ್, ಪೋಲೀಸ್, ನ್ಯಾಯಸ್ಥಾನದವರೆಗೆ ಹೋಗದಂತೆ ಅಲ್ಲೇ ಪರಿಹಾರ ಮಾಡಿಕೊಳ್ಳುವುದು ಉತ್ತಮ. ಪೂರ್ವಾಶ್ರಮದ ಮಕ್ಕಳನ್ನು ಮಠದಲ್ಲಿ ಉದ್ಯೋಗಕ್ಕೆ ಸೇರಿಸಿಕೊಳ್ಳಬಾರದು. ಮಠ, ಛತ್ರ, ದೇವಸ್ಥಾನ, ಬ್ರಾಹ್ಮಣರ ಸ್ವತ್ತು ಬೆಂಕಿಯಿದ್ದಂತೆ ಸುಟ್ಟು ಬಿಡುತ್ತದೆ. ತೀರ್ಥ, ಪ್ರಸಾದ ಎರಡೇ ಮೇಲಿನ ಅಧಿಷ್ಠಾನಗಳಿಂದ ಸ್ವೀಕಾರಕ್ಕೆ ಅರ್ಹವಾದುದು. ಹಾಗಿಲ್ಲದೇ ವಿವಿಧ ಯಾವ ರೂಪದಲ್ಲಿಯೂ ಮಠದ ಸ್ವತ್ತನ್ನು ಸ್ವೀಕರಿಸಿದರೆ ನರಕಪ್ರಾಪ್ತಿ ಮತ್ತು ಮುಂದಿನ ಜನ್ಮದಲ್ಲಿ ಬೆಕ್ಕು, ನಾಯಿ ಜನ್ಮಗಳು ಪ್ರಾಪ್ತಿಯಾಗುತ್ತದೆ. (ಪುರಾಣದ ಆಧಾರ)

ಮಠಗಳಿಂದ ಸಾಮಾನ್ಯ ಜನಗಳಿಗೆ ಆಗಬೇಕಾದ ಪ್ರಯೋಜನಗಳು - ಪಾದಪೂಜೆ, ಭಿಕ್ಷಾ ಮುಂತಾದವುಗಳಿಂದ ಹಣ ಸಂಗ್ರಹ ಆಗುತ್ತಿದೆ. ಆದರೆ ಅದರ ವಿನಿಯೋಗ ಹೇಗೆ? ಅಗ್ರಹಾರಗಳನ್ನು ಕಟ್ಟಿಸಿ, ಬಡವರಾದ ವಿದ್ವಾಂಸರಿಗೆ, ಪಂಡಿತರಿಗೆ ಹಾಗೂ ಗೃಹಸ್ಥರಿಗೆ ಉಚಿತವಾಗಿ ವಾಸ ಮಾಡಲು ಅವಕಾಶ ಕೊಡಬೇಕು. ಅಲ್ಲಿ ವಾಸ ಮಾಡುವವರು ತಮ್ಮ ಪ್ರತಿನಿತ್ಯದ ಆಹ್ನಿಕಗಳನ್ನು ಮಾಡಿಕೊಂಡು ಪಾಠ-ಪ್ರವಚನಗಳನ್ನು ಮಾಡಿಕೊಂಡು ಸಾಧನ ಮಾಡಿಕೊಳ್ಳಲು ಅವಕಾಶ ಕೊಡಬೇಕು. ಗೃಹಗಳನ್ನು ಅವರಿಗೇ ದಾನ ಮಾಡಬಾರದು. ದಾನ ಮಾಡಿದರೆ ಅವರು ಮಾರಿಕೊಂಡು ಹೋಗಬಹುದು. ಅದರ ಬದಲು ವಾಸ ಮಾಡುವುದಕ್ಕೆ ಉಚಿತವಾಗಿ ಕೊಟ್ಟರೆ ಉತ್ತಮವಾದಂಥ ಸದ್‌ಬ್ರಾಹ್ಮಣರ ಕೇರಿಯನ್ನು ಮಾಡಿದಂತಾಗುತ್ತದೆ. ಸಾಮಾನ್ಯ ಜನರಿಗೆ ಶ್ರೀಮಣಿಮಂಜರೀ, ಶ್ರೀಸುಮಧ್ವವಿಜಯ, ಎರಡು ಗ್ರಂಥಗಳ ಕಥೆಯನ್ನು ಪುಸ್ತಕ (ಗದ್ಯ ರೂಪದಲ್ಲಿ) ಮಾಡಿ ಪ್ರತಿ ವೈಷ್ಣವರ ಮನೆಗೂ ಉಚಿತವಾಗಿ ಹಂಚಿ, ಅದನ್ನು ಓದಿ, ಶ್ರೀಮಧ್ವಮತದ ಮಹಿಮೆಯನ್ನು ಅರಿತುಕೊಳ್ಳಲು ಅವಕಾಶ ಮಾಡಿಕೊಡಬೇಕು. ಮತ್ತೆ ಪ್ರತಿ ಮನೆಯಲ್ಲೂ ಸ್ನಾನ, ಸಂಧ್ಯಾವಂದನೆ, ದೇವರ ಪೂಜಾ, ಏಕಾದಶೀ ಉಪವಾಸ, ಮುಂತಾದ ಸತ್ಕರ್ಮಾನುಷ್ಠಾನ ಮಾಡುವಂತೆ ಬಲವಂತವಾಗಿ ಉಪಾಯವಾಗಿ ಅವರನ್ನು ಸನ್ಮಾರ್ಗಕ್ಕೆ ತರಲು ವ್ಯವಸ್ಥೆ ಮಾಡಬೇಕು. ಇದು ಅತ್ಯಾವಶ್ಯಕವಾದ ವಿಚಾರವಾಗಿದೆ. ಈ ರೀತಿ ಮಾಡಿದರೆ ಧರ್ಮವನ್ನು ಉಳಿಸಿದಂತಾಗುತ್ತದೆ.

## ನಾಟಕ

ಕಲಿಯುಗದಲ್ಲಿ ಬ್ರಾಹ್ಮಣರು 'ಸರ್ವಕರ್ಮ ಬಹಿಷ್ಕೃತಃ' ಎಂಬ ಪುರಾಣ ವಚನದಂತೆ ಅಧಿಕಾರ ಕಳೆದುಕೊಂಡಿರುತ್ತಾರೆ, ಮತ್ತು ಶೂದ್ರರಂತೆ ಇರುತ್ತಾರೆ. ಹಸುಗಳು ಮೇಕೆಯಂತೆ ಇರುತ್ತದೆ. ಆಯಸ್ಸು ಹ್ರಾಸವಾಗುತ್ತದೆ. ಕುಲಧರ್ಮಗಳೆಲ್ಲ ಕೆಡುತ್ತದೆ. ಇತ್ಯಾದಿ ಇನ್ನೂ ಅನೇಕ ವಿಚಾರಗಳು ಪುರಾಣೋಕ್ತವಾಗಿದೆ. ಸಂಕರಾದಿಗಳು ಅವತರಿಸಿ, ಪದಾರ್ಥದಿಂದ ಹಿಡಿದು ಪದದ ಅರ್ಥದವರೆಗೆ ಸಾಂಕರ್ಯ ಮಾಡಿ ಎಲ್ಲಾ ಕುಲಗೆಡಿಸಿ ಹಾಳು ಮಾಡಿರುತ್ತಾರೆ. ತಿಪ್ಪೆ ಸಾರಿಸಿ ಅದರ ಮೇಲೆ ರಂಗೋಲಿ ಹಾಕಿದ ರಂಗಭೂಮಿಯ ಮೇಲೆ ನವರಂಗಾಟಗಳಾದ ಮಡಿ, ಮೈಲ್ಗೆ, ಆಹ್ನೀಕ, ಪಾಠ, ಪ್ರವಚನ, ಪೂಜೆ, ಉಪದೇಶ, ಆಚಾರ್ಯರು, ಪಂಡಿತರು, ದಾಸರು, ಸ್ವಾಮಿಗಳು ಇತ್ಯಾದಿಗಳ ಮೂಲಕ ಒಂದು ತರಹದ ಧರ್ಮ ನಡೆಯುತ್ತಿದೆ. ಇದು ಪ್ರಯೋಜನವೇ? ಅಥವಾ ಪ್ರಯೋಜನವಿಲ್ಲವೇ? ಎಂಬುದರ ಬಗ್ಗೆ ಯೋಚನೆ ಮಾಡಿದರೆ ಅದು ಹೀಗೆ ಎಂದು ಅಭಿಪ್ರಾಯ. ನಾವು ಶುದ್ಧವಾಗಿರಬೇಕಾದರೆ ನಮ್ಮ ಹಿಂದಿನ ಐದನೇ ತಲೆಯವರು ಶುದ್ಧವಾಗಿರಬೇಕು. ಅದು ನಮಗೆ ಗೊತ್ತಿಲ್ಲ. ನಾಟಕದಲ್ಲಿ ಪಾತ್ರವಹಿಸಿ ರಸಾಭಾಸವಾಗದೇ ಉತ್ತಮವಾಗಿ ಪ್ರದರ್ಶನ ನೀಡಿದರೆ ಪ್ರೇಕ್ಷಕರು ಉತ್ತಮವಾಗಿ ನಾಟಕ ಆಡಿದರು ಎಂದು ಸಂತೋಷಪಡುತ್ತಾರೆ ಅದರಂತೆ ನಾವು ಸಹ ಅಧಿಕಾರ ಇದೆಯೋ, ಇಲ್ಲವೋ ಆದರೂ ಸಹ ಪರಂಪರೆಯಿಂದ ಬಂದ ಕರ್ಮಾನುಷ್ಠಾನವನ್ನು ಇದ್ದಿದ್ದರಲ್ಲಿ ಸಾಚಾತನದಿಂದ ಕಪಟನಾಟಕ ಸೂತ್ರದಾರಿಯಾದ ಶ್ರೀಭೀಮಸೇನ ದೇವರಿಂದ ಸೇವಿತನಾದ ಶ್ರೀಕೃಷ್ಣಪರಮಾತ್ಮನ ಪ್ರೀತ್ಯರ್ಥವಾಗಿ ಅವನ ಪ್ರೇರಣೆಯಂತೆ ಮಾಡುತ್ತಿದ್ದೇವೆ ಎಂದು ನಂಬಿಕೊಂಡು ಪ್ರವರ್ತಿಸುವುದು. ಇದರಿಂದ ಪರಮಾತ್ಮನು ಪ್ರೀತನಾಗಿ ನಿಮಗೆ ಅನುಗ್ರಹ ಮಾಡುತ್ತಾನೆ. ಈ ಅಭಿಪ್ರಾಯವನ್ನು ನಮ್ಮ ಗುರುಗಳಾದ ಯಲಮೇಲಿ ವಾಸುದೇವಾಚಾರ್ಯರು ಹೇಳುತ್ತಿದ್ದುದನ್ನು ನಿರೂಪಿಸಿರುತ್ತೇನೆ.

# ಕಲಿಪುರುಷನ ಲೀಲಾ ವಿಲಾಸ

ಕುತೂಹಲ - ಕೋಲಾಹಲ - ಹಾಲಾಹಲ - ಆಧುನಿಕ ಸಂಸಾರ ಸಾಗರ - ಹಾಲಾಹಲ ವಿಹಾರ - ಬೀದಿಯಲ್ಲಿ ಬೈಸಿಕಲ್ಲು ಮೇಲೆ ಹೋಗುವಾಗ ಪರಸ್ಪರ ಅಭಿಮುಖವಾಗಿ ಬಂದ ಹುಡುಗ-ಹುಡುಗಿ ಡಿಕ್ಕಿ ಹೊಡೆದರ ಕಾರಣದಿಂದ ಇಬ್ಬರಿಗೂ ಲಗ್ನ. ಕುಲ, ಗೋತ್ರ, ಶೀಲ ಒಂದು ಗೊತ್ತಿಲ್ಲ. ಅನಂತರ ಮನೆಯಲ್ಲಿರುವ ವೃದ್ಧರಾದ ತಂದೆ-ತಾಯಿಗಳಿಗೆ ವೃದ್ಧ ಶ್ರಮದಿಂದಿರುವ ವೃದ್ಧಾಶ್ರಮಕ್ಕೆ ಗಡಿಪಾರು. ಹುಟ್ಟುವುದು ಸಾಯುವುದು ಆಸ್ಪತ್ರೆಯಲ್ಲಿ - ಮದುವೆ ಛತ್ರದಲ್ಲಿ - ರೋಗ ಬಂದರೆ ನರಸಿಂಗನ ಹೋಮದಲ್ಲಿ ವಾಸ, ಅಲ್ಲಿ ನರಸ್ ಅಮ್ಮನ ತೀರ್ಥ ಪ್ರಾಶನ - ಶ್ರಾದ್ಧ ರಾಯರಮಠದಲ್ಲಿ, ಮನೆಯಲ್ಲಿ ಸ್ವಾಹಾ, ಸ್ವಧಾ, ವೇದಪಾರಾಯಣ, ಹರಿನಾಮ ಸಂಕೀರ್ತನ ಯಾವುದೂ ಇಲ್ಲ ಹಾಗೂ ಬ್ರಾಹ್ಮಣರ ಪಾದದೂಳಿ ಬರುವಂತೆಯೇ ಇಲ್ಲ. ಗಂಡನಿಗೆ ಪೂರ್ವ ದಿಕ್ಕಿನಲ್ಲಿ ಉದ್ಯೋಗ, ಹೆಂಡತಿಗೆ ಪಶ್ಚಿಮ ದಿಕ್ಕಿನಲ್ಲಿ ಉದ್ಯೋಗ, ಬೆಳಿಗ್ಗೆನಿಂದ ಸಂಜೆಯವರೆಗೂ ಮನೆಗೆ ಬೀಗ, ಸಾಯಂಕಾಲದ ವೇಳೆ ಇಬ್ಬರೂ ಮನೆಗೆ ಪ್ರವೇಶ. ಅನಂತರ ಊಟ, ತಿಂಡಿ, ಮಾತು-ಕತೆ, ಇತ್ಯಾದಿ. ಸಾವಿರಾರು ರೂಪಾಯಿ ಸಂಪಾದಿಸಿದರು ಮೂರು ಕಾಸಿನ ಸುಖವಿಲ್ಲ. ಖಾಯಿಲೆ ಬಂದರೆ ಬಿಸಿನೀರು ಕಾಯಿಸಿಕೊಡುವವರಿಲ್ಲ. ಹುಟ್ಟಿದ ಮಕ್ಕಳು ಶಿಶುಪಾಲನ ಕೇಂದ್ರದಲ್ಲಿ ವಾಸ. ಅಲ್ಲಿ ತಾಟಕಿ ಪೂತನಿಗೆ ಶೂರ್ಪಣಕಿ ಇವರುಗಳೇ ಮಕ್ಕಳ ರಕ್ಷಕರು ಮತ್ತು ಸಕಲ ದುರ್ವಿದ್ಯೆಗಳ ಉಪದೇಶಕರು. ಇಷ್ಟೆಲ್ಲಾ ಮಾಡಿ ಆ ಮಕ್ಕಳು ಮುಂದೆ ಶಂಡಾಮರ್ಕರ ಪಾಠಶಾಲೆಗೆ ಹೋಗಿ ತ್ರೈವರ್ಗಿಕ ವಿದ್ಯೆಯನ್ನು ಕಲಿತು (ಧರ್ಮ, ಅರ್ಥ, ಕಾಮ, ಮೋಕ್ಷದ ವಿಚಾರವೇ ಇಲ್ಲ) ಸೀಮೋಲ್ಲಂಘನೆ ಮಾಡಿ ಪರದೇಶೀಯರಾಗುತ್ತಾರೆ. ಇದೇ ಸಂಸ್ಕೃತಿಯ ಸರ್ವನಾಶ. ಏತನ್ಮಧ್ಯೆ ಅಕಸ್ಮಾತ್ ಮನೆಯಲ್ಲಿ ಹಬ್ಬ ಮಾಡಬೇಕಾದರೆ ಪ್ಲಾಸ್ಟಿಕ್ ಮಾವಿನ ಸೊಪ್ಪು, ಸ್ಟೀಲ್ ಸಂಪುಷ್ಟದಲ್ಲಿರುವ ಪ್ಲಾಸ್ಟಿಕ್ ಸಾಲಿಗ್ರಾಮಕ್ಕೆ ಅಮೇರಿಕಾದ ಬಲಮುರಿ ಶಂಖದಲ್ಲಿ ಅಭಿಷೇಕ, ಗ್ಯಾಸೋಚ್ಛಿಷ್ಟವಾದ ಭೋಜನ, ಅಮೇರಿಕ ಬ್ರಾಹ್ಮಣರ ಸಮಾರಾಧನೆ. ಇದು ವ್ಯಕ್ತಿಗಳ ಆಕ್ಷೇಪಣೆ ಎಂದು ತಿಳಿಯಬಾರದುಕಲಿಪುರುಷನಅವರಲ್ಲಿ ಸೇರಿಕೊಂಡಿರುವ ಮಹಿಮೆಯೆಂದು ತಿಳಿದುಕೊಳ್ಳಬೇಕು. ಇದೇ ಕುತೂಹಲ-ಕೋಲಾಹಲ- ಹಾಲಾಹಲ. ಸಾಧ್ಯವಾದರೆ ತಿದ್ದುಕೊಳ್ಳಿ.

ರವಿನಂದನ ಕೇಳಿದರೆ ಪೇಳಲು ಸರಕೊಂದಿಷ್ಟಾದರೂ ಇಲ್ಲವಲ್ಲ - ಹ್ಯಾಂಗೆ ಮಾಡಲಯ್ಯಾ ಕೃಷ್ಣ ಪೋಗುತಿದೆ ಈ ಆಯುಷ್ಯ (ರವಿನಂದನ ಎಂದರೆ ಯಮದೇವರು). ಹ್ಯಾಂಗೆ ಉದ್ಧಾರ ಮಾಡಿಯಾನೋ ಶ್ರೀಹರಿ ಹೀಂಗೆ ಕಾಲಾವ ಕಳಿಯುವವಗೇ. - ದಾಸವಾಣಿ.

## ಗಡಿಬಿಡಿ ಗೊಗ್ಗಯ್ಯನ ಪುರಾಣ

ಎ, ಬಿ, ಸಿ, ಡಿ. ಗಡಿಬಿಡಿ - ಕನ್ನಡ ಗಡೀ ಬಿಡಿ.
ಮೊದಲು ಎ, ಬಿ, ಸಿ, ಡಿ ಎಬ್ಬಿಸಿ ಬಿಡಿ, ಮೊದಲು ಕನ್ನಡ ಕಲಿಸೇಬಿಡಿ.
ಕನ್ನಡ ಕಲಿಸಿ, ಇಂಗ್ಲೀಷ್ ತಿಳಿಸಿ, ಕನ್ನಡ ಉಳಿಯಿತು, ಇಂಗ್ಲೀಷೂ ಬಂತು.

ಮಂಗಳಂ

ಮಂಗಳಂ ಕೌಸಲೇಂದ್ರಾಯ ಮಹನೀಯ ಗುಣಾತ್ಮನೇ
ಚಕ್ರವರ್ತಿ ತುನೂಜಾಯ ಸಾರ್ವಭೌಮಾಯ ಮಂಗಳಂ

ತತ್ರತತ್ರಸ್ಥಿತೋ ವಿಷ್ಣುಃ ತತ್ತತ್‌ಚ್ಛಕ್ತಿ ಪ್ರಭೋಧಯನ್
ಏಕಏವ ಮಹಾಶಕ್ತಿಃ, ಕುರುತೇ ಸರ್ವಮಂಜಸಾ

ತದ್ರೂಪ, ತನ್ನಾಮ, ತತ್ತೇಜ, ತದ್ಭಿನ್ನ, ತಂ ಶ್ರೀನಿವಾಸಂ ನಮಾಮಿ

# ಅ ಕಾರದಿಂದ ಕ್ಷ ಕಾರದವರೆಗೆ ಪ್ರತಿಪಾದಿತ 51 ಭಗವದ್ರೂಪಗಳು (ಮಾತೃಕನ್ಯಾಸ)

ಪ್ರಮಾಣ : ತಂತ್ರಸಾರ ಛಲಾರಿವ್ಯಾಖ್ಯಾನ

51 ರೂಪಗಳು ಮೊದಲನೆಯ ಚಿತ್ರದಂತೆಯೇ ಇರುತ್ತದೆ. ವ್ಯತ್ಯಾಸ ಇರುವ ನಾಲ್ಕು ರೂಪಗಳನ್ನು ಪ್ರತ್ಯೇಕವಾಗಿ ತೋರಿಸಿದೆ.

